# ಗರುಡ ಮಚ್ಚೆ

(ಸಾಮಾಜಿಕ ಕಾದಂಬರಿ)

ಪದ್ಮಾ ಶ್ರೀಧರ್

ಚೈತ್ರ ಪ್ರಕಾಶನ

ನೆಲೆ, ನಂ. 22, 6ನೇ ಅಡ್ಡರಸ್ತೆ, ಕಾಮಾಕ್ಯ ಬಡಾವಣೆ,
ಬೆಂಗಳೂರು – 560 085

*Garudamacche (Kannada)*: a social novel by
Smt. Padma Shridhar; published by Chaitra Prakashana, Nele, No. 22,
6th Cross, Kamakya Layout, Bangalore - 560 085, India.

First print : 2012


ಸಗಟು ಮಾರಾಟಗಾರರು

ವಸಂತ ಪ್ರಕಾಶನ
# 360, 10ನೇ 'ಬಿ' ಮುಖ್ಯರಸ್ತೆ, 3ನೇ ಬ್ಲಾಕ್,
ಜಯನಗರ, ಬೆಂಗಳೂರು - 560 011.
ದೂರವಾಣಿ : 080-22443996
email : vasantha_prakashana @rediffmail.com

ಪ್ರಥಮ ಮುದ್ರಣ : 2012
ಉಪಯೋಗಿಸಿದ ಕಾಗದ : 70 ಜಿಎಸ್ಎಂ ಮ್ಯಾಪ್‌ಲಿಥೊ
ಪುಟಗಳು : 234 ಬೆಲೆ : ರೂ. 140

ಅಕ್ಷರ ಜೋಡಣೆ : ಪ್ರಶಾಂತ್ ಎಂಟರ್‌ಪ್ರೈಸಸ್
ಮುದ್ರಣ : ಸ್ಟ್ಯಾಂಡರ್ಡ್ ಪ್ರಿಂಟರ್ಸ್

# ಮುನ್ನುಡಿ

'ಗರುಡ ಮಚ್ಚೆ' ಒಂದು ಸಾಮಾಜಿಕ ಕಾದಂಬರಿ. 'ಬಾಡಿಗೆ ತಾಯಿ' ಈ ಕಾದಂಬರಿಯ ಕಥಾವಸ್ತು... ಬಾಡಿಗೆ ತಾಯಿಯ ಆಗಮನ, ವೈಜ್ಞಾನಿಕ ಸೃಷ್ಟಿಯಲ್ಲಿ ಒಂದು ಪವಾಡ. ಮಕ್ಕಳಿಲ್ಲದ ದಂಪತಿಗಳಿಗೆ ವರ. ಆದರೆ ಕೆಲವೊಮ್ಮೆ ಸ್ವಾರ್ಥಕ್ಕೆ ನಾಂದಿ.... ವೇದ ಪುರಾಣಗಳ ಕಾಲದಿಂದಲೂ, ಕೃತಕ ವಿಧಾನದಿಂದ ಮಕ್ಕಳನ್ನು ಸೃಷ್ಟಿಸುವ ಅನೇಕ ಉದಾಹರಣೆಗಳನ್ನು ಕಂಡಿದ್ದೇವೆ. ಅಲ್ಲಿ ಅನೇಕ ವಿಧಗಳೂ ಇವೆ. ಈ ಯುಗದಲ್ಲಿ ವಿಜ್ಞಾನಿಗಳು ಪ್ರಯೋಗವನ್ನು ನಡೆಸಿ, ಪ್ರನಾಳ ಶಿಶುಗಳನ್ನು ಸೃಷ್ಟಿಸಿ , ಯಶಸ್ಸನ್ನು ಗಳಿಸಿ ಸಮಾಜಕ್ಕೆ ಒಂದು ಕೊಡುಗೆಯನ್ನೇ ನೀಡಿದ್ದಾರೆ. ಪ್ರಪಂಚದ ಜನಸಂಖ್ಯೆಯಲ್ಲಿ ಎಷ್ಟೋ ಮಕ್ಕಳು ಬಾಡಿಗೆ ತಾಯಿಗೆ ಹುಟ್ಟಿದವರಾಗಿರಬಹುದು. ಆ ಹಿನ್ನೆಲೆಯಲ್ಲಿ ಯೋಚಿಸುವಾಗ, ಅನೇಕ ಜಿಜ್ಞಾಸೆಗಳು ಕಾಡುತ್ತವೆ. ಪ್ರಾಕೃತಿಕವಾಗಿ ಹುಟ್ಟಿದ ಮಕ್ಕಳೇ ಕೆಲವೊಮ್ಮೆ ಜನ್ಮದಾತರಿಗೆ ಸವಾಲನ್ನೆಸೆಯುತ್ತಾರೆ. 'ನಾವೇನು ಹುಟ್ಟೀವಿ ಅಂತ ಕೇಳ್ಕೊಂಡಿದ್ವೇ ? ನಾವು ಹುಟ್ಟಿದ್ದು ನಮ್ಮ ತಪ್ಪೇ ...? ನಾವು ಹುಟ್ಟದೇ ಇದ್ದಿದ್ರೆ , ಯಾವ ನಷ್ಟವೂ ಇರ್ಲಿಲ್ಲ. ಇತ್ಯಾದಿ ಇತ್ಯಾದಿ...'

ಹುಟ್ಟು ಒಂದು ಸೃಷ್ಟಿ. ಕೆಲವೊಮ್ಮೆ ಆಕಸ್ಮಿಕ. ಆದರೆ ದೇವರ ನಿಯಾಮಕ. ಹಾಗಾಗಿ ಕೃತಕ ವಿಧಾನದಿಂದ ಮಕ್ಕಳು ಸೃಷ್ಟಿಗೊಂಡರೂ, ಅದೂ ನಿಯಾಮಕವೇ. ಆದರೆ ಎಲ್ಲಾ ವಿಷಯಗಳಲ್ಲೂ ಸಮಸ್ಯೆಗಳು ಇರುವಂತೆ, ಇದು ಹುಟ್ಟಿನ ಮೊದಲು ಅಥವಾ ಹುಟ್ಟಿನ ನಂತರ ಕತೆಗಳನ್ನೇ ಸೃಷ್ಟಿಸುತ್ತದೆ.

ಈ ನಿಟ್ಟಿನಲ್ಲಿ ಕಲ್ಪನೆಯ ಕಲ್ಲಿನಲ್ಲಿ ಕೆತ್ತಿ ಸೃಷ್ಟಿಸಿದ ಕತೆ ಇದು. ಇದರಲ್ಲಿ ಯಾವ ಉದ್ದೇಶವೂ ಇಲ್ಲ, ಉಪದೇಶವೂ ಇಲ್ಲ, ಕೇವಲ ಓದುಗರಿಗಾಗಿ ಬರೆದ ಚಿತ್ರಣ.

ಈ ಕಾದಂಬರಿಯನ್ನು ಪ್ರಕಾಶಿಸುವ ಹೊಣೆಯನ್ನು ಹೊತ್ತಿರುವ ಚೈತ್ರ ಪ್ರಕಾಶನದ ಸದಸ್ಯರೆಲ್ಲರಿಗೂ ನನ್ನ ಕೃತಜ್ಞತೆಗಳು. ಹಾಗೆಯೇ ಓದುಗರಿಗೆ ಮತ್ತು ಪುಸ್ತಕ ರೂಪುಗೊಳ್ಳಲು ಕಾರಣರಾದ ಎಲ್ಲರಿಗೂ ನನ್ನ ವಂದನೆಗಳು.

**ಪದ್ಮಾ ಶ್ರೀಧರ್**

"ಏನೇ ಹೇಮಾ? ಒಬ್ಬಳೇ ಬಂದ್ಯಾ? ಭುಜೀ ಎಲ್ಲಿ?" ತಾಯಿ ಕೇಳಿದಳು.

"ಇಲ್ಲಮ್ಮ ಅವನು ಮನೆಗೆ ಹೋದ" ಎಂದು ನಿರುತ್ಸಾಹದ ಧ್ವನಿಯಲ್ಲಿ ಹೇಳಿದಾಗ ತಾಯಿ ಮಗಳ ಮುಖವನ್ನೇ ದಿಟ್ಟಿಸಿದಳು.

"ಏನೇ, ಇಬ್ಬರೂ ಜಗಳ ಆಡಿದ್ರಾ?... ಅವನಿಗೆ ಕೋಪ ಬಂದಿದೆಯಾ?..."

"ಇಲ್ಲಮ್ಮಾ...ನಾನ್ಯಾಕೆ ಜಗಳ ಆಡ್ಲಿ?" ಎನ್ನುತ್ತಾ ಮಲಗುವ ಕೋಣೆಗೆ ನಡೆದಳು.. ಅಲ್ಲಿ ನೆಲದ ಮೇಲೆ ಚಾಪೆಯನ್ನು ಹಾಸಿಕೊಂಡು ಮಲಗಿದ್ದ ಪಲ್ಲವಿಯನ್ನು ಕಂಡಳು. ಎಷ್ಟು ಹಾಯಾಗಿ ನಿದ್ರಿಸುತ್ತಿದಾಳೆ. ಅವಳ ಬಗ್ಗೆ ಅಸೂಯೆ ಮೂಡಿತು. ತನ್ನ ಮನಸ್ಸು ಕಲಕಿ ಹೋಗಿದೆ. ಅದಕ್ಕೆ ಕಾರಣ ತಾನೇ. ಭುಜಂಗನಿಗೆ ಎಲ್ಲವನ್ನೂ ಹೇಳಿಬಿಟ್ಟೆ ಎಂಬ ನಿರಾಳ ಒಂದು ಕಡೆ ಆದರೆ, ಏನನ್ನೋ ಕಳೆದುಕೊಂಡೆ ಎಂಬ ನಿರಾಶ ಭಾವ. ತನ್ನ ಮಂಚದ ಮೇಲೆ ಮೈ ಚೆಲ್ಲಿ ಮಲಗಿ, ತಾರಸಿಯನ್ನು ದಿಟ್ಟಿಸಿದಳು. ಪಲ್ಲವಿಯ ನಿವಿರಾದ ಉಸಿರಾಟ ಕೇಳಿಸುತ್ತಿತ್ತು. ಮಗ್ಗುಲಾಗಿ, ಗೋಡೆಗೆ ಮುಖ ಮಾಡಿ ಮಲಗಿದಳು. ಪಲ್ಲವಿ ತನ್ನ ಚಿಕ್ಕಮ್ಮನ ಮಗಳು? ಈವರೆಗೆ ಇವಳ ಹೆಸರನ್ನೇ ಕೇಳಿರಲಿಲ್ಲ. ಎಲ್ಲಿದ್ದಳೋ?..ಹೇಗಿದ್ದಳೋ...ಈಗ ಇಲ್ಲಿ ಅಜ್ಞಾತವಾಗಿರಲು ಬಂದಿದಾಳೆ. ಏನು ಸಮಸ್ಯೆಯೋ! ನನಗ್ಯಾಕೆ? ನನ್ನ ಸಮಸ್ಯೆಯೇ ಸಾಕಷ್ಟಿದೆ. ಭುಜಂಗನನ್ನು ತಾನು ದೂರ ಮಾಡಿದ್ದು, ಅಮ್ಮನಿಗೆ ತಿಳಿದರೆ ಏನನ್ನಿಸಬಹುದು? ಈಗಲೇ ಅಮ್ಮನಿಗೆ ಹೇಳುವುದು ಬೇಡ ಅಂತ ಭುಜಿ ಹೇಳಿದ.. ಭುಜಿಗೆ ಬೇಸರವಾಗಿರಬಹುದೆ?... ಹಾಗೇನೋ ಹೇಳಿದ. ಆದರೆ ಪಲ್ಲವಿಯೊಡನೆ ಸಲುಗೆಯಿಂದ ಇದಾನೆ. ಬೇಗ ಬೇಸರ ಮಾಯವಾಗಬಹುದು.. ಇದಕ್ಕೇ ತಾನೇ ಕಾರಣ?... ಆದರೆ ತಪ್ಪು ನನ್ನದಲ್ಲ....ಆದರೆ ಪರಿಸ್ಥಿತಿ ಹಾಗಿದೆ....ನಿಟ್ಟುಸಿರು ಹೊರ ಬಂತು. ಬಾಲ್ಯದ ದಿನಗಳು ನೆನಪಾದವು.

ತಾನು ಅತ್ತೇ...ಅತ್ತೇ ಅಂತ, ಅತ್ತೆಯ ಮನೆಗೆ ಓಡಿ ಹೋಗುತ್ತಿದ್ದುದು....ಅಮ್ಮ ಬೈದಾಗ, ಅತ್ತೆಯ ಮನೆಯಲ್ಲಿ ಬಚ್ಚಿಟ್ಟುಕೊಳ್ಳುತ್ತಿದ್ದುದು.. ತನಗಾಗಿ ಭುಜಂಗ ಸುಳ್ಳು ಹೇಳುತ್ತಿದ್ದುದು. ಪಾಪ, ಭುಜಂಗ ಎಷ್ಟು ಒಳ್ಳೆಯವನು?... ತಾನು ಹೀಗೆ ಅವನಿಗೆ ಬೇಸರ ಮಾಡಬಾರದಾಗಿತ್ತು...ಇದುವರೆಗೂ ಅವನನ್ನು ಕಾಯಿಸಿದೆ..ತನಗೆ ತಿಳುವಳಿಕೆ ಬಂದಾಗಿನಿಂದ

ಭುಜಂಗನ್ನ ತನ್ನ ಗಂಡ ಅಂತ ಎಲ್ಲರೂ ಹೇಳಿ ತಮಾಷೆ ಮಾಡುತ್ತಿದ್ದುದು ನೆನಪಿಗೆ ಬಂತು...ನಾಚಿಕೊಂಡು ಕೈಗಳಿಂದ ಮುಖವನ್ನು ಮುಚ್ಚಿಕೊಳ್ಳುತ್ತಿದ್ದಳು. ಅವನು ನಾಚಿಕೊಂಡು, ಹಿತ್ತಲಿಗೋ, ಕೊಟ್ಟಿಗೆಗೋ ಓಡಿ ಹೋಗುತ್ತಿದ್ದ. ಕ್ರಮೇಣ ಆ ಸಂಕೋಚ ದೂರವಾಗಿತ್ತು. ಸ್ಕೂಲಿಗೆ ಒಟ್ಟಿಗೇ ಹೋಗಿ ಬರುತ್ತಿದ್ದಳು. ಅವನನ್ನು ಸತಾಯಿಸಿದರೆ ಅಜ್ಜಿ ಬೈಯುತ್ತಿತ್ತು. ಮುಂದೆ ಅವನು ನಿನ್ನ ಗಂಡನಾಗೋನು ಮರ್ಯಾದೆ ಕೊಡುವುದನ್ನು ಕಲಿತ್ಕೋ ಎಂದು ರೇಗುತ್ತಿತ್ತು. ಈಗ ಈ ವಿಷಯ ಅಜ್ಜಿಗೆ ತಿಳಿದರೇ.. ಅತ್ತೆಗೆ ತಿಳಿದರೇ...?

ಭುಜಂಗ ಬಿ.ಎಸ್ಸಿ. ಪಾಸು ಮಾಡಿಕೊಂಡು, ಬೇರೆ ಕೆಲಸಕ್ಕೆ ಸೇರಿಕೊಳ್ಳದೇ ತೋಟ ಗದ್ದೆಗಳ ಕಡೆ ಗಮನಕೊಟ್ಟ. ತಾನು ಪಿ.ಯು.ಸಿ.ಗೆ ಬರುವ ವೇಳೆಗಾಗಲೇ, ತಾನು ತುಂಬಾ ಓದಬೇಕು, ಹೆಸರುಗಳಿಸಬೇಕೆಂಬ ಹಂಬಲ ಹೆಚ್ಚಾಗತೊಡಗಿತ್ತು. ಮೆಡಿಕಲ್ ಕಾಲೇಜಿಗೆ ಸೇರುವ ಸಮಯ ಬಂದಾಗ, ಅಮ್ಮ ವಿರೋಧಿಸಿದ್ದಳು, ಭುಜಂಗ ಅಡ್ಡ ಗೋಡೆಯ ಮೇಲೆ ದೀಪವಿಟ್ಟಂತೆ ಮಾತನಾಡಿದ್ದ.

"ನಿನ್ನ ಕೈಲಿ ಆಗುತ್ತೇನೇ? ಡಾಕ್ಟರಾಗೋದು ಸುಲಭವಲ್ಲ" ಎಂದು ನಗೆಯಾಡಿದ್ದ.

"ನಿಂಗ್ಯಾಕೆ ಹೊಟ್ಟೆ ಉರಿ? ನಿನ್ನ ಹೆಂಡ್ತಿಯಾಗೋಳು ಡಾಕ್ಟರಾಗೋದು ನಿನಗಿಷ್ಟವಿಲ್ವಾ?.." ವ್ಯಂಗ್ಯವಾಗಿ ಕೇಳಿದ್ದಳು.

"ಹಾಗಲ್ವೇ ಮಹಾರಾಯಿತಿ.. ನೀನು ಏನು ಬೇಕಾದ್ರೂ ಆಗು...ಆದರೆ ಈ ಊರನ್ನು ಅಮ್ಮನ್ನ ಅಪ್ಪನ್ನ ಮರೀಬೇಡ..."

"ನಿನ್ನನ್ನು ಮರೆತರೆ ಪರವಾಗಿಲ್ವಾ?" ತಮಾಷೆ ಮಾಡಿದ್ದಳು.

"ಮರೆತರೆ ನಿಂಗೇ ನಷ್ಟ. ನನ್ನಂಥ ಒಳ್ಳೆ ಗಂಡ ಎಲ್ಲಿ ಸಿಗ್ತಾನೆ?"

"ನೀನೇನೋ ಒಳ್ಳೆಯವನು.. ಆದರೆ ಒಳ್ಳೆಯ ಗಂಡ ಹೌದೋ ಅಲ್ವೋ ಗೊತ್ತಿಲ್ಲ, ಅದನ್ನು ಈಗ್ಲೇ ಹೇಗೆ ಹೇಳ್ಲೀ?... ನಂಗೋಸ್ಕರ ಕಾಯ್ತೀಯ ಅಲ್ವಾ?..." ನಾಚಿಕೆಯನ್ನು ಬಿಟ್ಟು ಕೇಳಿದ್ದಳು.

"ಪಾಪ, ಅವನು ನಂಗೋಸ್ಕರ ಕಾಯ್ತಾನೇ ಇದಾನೆ.. ನಾನು ಅವನಿಗೆ ತಕ್ಕವಳಲ್ಲ. ನನ್ನ ಆಸೆ ಆಕಾಂಕ್ಷೆಗಳೇ ಬೇರೆ.. ಈ ಊರ್‍ನಲ್ಲಿದ್ದುಕೊಂಡು, ತಾನು ಹೆಸರು ಗಳಿಸುವುದು ಹೇಗೆ?.. ಅಲ್ಲದೇ ತಾನು ಗಿರೀಶನನ್ನು ಒಲಿದುದ್ದಾಗಿತ್ತು.. ಯಾವಾಗ ಆ ಮಾಯೆಗೆ ಸಿಲುಕಿದೆನೋ ತನಗೇ ತಿಳಿಯದು.. ತಾವಿಬ್ಬರೂ, ಪರಿಚಯವಾದ ಕೆಲವೇ ಸಮಯದಲ್ಲಿ ನಿಕಟವಾದೆವು.. ಅಮ್ಮನಿಗೆ ಈ ವಿಷಯ ತಿಳಿದರೆ ಮನೆಯಿಂದ ಹೊರಕ್ಕೆ ಹಾಕಬಹುದು. ಏನಾದ್ರೂ ಆಗಲಿ.. ಮುಖ್ಯವಾಗಿ ಭುಜಂಗನಿಗೆ ತಿಳಿಸಿದ್ದಾಗಿದೆ.. ಇನ್ನು ನನಗೆ ಅಳುಕಿಲ್ಲ ಎಂದುಕೊಂಡು ಕಣ್ಣು ಮುಚ್ಚಿ ನಿದ್ರಿಸಲು ನೋಡಿದಳು. ಆದರೆ ನಿದ್ದೆ ಬರುವಂತಿರಲಿಲ್ಲ.

"ಹೇಮಾ ನಿದ್ದೆ ಬಂತೇನೇ?.." ಬಾಗಿಲಲ್ಲಿ ನಿಂತು ವೈದೇಹಿ ಕೇಳಿದ್ದಳು.

"ಇಲ್ಲಮ್ಮ ಯಾಕೆ?" ಇತ್ತ ತಿರುಗಿದಳು.

"ನಾನು, ಅತ್ತಿಗೆಯನ್ನು ಮಾತನಾಡಿಸ್ಕೊಂಡು ಬರ್ತೀನಿ. ನಿಮ್ಮಪ್ಪ ಎದ್ದರೆ, ನನ್ನನ್ನು ಕರಿ"

ಎಂದು ಹೇಳಿ ಅವಳು ಮುಂಬಾಗಿಲನ್ನು ಎಳೆದುಕೊಂಡದ್ದು ಕೇಳಿಸಿತ್ತು. ಎದ್ದು ಹೊರ ಬಂದು ಕೈಯಲ್ಲಿ ಒಂದು ವೈದ್ಯಕೀಯ ವಿಷಯದ ಪುಸ್ತಕವನ್ನು ಹಿಡಿದು ಕುಳಿತಳು.

ಸ್ವಲ್ಪ ಹೊತ್ತಿನ ನಂತರ ಪಲ್ಲವಿ ಎದ್ದು ಬಂದಳು. "ಯಾಕೋ ತುಂಬಾ ತಲೆ ನೋಯ್ತಿದೆ. ನೋವು ಕಡಿಮೆಯಾಗಲು ಏನಾದ್ರೂ ಮಾತ್ರೆ ಇದೆಯಾ?" ಕೇಳಿದಳು.

"ನನ್ಹತ್ರ ಯಾವುದೂ ಇಲ್ಲ. ಅಮ್ಮ ಎಲ್ಲಾದ್ರೂ ಇಟ್ಟಿರಬಹುದು. ಅವಳು ಮನೇಲಿಲ್ಲ ಬಂದ್ಮೇಲೆ ಕೊಡ್ತಾಳೆ.. ಜ್ವರ ಬಂದಿರುವ ಹಾಗಿದೆ. ಕಣ್ಣೆಲ್ಲಾ ಕೆಂಪಗಿದೆ."

"ಇರಬಹುದು. ಸ್ವಲ್ಪ ಚಳಿಯೂ ಆಗ್ತಿತ್ತು. ಎಂದೂ ಈ ಹೊತ್ನಲ್ಲಿ ಮಲಗಿಲ್ಲ ನಾನು..."

"ತೊರೆಯ ಹತ್ತಿರ ಹೋಗಿದ್ರಂತೆ, ನೀರಿಗೆ ಇಳಿದಿದ್ರಾ?..."

"ಇಲ್ಲ, ನಂಗೆ ಭಯ...ಅಲ್ಲದೇ ಅಲ್ಲಿ ಹಾವುಗಳು ಹರಿದಾಡುತಿದ್ವು..."

"ಹಾವುಗಳಾ!...ಇಲ್ಲಿ ಅಪರೂಪವೇನಲ್ಲ.. ಅಲ್ಲದೇ ಭುಜಂಗನ್ನ ಕಂಡ್ರೆ ಅವು ಹೆದರಿ ದೂರ ಹೊರಟು ಹೋಗುತ್ವೆ.. ಅವನಿಗೆ ಗರುಡ ಮಚ್ಚೆ ಇದೆ.."

"ಹೂಂ, ಹಾಗಂತ ಹೇಳಿದ್ರು..."

"ತೋರ್ಸಿದ್ನಾ?..." ಕೆಟ್ಟ ಕುತೂಹಲದಿಂದ ಕೇಳಿದಳು.

"ಇಲ್ಲ...ನೀವು ನೋಡಿದೀರಾ!..."

"ಹೂಂ...ಚಿಕ್ಕೋನಾಗಿದ್ದಾಗ, ರಸ್ತೇಲಿ ಎಲ್ಲಾದ್ರೂ ಹಾವನ್ನು ಕಂಡ್ರೆ, ತಕ್ಷಣ ಅದಕ್ಕೆ ತನಗಿದ್ದ ಮಚ್ಚೆಯನ್ನು ತೋರಿಸಿ ಹೆದರಿಸ್ತಿದ್ದ...ಈಗ ಎಷ್ಟೋ ವರ್ಷಗಳಾಗಿ ಹೋಯ್ತು. ಮಚ್ಚೆಯೂ ಅಗಲವಾಗಿರಬಹುದು...ಆದರೆ ಈಗ ಅವನು ಯಾರಿಗೂ ತೋರಿಸುಲ್ಲ. ದೊಡ್ಡೋನಾಗಿದಾನಲ್ಲ, ನಾಚ್ಕೋತಾನೆ..."

"ಗರುಡ ಮಚ್ಚೆ ಇದ್ದರೆ ಹಾವು ನಿಜಕ್ಕೂ ಹೊರಟು ಹೋಗುತ್ತಾ?.."

"ಹಾವಿಗೆ ಹೆದರುವಂತಿದೆ... ಇನ್ನುಂದೆ ಅಲ್ಲೆಲ್ಲಾ ಹೋಗ್ಲೇ ಬೇಡಿ...ಊರಿಗೆ ಯಾವಾಗ ವಾಪಸ್ಸು ಹೋಗ್ತೀರಿ?"

"ಏನೋ ಗೊತ್ತಿಲ್ಲ..." ಅಷ್ಟರಲ್ಲಿ ವೈದೇಹಿ ಹಿಂತಿರುಗಿದ್ದಳು. ಅವಳ ಜೊತೆಯಲ್ಲಿ ಭುಜಂಗನೂ ಇದ್ದ.

"ಅಮ್ಮ ಜ್ವರಕ್ಕೆ ಮಾತ್ರೆ ಇದ್ದರೆ ಕೊಡು...ಇವರಿಗೆ ಜ್ವರ ಬಂದಿದೆ."

"ಯಾರಿಗೆ ಜ್ವರ?" ಎಂದು ಕೇಳುತ್ತಾ ಭುಜಂಗ ಒಳಕ್ಕೆ ಬಂದ."

ಹೇಮಾ ಪುಸ್ತಕದೊಳಗೆ ತಲೆಯನ್ನು ತೂರಿಸಿದಳು. "ಪಲ್ಲವಿಗೆ ಜ್ವರವಂತೆ ತೊರೇಲಿ ಇಳಿದಿದ್ಲೇನು?..." ವೈದೇಹಿ ಕೇಳಿದಳು. ಭುಜಂಗ ಹೇಮಳ ಬಳಿಗೆ ಬಂದ.

"ಹೇಮಾ ಇವರನ್ನು ಸ್ವಲ್ಪ ಚೆಕ್ ಮಾಡು. ಏನಾಗಿದೆ ಅಂತ ಗೊತ್ತಾಗುತ್ತೆ"

"ಅಂಥಾದ್ದೇನಾಗಿಲ್ಲ...ಅಮ್ಮ ಮಾತ್ರೆ ಕೊಡ್ತಾಳೆ, ಊಟದ ಹೊತ್ತಿಗೆ ಸರಿ ಹೋಗ್ತಾರ."

"ಅತ್ತೇ, ಮನೇಲಿ ಮಾತ್ರೆ ಇಲ್ವಾ! ಮೆಡಿಕಲ್ ಸ್ಟೋರ್ಸ್‌ಗೆ ಹೋಗಿ ಬರ್ತೀನಿ."

"ಹೂಂ, ಹಾಗೇ ಮಾಡು, ಎಲ್ಲಿಟ್ಟಿದೀನೋ ಗೊತ್ತಿಲ್ಲ."

"ಪಲ್ಲವಿ ಬರ್ತೀರ ಡಾಕ್ಟರ ಹತ್ರ ಕರ್ಕೊಂಡು ಹೋಗ್ತೀನಿ.." ಹೇಮಾ ನಕ್ಕಳು.

"ಇಲ್ಲೇ ಇದಾಳಲ್ಲೋ ಡಾಕ್ಟರು..."

"ಅವಳು ಇನ್ನು ಅರ್ಧ ಡಾಕ್ಟರು, ನಂಬೋದ್ಹೇಗೆ?"

"ತಲೆ ನೋವು ಜ್ವರಕ್ಕೆ ಮಾತ್ರೆ ಕೊಡಿ ಅಂತ ಅಂಗಡೀಲಿ ಕೇಳು. ಕೊಡ್ತಾರೆ."

"ನೋಡಿದ್ರಾ ಅತ್ತೇ? ಎಷ್ಟು ಸಲೀಸಾಗೆ ಮಾತಾಡ್ತಾಳೆ. ಜವಾಬ್ದಾರೀನೇ ಇಲ್ಲ." ಪಲ್ಲವಿಗೆ ಅವರುಗಳ ಸಂಭಾಷಣೆ ಬೇಸರವನ್ನು ಹುಟ್ಟಿಸಿತ್ತು. ರೂಮಿಗೆ ಹೋಗಿ ಮಲಗಿದಳು. ಭುಜಂಗ, "ಮಾತ್ರೆಯ ಹೆಸರನ್ನಾದ್ರೂ ಹೇಳ್ತೀಯಾ" ಎಂದು, ಅವಳ ಬಳಿ ಹೆಸರನ್ನು ತಿಳಿದುಕೊಂಡು ಹೊರಟ.

ಹೇಮಾ ತಾಯಿಯ ಕಡೆ ನೋಡಿದಳು. ವೈದೇಹಿ ಪೆಚ್ಚಾಗಿದ್ದಳು.. ಅವನು ಬೇಗ ಹಿಂತಿರುಗಿದ್ದ. ವೈದೇಹಿಯ ಕೈಯಲ್ಲಿ ಮಾತ್ರೆಗಳನ್ನು ಕೊಟ್ಟ. "ಅತ್ತೇ..ಈಗ್ಲೇ ಒಂದು ಮಾತ್ರೇನ ಕೊಡ್ಬೇಕಂತೆ."

"ನೀನ್ಯಾಕೆ ಇಷ್ಟು ಗಾಬರಿಯಾಗಿದೀಯೋ.. ಸಣ್ಣ ಜ್ವರಕ್ಕೆ ಯಾರಾದ್ರೂ ಹೆದರ್ತಾರಾ?"

"ಹಾಗಲ್ಲ ಅತ್ತೇ, ನಾನಲ್ವಾ ಕರ್ಕೊಂಡು ಹೋಗಿದ್ದು. ಅಲ್ಲದೇ ಇವರು ನಿಮ್ಮ ಅತಿಥಿ...ಜ್ವರ ಬಂದು ಮಲಗಿ ಬಿಟ್ರೆ ನಿಮ್ಮ ತಂಗಿ ಏನಂದ್ಕೊಳ್ತಾರೆ?"

"ಪಲ್ಲವೀ, ಏಳು ಮಾತ್ರೇನ ನುಂಗು" ವೈದೇಹಿ ಕೊಟ್ಟ ಮಾತ್ರೆಯನ್ನು ಪಲ್ಲವಿ ನುಂಗಿದಳು.

"ಬೆಳಿಗ್ಗೆ ನಾನು ಊರಿಗೆ ಹೊರಡ್ಬೇಕು. ನಿನಗೆ ಕಷ್ಟವಿಲ್ದಿದ್ರೆ ನನ್ನನ್ನ ಬಸ್‌ಸ್ಟಾಂಡಿಗೆ ಬಿಡ್ತೀಯಾ?"

"ಏನೇ ಹೀಗೆ ಕೇಳ್ತೀಯಾ! ನಂಗೆ ಕಷ್ಟ ಆಗುತ್ತಾ?"

"ಯಾರಿಗ್ಗೊತ್ತು?"

"ನಾಳೇನೇ ಊರಿಗೆ ಹೊರಟು ಬಿಟ್ಯಾ! ಈ ಚಂದಕ್ಕೆ ಯಾಕೆ ಬರ್ಬೇಕಾಗಿತ್ತು?"

"ಏನೋ ಮುಖ್ಯವಾದ ವಿಷಯವನ್ನು ನನ್ನ ಫ್ರೆಂಡ್ ಹತ್ರ ಮಾತನ್ನಾಡ್ಬೇಕಾಗಿತ್ತು, ಬಂದಿದ್ದೆ. ಇನ್ಮೇಲೆ ನಾನು ಬರೋದೇ ಇಲ್ಲ..." ಭುಜಂಗನ ಕಡೆ ನೋಡಿದಳು.

"ಏನು ಮಾತೂಂತ ಆಡ್ತೀಯೋ? ಇಲ್ಲಿಗೆ ಬರದೇ ಇನ್ನೆಲ್ಲಿಗೆ ಹೋಗ್ತೀಯಾ?" ವೈದೇಹಿ ಸಿಟ್ಟಿನಿಂದ ಕೇಳಿದಾಗ ಭುಜಂಗ ಸಮಾಧಾನ ಹೇಳಿದ.

"ತಮಾಷೆ ಮಾಡ್ತಿದಾಳೆ ಅತ್ತೆ..ನೀವು ಏನೇನೋ ಅರ್ಥ ಮಾಡ್ಕೋತೀರಿ."

"ಹಾಗೇನಿಲ್ಲ, ನಂಗೂ ಅರ್ಥ ಆಗುತ್ತೆ. ಇವಳು ಮೊದಲಿನಂತಿಲ್ಲ. ಬದಲಾಗಿದಾಳೆ."

"ಹಾಗೇನಿಲ್ಲಮ್ಮ, ನಾನು ಹೇಗೇ ಇದ್ರೂ ನಿನ್ನ ಮಗಳೇ" ತಾಯಿಯ ಕೈಯನ್ನು ಹಿಡಿದಳು.

ಯಾಕೋ ಏನೋ ಮನಸ್ಸು ಕಸಿವಿಸಿಗೊಂಡಿತು. ತಾಯಿಗೆ ಆಘಾತವಾಗುತ್ತೆ ಅಂತ ತಿಳಿದೂ, ತಾನು ತಪ್ಪು ಮಾಡುತ್ತಿದೀನಿ. ಇದು ಸರಿಯಾ? ಎಂದು ಚಿಂತಿಸುವಂತಾಗಿತ್ತು.

* * *

ಹೇಮಾಳನ್ನು ಬಸ್‌ಗೆ ಹತ್ತಿಸಿ, ಭುಜಂಗ ಹಿಂತಿರುಗಿದ್ದ. ಸೀದಾ ಮನೆಯೊಳಕ್ಕೆ ಬಂದ ರೂಮಿನೊಳಕ್ಕೆ ಬಗ್ಗಿ ನೋಡಿದ. ಪಲ್ಲವಿ ಅಲ್ಲಿರಲಿಲ್ಲ.

"ಯಾಕೋ ಭುಜೀ...ನೀನೂ ಸಪ್ಪಗಿದೀಯ. ಹುಶಾರಾಗಿದೀಯ ತಾನೇ..." ಅತ್ತೆ ಪ್ರೀತಿಯಿಂದ ಅವನ ಹಣೆಯನ್ನು ಮುಟ್ಟಿ ಕೇಳಿದಾಗ, ಅವನು ಅವಳ ಕೈಗಳನ್ನು ಎತ್ತಿ ತನ್ನ ಕಣ್ಣುಗಳಿಗೊತ್ತಿಕೊಂಡ. ಕಣ್ಣೀರ ಹನಿ ಜಾರಿ ಕೈಗಳ ಮೇಲೆ ಬಿದ್ದಿತು.

"ಯಾಕೋ ಭುಜೀ..ಏನಾಯ್ತಪ್ಪಾ.. ಬಹಳ ಬೇಸರ ಮಾಡ್ಕೊಂಡಿರುವ ಹಾಗಿದೆ. ಹೇಮಾ ಏನಾದ್ರೂ ಅಂದ್ಲಾ? ಅವಳ ಮಾತಿಗೆ ಬೆಲೆ ಕೊಡ್ಬೇಡ ನೀನು.. ಡಾಕ್ಟರಾಗ್ತಿದೀನಿ ಅನ್ನೋ ಽಮಾಕು ಅವಳ್ಗೆ."

"ಇಲ್ಲ, ಅತ್ತೆ, ಅವಳು ಏನನ್ನೂ ಅನ್ನಲಿಲ್ಲ. ಏನೋ ವಿಷಯ ನೆನಪಿಗೆ ಬಂತು."

"ನಂಗೊತ್ತು, ಅವಳು ಒರಟಾಗಿ ಏನೋ ಆಡಿರಲೇ ಬೇಕು. ಅವಳ್ಗೆ, ನೀನು ಈ ಹುಡುಗಿಯ ಜೊತೆ ಸ್ನೇಹದಿಂದ ಇರುವುದು ಹಿಡಿಸಿಲ್ಲ, ಹೊಟ್ಟೆಯಲ್ಲಿ ಕಿಚ್ಚು ಎದ್ದಿದೆ. ಇನ್ನಾದರೂ ದೇವರು ಅವಳಿಗೆ ಮದುವೆಯಾಗುವ ಮನಸ್ಸನ್ನು ಕೊಡ್ಬೇಕು. ಆದಷ್ಟು ಬೇಗ ನಿಮ್ಮಬ್ಬರ ಮದುವೆ ನೆರವೇರುವಂತೆ ಮಾಡಪ್ಪಾ ತಿಮ್ಮಪ್ಪಾ" ದೇವರನ್ನು ಪ್ರಾರ್ಥಿಸಿದಳು. ಅವನು ಕ್ಷೀಣವಾಗಿ ನಕ್ಕ.

"ಅತ್ತೇ ಪಲ್ಲವಿ ಎಲ್ಲಿ? ಕಾಣ್ತಿಲ್ಲ?"

"ಇಲ್ಲೇ ಬಾವಿಯ ಕಟ್ಟೆ ಹತ್ರ ಕುಳಿತಿದ್ಲು.. ಎಲ್ಲಿ ಹೋದ್ಲೋ.. ಇದೊಂದು ವಿಚಿತ್ರ ಹುಡುಗಿ. ಆದಷ್ಟು ಬೇಗ ಇಲ್ಲಿಂದ ಹೋದ್ರೆ ಸಾಕಾಗಿದೆ.."

"ಯಾಕತ್ತೇ ಹೀಗೆ ಹೇಳ್ತೀರಿ?..ಏನೋ ತೊಂದರೇಲಿದಾಳೆ ಇಲ್ಲಿರ್ತಾಳೆ ಅಂತ ನೀವೇ ಹೇಳಿದ್ರಿ."

"ಮನೆಯ ಮಗಳು ಮನೆಯಿಂದ ಹೊರಗೆಲ್ಲೋ ಇದಾಳೆ. ಈ ಕಂಡೋರ ಮನೆಯ ಹುಡುಗಿ ಇಲ್ಲಿ ಹಾಯಾಗಿದಾಳೆ. ನೀನೇ ನೋಡಿದ್ಯಲ್ಲಾ.. ಹೇಮಾ ನೆನ್ನೆ ಬಂದ್ಲು, ಇವತ್ತು ವಾಪಸ್ಸು ಹೋದ್ಲು...ಈ ಹುಡುಗಿ ಇಲ್ಲಿಗೆ ಬಂದು ವಾರದ ಮೇಲಾಯ್ತು.. ಮಂದಾಕಿನಿ, ಇವಳನ್ನು ಇಲ್ಲಿ ಬಿಟ್ಟಿದೀನಿ ಅನ್ನೋದನ್ನೇ ಮರೆತು ಬಿಟ್ಟಿದಾಳೋ ಏನೋ?"

"ಮಂದಾಕಿನಿ ಅತ್ತೆಗೆ ಒಬ್ಬ ಮಗನೂ ಇರ್ಬೇಕು ಅಲ್ವಾ?..."

"ಹ್ಞೂಂ, ಇದಾನೆ, ಬೆಂಗಳೂರ್ನಲ್ಲಿ ಎಲ್ಲೋ ಕೆಲಸದಲ್ಲಿದಾನಂತೆ.. ಈ ಮಕ್ಕಳೋ ಹುಟ್ಟುವಾಗ ನಮ್ಮ ಮಕ್ಕಳು, ಬೆಳೆದ ಮೇಲೆ, ರೆಕ್ಕೆ ಪುಕ್ಕ ಬಂದ ಮರಿ ಹಕ್ಕಿಗಳ ಥರ...ತಮಗೆ ಅನ್ನಿಸಿದ ಕಡೆಗೆ ಹಾರಿ ಹೋಗ್ತಾರೆ." ಅತ್ತೆ ನಿಟ್ಟುಸಿರು ಬಿಟ್ಟಳು.

"ಅತ್ತೇ ನಿಮಗೆ ಇನ್ನು ನಾಲ್ಕಾರು ಮಕ್ಕಳಿರ್ಬೇಕಾಗಿತ್ತು...ಯಾರಾದ್ರೂ ಒಬ್ಬರಾದ್ರೂ ನಿಮ್ಮೊಂದಿಗೆ ಇರ್ತಿದ್ರು.."

"ಯಾರಿಗ್ಗೊತ್ತು!.. ಅದಕ್ಕೇ ಹೇಮಂಗೆ ಮದುವೇನ ಬೇಗ ಮಾಡಿದ್ರೆ, ಮನೆ ತುಂಬಾ ಮೊಮ್ಮಕ್ಕಳು ಓಡಾಡುತ್ವೆ.. ಆಡಿಸ್ಕೊಂಡು ಇರಬಹುದು ಅಂತ ಆಸೆ..." ಭುಜಂಗ ಈ ಮಾತಿಗೆ ಉತ್ತರಿಸಲಿಲ್ಲ.. ಗಂಭೀರನಾದ.

"ನೋಡಿದ್ಯಾ? ನಿನ್ನ ಮನಸ್ಸು ಕೆಟ್ಟಿದೆ.. ಘಟ್ಟಿಸಿ ಹೇಳ್ಬೇಕಪ್ಪಾ...ನೀನು ತಡ ಮಾಡಿದ್ರೆ ಬೇರೆ ಯಾರನ್ನಾದ್ರೂ ಮದುವೆಯಾಗ್ತೀನಿ ಅಂತ ಹೆದರಿಸ್ಬೇಕಾಗಿತ್ತು."

"ಹಾಗೆಲ್ಲಾ ಹೆದರಿಸುಕ್ಕೆ ಆಗುತ್ತಾ ಅತ್ತೇ!...ಅವಳು ಮುಂದೆ ಡಾಕ್ಟರಾಗೋಳು."

"ಅದೇ ತಪ್ಪು ನಾವುಗಳು ಮಾಡಿದ್ದು. ಮೆಡಿಕಲ್ ಕಾಲೇಜಿಗೆ ಸೇರಸ್ಲೇಬಾರದಾಗಿತ್ತು. ಹೋಂ ಸೈನ್ಸ್ ಕಾಲೇಜಿಗೆ ಸೇರಿಸಿದ್ರೆ, ಅಚ್ಚು ಕಟ್ಟಾಗಿ ಸಂಸಾರ ಮಾಡುವುದಾದ್ರೂ ತಿಳೀತಿತ್ತು."

"ಹೋಗ್ಲಿ ಬಿಡಿ ಅತ್ತೇ, ಜನಸೇವೆ, ಸಮಾಜಸೇವೆ ಮಾಡುವ ಯೋಗ ಅವಳಿಗಿದೆ.. ನೀವು ಅವಳ ಬಗ್ಗೆ ಹೆಮ್ಮೆ ಪಡ್ಬೇಕು."

"ಜನ ಸೇವೆ, ಹೆಮ್ಮೆ ಎಲ್ಲಾ ಬೇರೆ. ಆದರೆ ಈಚೀಚೆಗೆ ಅವಳ ಮಾತು ಕತೆಗಳಿಂದ ಅವಳು ನಮ್ಮ ಕೈ ಬಿಟ್ಟು ಹೋಗ್ತಿದಾಳೆ ಅಂತ ಅನ್ನಿಸುತ್ತೇ ಕಣೋ ಭುಜೀ.." ಅವನಿಗೆ ಅತ್ತೆಯ ವ್ಯಥೆ ಅರ್ಥವಾಗಿತ್ತು.. ಆದರೆ ನಿಮ್ಮ ಮಗಳು ಆಸೆಗೆ ಭಂಗ ತರುವ ಮಾರ್ಗದಲ್ಲಿ ಹೊರಟು ಹೋಗಿದಾಳೆ ಎಂದು ಹೇಳುವ ಮನಸ್ಸಾಗದೇ ತಡೆದುಕೊಂಡ.

"ಪಲ್ಲವಿ ಎಲ್ಲಿ ಹೋದ್ಲು ಅಂತ ನೋಡ್ಕೊಂಡು ಬರ್ತೀನಿ ಅತ್ತೆ.. ಹೊಸ ಜಾಗ, ದಾರಿ ತಪ್ಪಿದರೆ? ಆಮೇಲೆ ಹುಡುಕೋದು ಎಲ್ಲೀಂಥ?"

"ಅಲ್ಲಿ ಇಲ್ಲಿ ಅಲೀಬೇಡ ಅಂತ ಗದರಿಸಿ ಹೇಳು. ಏನೋ ಸಮಸ್ಯೆ, ನಾಲ್ಕು ಜನರ ಕಣ್ಣಿಗೆ ಬೀಳಬಾರದು ಅಂತ ಇಲ್ಲಿಗೆ ಬಂದಿರೋದು. ಇಲ್ಲಿ ಬೀದಿ ಬೀದಿ ಅಲೆಯೋದು." ಅತ್ತೆ ಪಲ್ಲವಿಯ ಮೇಲೆ ರೇಗಿದಾಗ ಬೇಸರವಾಗಿತ್ತು. ಹೇಮಳ ಮೇಲಿನ ಅಸಹನೆಯನ್ನು ಈ ಪಲ್ಲವಿಯ ಮೇಲೆ ತೀರಿಸಿಕೊಳ್ಳುತ್ತಿದಾಳೆಂದುಕೊಂಡ.. ಬೈಕನ್ನೇರಿ, ನಿಧಾನವಾಗಿ ಓಡಿಸಿದ. ರಸ್ತೆಯ ಎರಡೂ ಬದಿಗಳ ಕಡೆ ನೋಡುತ್ತಾ, ತೊರೆಯ ಬಳಿಗೆ ಬಂದ. ಬಂಡೆಯ ಮೇಲೆ ಕುಳಿತಿದ್ದ ಪಲ್ಲವಿಯನ್ನು ಕಂಡು ರೇಗಿತು. ಬೈಕನ್ನು ನಿಲ್ಲಿಸಿ, ಬಂಡೆಗಳನ್ನು ಏರಿ ಅವಳ ಬಳಿಗೆ ಬಂದ.

"ನಿಮಗೆ ಬುದ್ಧಿಗಿದ್ಧಿ ಇದೆಯೇನ್ರೀ? ಜ್ವರ ಬಂದಿದೆ. ಇಲ್ಲಿ ಬಂದಿದೀರಲ್ಲ. ಅತ್ತೆ ಗಾಬರಿಗೊಂಡಿದಾರೆ. ನಡೀರಿ ಮನೆಗೆ..."

"ಈಗ ಜ್ವರ ಇಲ್ಲ, ಮನೇಲಿ ಬೇಜಾರಾಗ್ತಿತ್ತು.. ಹಾಗೇ ಬಂದು ಬಿಟ್ಟೆ. ನೀವು ಹೋಗಿ, ನಾನು ಇಲ್ಲಿದೀನಿ ಅಂತ ಹೇಳಿ.. ನಾನು ನಿಧಾನವಾಗಿ ಬರ್ತೀನಿ."

"ನೀವು ಹಾಗೆಲ್ಲಾ ಒಬ್ಬೊಬ್ಬರೇ ತಿರುಗುವ ಹಾಗಿಲ್ಲ. ಅಲ್ಲದೇ ಈ ಜಾಗ ಹೊಸದು ಪರಿಚಯವಿಲ್ಲ, ಏಳಿ" ಎನ್ನುತ್ತಾ ಕೈ ಹಿಡಿದು ಎಳೆದ.

"ಹತ್ತು ನಿಮಿಷ ಕೂತಿರೋಕೆ ಬಿಡ್ತೀರಾ ಪ್ಲೀಸ್, ನಾನು ಏನನ್ನೋ ಯೋಚಿಸ್ತಿದೀನಿ."

"ಬಾವಿಯ ಕಟ್ಟೆಯ ಮೇಲೆ ಕುಳಿತು ಯೋಚಿಸಬಹುದು...ಅಂಥಾ ಗಾಢವಾದ ಯೋಚನೆ ಏನು?...ಯಾರು ನೆನಪಿಗೆ ಬಂದ್ರು?"

"ಹೇಮಾ ನೆನ್ನೆ ಬಂದರು. ಇವತ್ತು ಹೊರಟು ಹೋದ್ರು. ನನ್ನ ಹತ್ರ ಸರಿಯಾಗಿ ಮಾತನ್ನು ಆಡ್ಲಿಲ್ಲ. ನನ್ಮೇಲೆ ಕೋಪ ಬಂದಿತ್ತೇನೋ.."

"ಕೋಪವೂ ಇಲ್ಲ; ತಾಪವೂ ಇಲ್ಲ. ಅವಳ ಸ್ವಭಾವವೇ ಹಾಗೆ.. ಬಿಟ್ಬಿಡಿ..ಅಷ್ಟೇ.."

"ನನಗೆ ನೋವಾಯ್ತು ಭುಜಂಗ್.."

"ಅವಳ ಪರವಾಗಿ ನಾನು ಸಾರಿ ಕೇಳ್ತೀನಿ. ಈಗ ಏಳಿ ಅತ್ತೆ ಕಾಯ್ತಾ ಇದಾರೆ.."

"ನನ್ನನ್ನು ಬೆಂಗಳೂರಿನ ಬಸ್ಸಿಗೆ ಹತ್ತಿಸಿ ಬಿಡಿ. ನಾನು ವಾಪಸ್ಸು ಹೊರಟು ಹೋಗ್ತೀನಿ." ನನ್ನಿಂದ ಸುಮ್ಮನೆ ಎಲ್ರಿಗೂ ತೊಂದರೆಯಾಗ್ತಿದೆ."

"ಹಾಗಂತ ಯಾರು ಹೇಳಿದ್ರು! ಏನೇನೋ ಕಲ್ಪಿಸಿಕೊಳ್ಬೇಡಿ. ಹೋಗ್ತೀನಿ ಅಂತ ಹೇಳ್ಬೇಡಿ. ಪ್ಲೀಸ್ ನೀವೂ ಹೋಗ್ಬೇಡಿ" ಎಂದು ಹೇಳಿ ಅವಳ ಮಗ್ಗುಲಲ್ಲಿ ಕುಳಿತು ಅವಳ ಕೈಯನ್ನು ಹಿಡಿದ. ಅವಳು ಬೆದರಿ, ನಿಧಾನವಾಗಿ ಕೈಯನ್ನು ಬಿಡಿಸಿಕೊಂಡಳು. ಓರೆ ನೋಟವನ್ನು ಅವನ ಕಡೆ ಬೀರಿದಳು.

"ಹೌದು ಪಲ್ಲವಿ, ನಾನು ಒಂಟಿಯಾಗಿರಲು ಇಷ್ಟಪಡುವುದಿಲ್ಲ.. ನೀವು ಹೊರಟು ಹೋದ್ರೆ ನಾನು ಹೇಗಿರಲಿ!"

"ನಾನು ಒಂದಲ್ಲ ಒಂದು ದಿನ ಇಲ್ಲಿಂದ ಹೋಗೋಳೆ.. ಇಲ್ಲಿಯೇ ಹೇಗಿರಲಿ!"

"ಇಲ್ಲೇ ನನ್ನೊಂದಿಗೆ ಇದ್ದು ಬಿಡಿ..." ಅವಳು ಕಣ್ಣರಳಿಸಿ ನಕ್ಕಳು.

"ತಮಾಷೆಯಾಗಿದೆ ನಿಮ್ಮ ಮಾತು...ಯಾರಾದ್ರೂ ಕೇಳಿಸ್ಕೊಂಡ್ರೆ ನಗ್ತಾರೆ.."

"ತಮಾಷೆಯಲ್ಲ ಪಲ್ಲವಿ...ನನಗೆ ನೀವು ಮೆಚ್ಚಿಗೆಯಾಗಿದೀರಿ.." ಪಲ್ಲವಿ ನಗುವನ್ನು ನಿಲ್ಲಿಸಿ ಗಂಭೀರಳಾದಳು...

"ನೀವ್ಯಾಕೆ ಹೀಗೆಲ್ಲಾ ಮಾತಾಡ್ತಿದೀರಿ..? ನಿಮ್ಮ ಮದುವೆ ಗೊತ್ತಾಗಿದೆಯಲ್ಲ..

"ಹೌದು, ನನ್ನ ಮದುವೆ ಗೊತ್ತಾಗಿತ್ತು...ಈಗ ಮುರಿದು ಬಿದ್ದಿದೆ..."

"ಹಾಗಾದ್ರೆ ಹೇಮಾ?... ಅವರಿಗೆ ದ್ರೋಹ ಮಾಡ್ತೀರಾ?"

"ನಾನು ಅವಳಿಗೆ ದ್ರೋಹ ಮಾಡ್ಲಿಲ್ಲ.. ಅವಳೇ ನನ್ನನ್ನು ದೂರ ಮಾಡಿಬಿಟ್ಟಳು. ಅವಳಿಗೆ ತಕ್ಕ ಪತಿಯಾಗುವ ಅರ್ಹತೆ ನನಗಿಲ್ಲ. ಈಗ ಅವಳಿಗೆ ಗೊತ್ತಾಗಿದೆ...ನನಗೆ ಬೇಸರವಾಗಿದೆ. ಆದರೆ ಅದನ್ನೇ ಹಚ್ಚಿಕೊಂಡು ಕೊರಗುವವ ನಾನಲ್ಲ.."

"ಏನೇನೋ ಹೇಳ್ತಿದೀರಿ ನೀವು...ಈ ವಿಷಯ ಹಿರಿಯರಿಗೆ ಗೊತ್ತಾ?..."

"ಇನ್ನು ಗೊತ್ತಿಲ್ಲ. ಹೇಮಾ ನನ್ನನ್ನು ಪೇಚಿನಲ್ಲಿ ಸಿಕ್ಕಿಸಿ ಬಿಟ್ಟಿದಾಳೆ. ನಾವು ಚಿಕ್ಕವರಾಗಿದ್ದಾಗಲೇ ಮನೆಯ ಹಿರಿಯರು ನಿಶ್ಚಯಿಸಿದ್ದ ಮದುವೆ ಅದು...ನನಗೆ ಯಾವ ಅಭ್ಯಂತರವೂ ಇರ್ಲಿಲ್ಲ. ಆದರೆ ಈಗ ಡಾಕ್ಟರಾಗಲಿರುವ ಹೇಮಾಳಿಗೆ ಅಭ್ಯಂತರವಿದೆ. ಈಗ ನಾನು ಅರ್ಹನಲ್ಲ. ಅರ್ಥ ಅಂತ ಅರಿವಾಗಿದೆ."

"ಇದು ತಪ್ಪು, ದೊಡ್ಡವರ ಹತ್ರ ಮಾತನ್ನಾಡಿ, ತಿಳುವಳಿಕೆ ಹೇಳಲಿ!"

"ಏನು ಪ್ರಯೋಜನ ಪಲ್ಲವಿ?.. ಅವಳಿಗೆ, ನಾನು ತಕ್ಕವನಲ್ಲ ಎಂದು ಅಭಿಪ್ರಾಯ ಬಂದ ಮೇಲೆ ನಾವು ಸುಖವಾಗಿರಲು ಸಾಧ್ಯವಾ?..."

"ಆದರೂ, ನಿಮ್ಮತ್ತೆ ನಿಮ್ಮನ್ನೇ ಅಳಿಯ ಅಂತ ಅಂದ್ಕೊಡಿದಾರೆ..ಅವರಿಗೆ ಬೇಸರ ಆಗುಲ್ವಾ?.."

"ಅವರಿಗೆ ಬೇಸರ ಮಾಡ್ತಾ ಇರೋಳು ಅವರ ಮಗಳು, ನಾನಲ್ಲ, ಒಂದಲ್ಲ ಒಂದು ದಿನ ಅವರಿಗೆ ಈ ವಿಷಯ ತಿಳಿಯುತ್ತೆ...ಅವರವರೇ ಮಾತನ್ನಾಡಿಕೊಳ್ಳಲಿ, ಈಗ ನೀವು ಹೇಳಿ...ನಾನು ನಿಮಗೆ ಒಪ್ಪಿಗೆ ಅಂತ ಅಂದ್ಕೊಂಡಿದೀನಿ.. ನಾವಿಬ್ರೂ ಮದುವೆಯಾಗೋಣ.."

"ಹೀಗೆ ದಿಡೀರನೆ ಕೇಳಿದ್ರೆ ನಾನೇನು ಹೇಳ್ಲಿ..? ಯೋಚಿಸ್ಬೇಡ್ವಾ!..."

"ಯೋಚಿಸುಕ್ಕೆ ಎಷ್ಟು ಸಮಯ ಬೇಕು?.. ನಾನು ಮಂದಾಕಿನಿ ಅತ್ತೆ ಹತ್ರ ಮಾತನ್ನಾಡ್ತೀನಿ..."

"ಬೇಡ..ಅವರನ್ನೇನೂ ಕೇಳೋದು ಬೇಡಾ!..."

"ಯಾಕೆ?..ನೀವು ಅವರ ಮಗಳು.. ಅವರು ಒಪ್ತಾರೋ ಇಲ್ಲವೋ ಅಂತ ಅನುಮಾನಾ..."

"ನಿಮಗೊಬ್ಬ ಅಣ್ಣ ಇದಾರಂತೆ. ಬೇಕಾದ್ರೆ ನಾನು ಅವರ ಹತ್ರ ಮಾತಾಡ್ತೀನಿ."

"ಏನು ಬೇಡ...ನನಗೂ ಅವರಿಗೂ ಯಾವ ಸಂಬಂಧವೂ ಇಲ್ಲ..."

"ಅಂದರೇ? ಏನರ್ಥ?"

"ಬೇಕಾದಷ್ಟು ವಿಷಯಗಳಿವೆ ಭುಜಂಗ್.. ನಾನು ನಿಮಗೆ ತಕ್ಕವಳಲ್ಲ."

"ಹಾಗಂತ ಯಾರು ಹೇಳಿದ್ರು?"

"ನಾನೇ ಹೇಳ್ತಿದೀನಿ, ನೀವು ತುಂಬಾ ಒಳ್ಳೆಯವರು. ನಾನು ಒಳ್ಳೆಯವಳಲ್ಲ.." ಅವಳು ಮುಖ ತಗ್ಗಿಸಿ ನುಡಿದಾಗ, ಅವನು ಅವಳ ಗಲ್ಲವನ್ನು ಹಿಡಿದೆತ್ತಿದ...

"ನೀವು ಒಳ್ಳೆಯವರು ಅಂತ ನಿಮ್ಮ ಮುಖವೇ ಹೇಳುತ್ತೆ. ನೀವು ಕೆಟ್ಟವರಲ್ಲ ಅಂತ

ನನ್ನ ಮನಸ್ಸು ಹೇಳ್ತಿದೆ.''

''ಇಲ್ಲ ಭುಜಂಗ್, ಈ ವಿಷಯದಲ್ಲಿ ನನ್ನನ್ನು ಬಲವಂತ ಪಡಿಸ್ಬೇಡಿ.. ನಿಮಗೆ ಗೊತ್ತಿಲ್ಲದ, ನಾನು ಹೇಳಲಾಗದ ಅನೇಕ ವಿಷಯಗಳಿವೆ..''

''ನಾನು ನಿಮ್ಮ ಸ್ನೇಹಿತ ಅಂತ ಭಾವಿಸಿದ್ದರೆ, ಏನು ವಿಷಯ ಅಂತ ಹೇಳಿ..''

''ಹೇಳಿದ್ಮೇಲೆ, ನಿಮಗೆ ನನ್ನ ಸ್ನೇಹ ಕೂಡಾ ಬೇಡವಾಗಬಹುದು. ಆಗ ನಾನು ನಿಮಗೆ ಬೇಡದವಳಾಗಿ ಬಿಡ್ತೀನಿ. ಅದಕ್ಕಿಂತ ಬೇರೆ ಅವಮಾನ ಬೇಕಾ?''

''ಇಲ್ಲ ಪಲ್ಲವಿ, ನಾನು ಅಂಥೋನಲ್ಲ.. ನಿಮಗೆ ಹೇಳೋಕೆ ಇಷ್ಟವಿಲ್ಲದಿದ್ದರೆ ಬೇಡ.. ನಾನು, ನೀವು ಹೇಗೆ ಇದ್ದರೂ, ನಿಮ್ಮನ್ನ ಮೆಚ್ಚಿದೀನಿ.. ನೀವು ನಂಗೆ ಬೇಕು.''

''ಹೇಮನ ಮೇಲಿನ ಸಿಟ್ಟಿಗೆ ಹೀಗೆ ಮಾತಾಡ್ತಿದೀರಿ ನೀವು''

''ಇಲ್ಲ ಪಲ್ಲವಿ, ನಾನು ನಿಮ್ಮನ್ನ ಪ್ರೀತಿಸ್ತಿದೀನಿ.. ಹೇಮನ್ನ ನಾನೆಂದೂ ನಿಮ್ಮನ್ನ ನೋಡುವ ರೀತಿಯಲ್ಲಿ ನೋಡಿರಲೇ ಇಲ್ಲ...ನೀವು ಒಪ್ಪಿಕೊಂಡರೆ, ನಾನು ಅದೃಷ್ಟಶಾಲಿ ಅಂತ ಅಂದ್ಕೊಳ್ತೀನಿ..''

''ನಿಜ ಹೇಳಿ ಭುಜಂಗ್.. ಹೇಮಾ ಽಕ್ಕರಿಸಿದ್ದರಿಂದ, ನಿಮಗೆ ವ್ಯಥೆಯಾಗಿ ಹೀಗೆ ಮಾತನಾಡ್ತೀರಿ ಅಂತ ನಂಗೆ ಅನ್ನಿಸ್ತಿದೆ...'' ಇಲ್ಲದಿದ್ರೆ ನಾನ್ಯಾರೋ, ನೀವ್ಯಾರೋ...?''

''ನಿಮಗೆ ಹೇಗೆ ಹೇಳಲಿ! ನನ್ನ ಮನಸ್ಸು ಕದಡಿ ಹೋಗಿರುವುದಂತೂ ನಿಜ. ಈ ಸಮಯದಲ್ಲಿ ನಿಮ್ಮ ಪರಿಚಯ, ನಿಮ್ಮ ಸ್ನೇಹ ಇಲ್ಲದೇ ಇದ್ದಿದ್ದರೆ, ನಾನು ಏನಾಗುತ್ತಿದ್ದೆನೋ ನಂಗೆ ಗೊತ್ತಿಲ್ಲ. ಅವಳಿಗಾಗಿ ಇಷ್ಟು ವರ್ಷಗಳು ನಾನು ಪ್ರಾಮಾಣಿಕನಾಗಿ ಕಾದಿದ್ದು ವ್ಯರ್ಥವಾಯಿತು. ನನ್ನ ತಪ್ಪು ಏನಿತ್ತು?...ಹೆಣ್ಣಾಗ್ಗಿ, ಅವಳು ನನ್ನನ್ನು ಽಕ್ಕರಿಸಿಬಿಟ್ಟಳು. ಇದಕ್ಕಿಂತ ಬೇರೆ ಅವಮಾನ ಬೇಕಾ?.. ಆದರೆ ಅವಳಿಗಾಗಿ ನಾನು ಚಡಪಡಿಸುವುದಿಲ್ಲ. ಕೊರಗುವುದಿಲ್ಲ. ನನ್ನ ಬಾಳನ್ನು ಚೆನ್ನಾಗಿಯೇ ಬಾಳ್ತೀನಿ.. ನನಗೆ ನಿಮ್ಮ ಸಹಕಾರ ಬೇಕು. ನೀವು ನನ್ನ ಸಂಗಾತಿಯಾಗಬೇಕು. ಅದೇ ನನ್ನ ಆಸೆ..'' ಅವಳ ಕೈಯನ್ನು ತನ್ನ ತುಟಿಗಳಿಗೆ ಒತ್ತಿಕೊಂಡ. ''ಒಂಟಿಯಾಗಿರಲು ನಾನು ಬಯಸುವುದಿಲ್ಲ ಪಲ್ಲವೀ...'' ಅವಳು ಸರ್ರನೆ ಕೈಯನ್ನು ಹಿಂದಕ್ಕೆಳೆದುಕೊಂಡಳು.

''ಹೀಗೆ ಉದ್ವೇಗಕ್ಕೇ ಒಳಗಾಗ್ಬೇಡಿ.. ನಿಧಾನವಾಗಿ ಯೋಚಿಸಿ. ತಾಳ್ಮೆಯಿಂದಿರಿ. ನೀವು ಗಂಡಸು. ನಿಮಗೆ ತಕ್ಕನಾದ ಹೆಣ್ಣು ಸಿಗುವುದು ಕಷ್ಟವೇನಲ್ಲ. ನೀವು ಸುಖವಾಗಿರಬೇಕು..''

''ನಾನು ನನಗೆ ಬೇಕಾದವಳನ್ನು ಆಯ್ಕೆ ಮಾಡಿಕೊಂಡಿದೀನಿ. ನಾನೂ ಸುಖವಾಗಿರ್ತೀನಿ. ನನ್ನ ಹೆಂಡತಿಯನ್ನೂ ಸುಖವಾಗಿಟ್ಟು ಕೊಳ್ತೀನಿ. ಆ ನಂಬಿಕೆ ನನಗಿದೆ..''

''ಈಗ ಇಲ್ಲಿಂದ ಹೋಗೋಣ.. ಮನಸ್ಸನ್ನು ಹಗುರ ಮಾಡ್ಕೊಳ್ಳೋಕೆ ಅಂತ ಇಲ್ಲಿಗೆ ಬಂದೆ. ನನ್ನ ಮನದ ಗೊಂದಲ ಹೆಚ್ಚಾಯಿತು'' ಪಲ್ಲವಿ ಎದ್ದಳು. ಸರ್ರನೆ ಅವನು ಅವಳ ಕೈ ಹಿಡಿದ. ಅವಳು ಅವನ ಮೇಲೆ ವಾಲಿದಳು. ಅವನ ಕೈಗಳು ಬಲವಾಗಿ ಅವಳನ್ನು ಹಿಡಿದುಕೊಂಡವು.

ತನ್ನ ಮುಖವನ್ನು ಅವಳ ಮುಖದ ಸಮೀಪಕ್ಕೆ ತಂದ..

"ನನಗೆ ಉತ್ತರ ಹೇಳದೇ ನೀವು ಇಲ್ಲಿಂದ ಹೋಗುವಂತಿಲ್ಲ."

"ಪ್ಲೀಸ್, ಬಿಡಿ. ಬಲವಂತದಿಂದ ನನ್ನ ಒಪ್ಪಿಗೆಯನ್ನು ಕೇಳ್ಬೇಡಿ.." ಅವನು ಅವಳನ್ನು ಎಬ್ಬಿಸಿ ನಿಲ್ಲಿಸಿದ.

"ಸಾರೀ.. ಬಲವಂತದಿಂದ ಏನನ್ನು ಪಡೆಯುಕ್ಕೆ ಆಗುಲ್ಲ ಅಂತ ನಂಗೆ ಗೊತ್ತು. ಈಗ ಹೋಗೋಣ. ಆದರೆ ನಾನು ನಿಮ್ಮಿಂದ ಆದಷ್ಟು ಬೇಗ ಸಕಾರಾತ್ಮಕವಾದ ಉತ್ತರ ಸಿಗುತ್ತದೆ ಎಂಬ ನಂಬಿಕೆಯನ್ನು ಇಟ್ಟುಕೊಂಡಿದೀನಿ.." ಎನ್ನುತ್ತಾ, ಅವಳ ಮುಂದೆ ಕೈಚಾಚಿದ. ಅವಳು ಕೈಯನ್ನು ಹಿಡಿದಳು. ಅವನು ಬಂಡೆಗಳನ್ನು ದಾಟಿದ. ಅವಳನ್ನು ದಾಟಿಸಿದ. ಇಬ್ಬರೂ ಬೈಕ್ ನಿಂತಿದ್ದಲ್ಲಿಗೆ ಬಂದರು. ಏನನ್ನೂ ಆಡದೇ ಅವನು ಬೈಕ್‌ನ್ನು ಸ್ಟಾರ್ಟ್ ಮಾಡಿದ. ಅವಳು ಹಿಂದಿನ ಸೀಟನ್ನೇರಿದಳು. ಇಬ್ಬರ ಮನದಲ್ಲೂ ಆಲೋಚನೆಗಳ ಜೂಟಾಟ.

* * *

"ಹೇಗಿದೀರಿ ದೊಡ್ಡಮ್ಮ..? ದೊಡ್ಡಪ್ಪ ಹುಶಾರಾಗಿದಾರಾ" ಎಂದು ವಿಚಾರಿಸಿ ಒಳಗೆ ಅಡಿಯಿಟ್ಟ ಯುವಕನನ್ನೇ ವೈದೇಹಿ ವಿಸ್ಮಯದಿಂದ ನೋಡಿದಳು. "ನಾನು ಚಿದಾನಂದ ದೊಡ್ಡಮ್ಮ ಯಾಕೆ ಗುರುತು ಸಿಗಲಿಲ್ವಾ!" ಅವನು ತನ್ನ ಪರಿಚಯವನ್ನು ಹೇಳಿಕೊಂಡಾಗ, ಆತ್ಮೀಯತೆಯ ಮುಗುಳ್ನಗೆಯನ್ನು ಸೂಸಿದಳು.

"ಚಿದೂನಾ!" ಗುರುತೇ ಸಿಗ್ಲಿಲ್ಲ ನೋಡು. ವಯಸ್ಸಾಯ್ತು, ಹಾಳು ಮರೆವು. ಕಣ್ಣು ಸ್ವಲ್ಪ ಮಂಜು.. ಒಬ್ಬನೇ ಬಂದ್ಯಾ? ಎಲ್ಲಿಂದ ಬರ್ತಿದೀಯ?.."

"ಬೆಂಗಳೂರ್ನಿಂದ ಬರ್ತಿದೀನಿ. ಚೈತ್ರಾ ಎಲ್ಲಿ? ಹೇಗಿದಾಳೆ?"

"ಮೆಲ್ಲಗೆ ಮಾತಾಡು. ಅವಳ ಹೆಸರು ಪಲ್ಲವಿ ಅಂತ ಇಲ್ಲಿ ಎಲ್ರಿಗೂ ಹೇಳಿದೀನಿ.. ಅವಳನ್ನು ಕರ್‍ಕೊಂಡು ಹೋಗೋಕೆ ಬಂದ್ಯಾ?" ಚಿದಾನಂದ ಹೌದೆನ್ನುತ್ತಾ ತಲೆಯಾಡಿಸಿ ಅತ್ತಿತ್ತ ನೋಡಿದ. "ಅವಳು ತೋಟದಲ್ಲಿ ಸುತ್ತಾಡುಕ್ಕೆ ಅಂತ ಹೋಗಿದಾಳೆ. ಅವಳಿಗೆ ಇಲ್ಲಿ ಹೊತ್ತು ಹೋಗುಲ್ಲ.. ಇನ್ನು ಎಷ್ಟು ದಿನ ಈ ಅಜ್ಞಾತವಾಸ?..ಯಾಕೆ ಅಂತ?"

"ಅದೆಲ್ಲ ದೊಡ್ಡ ಕತೆ ದೊಡ್ಡಮ್ಮಾ. ಅವಳು ನನ್ನ ಜೊತೆ ಬರೋದಾದ್ರೆ ನಮ್ಮ ಮನೆಗೆ ಕರ್‍ಕೊಂಡು ಹೋಗ್ತೀನಿ. ಈಗ ಅವಳು ಬೆಂಗಳೂರಿಗೆ ಹೋಗದಿರುವುದೇ ಸರಿ."

"ಅದನ್ನೆಲ್ಲಾ ನೀವು ನೀವು ತೀರ್ಮಾನಿಸ್ಕೊಳ್ಳಿ. ಪರರ ಮನೆಯ ಹುಡುಗಿ. ಇಲ್ಲಿ ನಮ್ಮ ಮನೇಲಿ ಬೇರೆ ಯಾರೂ ಇಲ್ಲ. ಸರಿ ಹೋಯ್ತು.. ಇಲ್ದೇ ಇದ್ದಿದ್ರೆ..."

"ನಿಮಗೆ ಅವಳಿಂದ ತೊಂದ್ರೆ ಆಗ್ತಾ ಇದೆಯಾ ದೊಡ್ಡಮ್ಮಾ?"

"ತೊಂದ್ರೆ ಏನಿಲ್ಲ. ಆದರೂ ಜವಾಬ್ದಾರಿ. ಭುಜಂಗ ಇರೋದ್ರಿಂದ ಪರವಾಗಿಲ್ಲ."

"ಭುಜಂಗ? ಅದೇ ನಿಮ್ಮ ಅತ್ತಿಗೇ ಮಗ...ಅಲ್ವಾ ಹೇಮಾ ಏನ್ಮಾಡ್ತಿದಾಳೆ..? ನಿಮ್ಮ ಮಗಳ

ಹೆಸರು ಹೇಮಾ ತಾನೇ?... ಅವಳೆಲ್ಲಿದಾಳೆ?..."

"ಹುಂ, ಹೇಮಾನೇ? ಬರ್ದೇ, ಹೋಗ್ದೇ ಇದ್ರೆ ಆಗೋದೇ ಹೀಗೆ..ಕ್ರಮೇಣ ನಮ್ಮನ್ನೆಲ್ಲ ಮರತೇ ಬಿಡ್ತೀರಿ.. ಇದಕ್ಕೆಲ್ಲ ನಿಮ್ಮಪ್ಪನೇ ಕಾರಣ."

"ಹೋಗ್ಲಿ ಬಿಡಿ ದೊಡ್ಡಮ್ಮ, ಅಪ್ಪನ ಪುರಾಣ ಈಗ್ಯಾಕೆ? ನಾನು ಅವರಂತೆ ಅಲ್ಲ, ಹೇಮನ ಮದುವೆ ಯಾವಾಗ?"

"ನನ್ನ ಮಗಳು ದಿನಾನ ಮುಂದೂಡ್ತಾನೇ ಇದಾಳೆ.. ಅವಳ ಮನಸ್ನಲ್ಲಿ ಏನಿದೆಯೋ? ಬಾಯ್ಬಿಟ್ಟು ಹೇಳುಲ್ಲ, ಈ ಭುಜಂಗನೂ ಮೂಗ ಬಸವನ ಥರ ಸುಮ್ಮನಿದಾನೆ."

"ದೊಡ್ಡಮ್ಮ, ಕೈ ಕಾಲು ಮುಖವನ್ನು ತೊಳ್ಕೊಂಡು ಬರ್ತೀನಿ. ಕಾಫಿ ಕೊಡಿ, ಆಮೇಲೆ ತೋಟಕ್ಕೆ ಹೋಗಿ ಭುಜಂಗನ್ನ ಮಾತನಾಡಿಸ್ಕೊಂಡು ಬರ್ತೀನಿ."

"ಹುಂ, ಸರ್ಯಾಗಿ ಮಾತಾಡು. ಮದುವೆಯ ಸಿಹಿ ಊಟವನ್ನು ಯಾವಾಗ ಹಾಕಿಸ್ತೀಯಾ ಅಂತ ಕೇಳು. ನನಗೆ ಇರೋಳು ಒಬ್ಬಳೇ ಮಗಳು. ನೀವೆಲ್ಲಾ ಬಂದು ಮದುವೇಲಿ ಓಡಾಡ್ಬೇಕು.."

"ಸರಿ ದೊಡ್ಡಮ್ಮ" ಎಂದು ಹೇಳುತ್ತಾ ಬಚ್ಚಲು ಮನೆಗೆ ನಡೆದ.

"ಇವನ್ಯಾಕೆ ಬಂದ?.. ತನಗೊಬ್ಬಳು ಅಕ್ಕ ಇದಾಳೆ ಅನ್ನೋದನ್ನೇ, ಈ ಮಂದಾ ಮರೆತು ಬಿಟ್ಟಿದ್ಲು. ಈಗ ಇಷ್ಟು ವರ್ಷಗಳ ನಂತರ ನೆನೆಸ್ಕೊಂಡು, ಮೊದಲು ಮಗಳನ್ನು ಕರೆ ತಂದು ಬಿಟ್ಲು. ಈಗ ಮಗನನ್ನು ಕಳ್ಸಿದಾಳೆ. ಏನಿರ್ಬಹುದು?" ವೈದೇಹಿ ಚಿಂತಿಸಿದಳು.

ಚಿದಾನಂದ ಕಾಫಿಯ ಜೊತೆಗೆ ಸ್ವಲ್ಪ ತಿಂಡಿಯನ್ನು ತಿಂದು ಮನೆಯಿಂದ ಹೊರ ಬಿದ್ದ. ತೋಟ ಎಲ್ಲಿದೆ ಅಂತ ಸರಿಯಾಗಿ ಗೊತ್ತಿಲ್ಲದಿದ್ರೂ, ಯಾರನ್ನಾದ್ರೂ ಕೇಳಿದರಾಯ್ತು ಅಂತ ಅಂದುಕೊಂಡ. ಚೈತ್ರಾ ಇಲ್ಲಿರುವುದು ದೊಡ್ಡಮ್ಮನಿಗೆ ಅಷ್ಟೇನೂ ಇಷ್ಟವಿರುವಂತೆ ಕಾಣಿಸುವುದಿಲ್ಲ. ಇಲ್ಲಿಂದ ಎಲ್ಲಿಗೆ ಕರ್ಕೊಂಡು ಹೋಗುವುದು? ಮೊದಲು ಅವಳ ಹತ್ರ ಮಾತನಾಡ್ಬೇಕು ಎಂದುಕೊಡು, ತೋಟವಿರುವ ಜಾಗವನ್ನು ವಿಚಾರಿಸ್ಕೊಂಡು ರಸ್ತೆಯಲ್ಲಿ ನಡೆದ ತೋಟಕ್ಕೆ ತಿರುಗಿಕೊಳ್ಳುವ ತಿರುವಿನಲ್ಲಿ ಚೈತ್ರ ಎದುರಾದಳು. ಅವಳು ಇವನನ್ನು ನಿರೀಕ್ಷಿಸಿರಲಿಲ್ಲವಾದ್ದರಿಂದ ಗಾಬರಿಯ ಮುಖ ಮಾಡಿದಳು. ತಡೆಯಲಾರದೇ ಪ್ರಶ್ನಿಸಿದಳು.

"ಆನಂದ್? ನೀವು ಇಲ್ಲಿ?...ಇಲ್ಲಿಗ್ಯಾಕೆ ಬಂದ್ರಿ?..ಡ್ಯಾಡಿ ಹೇಗಿದಾರೆ?"

"ನಾನು ನಿಮ್ಮ ಹತ್ರ ತುಂಬಾ ಮಾತಾಡ್ಬೇಕು....ಅದಕ್ಕೇ ಬಂದಿದೀನಿ...ನನಗೆ ಈಗ ನಿಮ್ಮ ಮನೆಯಲ್ಲಿ ಕೆಲಸ ಇಲ್ಲ... ಅಲ್ಲಿಂದ ಬಂದ್ಬಿಟ್ಟೆ."

"ಹಾಗಾದ್ರೆ?...ಡ್ಯಾಡೀನ ಯಾರು ನೋಡ್ಕೋತಾರೆ?"

"ಬೇರೆ ಯಾರನ್ನೋ ಗೊತ್ತು ಮಾಡಿದಾರೆ...ನನ್ನನ್ನು ಹೋಗಿ ಅಂತ ಹೇಳಿಬಿಟ್ರು."

"ನೀವು ಬಿಟ್ಟು ಬರ್ಬಾರ್ದಾಗಿತ್ತು. ನಿಮ್ಮ ಹಾಗೆ ಡ್ಯಾಡೀನ ಯಾರು ನೋಡ್ಕೋತಾರೆ?"

"ಯಾರೇ ಆದ್ರೂ ಅವರನ್ನು ಚೆನ್ನಾಗಿ ನೋಡ್ಕೋಳ್ತಾರೆ ಬಿಡಿ.. ಕಷ್ಟವಾಗುಲ್ಲ. ಅದ್ಸರಿ..

ಈ ಊರು ನಿಮಗೆ ಹಿಡಿಸ್ತಾ? ಒಬ್ಬರೇ ತಿರುಗಾಡುವಷ್ಟು ಪರಿಚಯಸ್ಥರಾಗಿದೀರಿ.''

''ಹುಂ, ಹಿಡಿಸ್ಲಿ, ಬಿಡ್ಲಿ...ತಿರುಗಾಡ್ತೀನಿ. ಇಲ್ದಿದ್ರೆ ಸಮಯ ಹೋಗೋದು ಹೇಗೆ?'' ನಿಮಗೆ ಬೇರೆ ಕೆಲಸ ಸಿಕ್ತಾ?''...ಶರತ್ ಯಾಕೆ ಹೀಗೆ ಮಾಡ್ದ?..

''ಇಲ್ಲ, ಹುಡುಕ್ಬೇಕು...ನನ್ನ ವಿದ್ಯೆಗೆ ಸುಲಭವಾಗಿ ಕೆಲಸ ಎಲ್ಲಿ ಸಿಗುತ್ತೆ?..''

''ನಾನು ಅಲ್ಲೇ ಇದ್ದಿದ್ರೆ, ಶರತ್ ನಿಮ್ಮನ್ನು ಕಳಿಸ್ತಿರ್ಲಿಲ್ಲ.. ಹೇಗೋ ನಡೀತಿತ್ತು.'' ಎಂದ.

''ವಾಪಸ್ಸು ಕರ್ಕೊಂಡು ಹೋಗ್ತೀನಿ...ಬರ್ತೀರಾ..? ಹೇಗೋ ಆಗುತ್ತೆ.''

''ಇಲ್ಲ ಆನಂದ್...ಅಲ್ಲಿಗೆ ಬಂದು ಏನ್ಮಾಡ್ಲಿ?..'' ಅಷ್ಟರಲ್ಲಿ ಭುಜಂಗ ಬಂದು ಅವರಿಬ್ಬರನ್ನು ಸೇರಿಕೊಂಡ. ಅವನ ಮುಖದಲ್ಲಿ ಸಂದೇಹ ಇದ್ದುದನ್ನು ಗಮನಿಸಿದಳು.

''ಇವರು, ಭುಜಂಗ್.., ಇವರು ಚಿದಾನಂದ್'' ಪರಸ್ಪರ ಪರಿಚಯಿಸಿದಳು. ನಮಸ್ಕಾರ ಪ್ರತಿ ನಮಸ್ಕಾರಗಳನ್ನು ಹೇಳಿಕೊಂಡರು.

''ನಿಮ್ಮನ್ನು ನಾನು ನೋಡಿರ್ಲಿಲ್ಲ,'' ಭುಜಂಗನೆಂದ.

''ನಾನು ಇಲ್ಲಿಗೆ ಬಂದೇ ಇಲ್ಲ, ಇದೇ ಮೊದಲ ಸಲ...''

''ನಿಮ್ಮ ತಾಯಿ ಹೇಗಿದಾರೆ?''

''ಫ್ಲೂ ಆಗಿತ್ತು. ಈಗ ಸುಧಾರಿಸಿಕೊಳ್ತಿದಾರೆ.. ನಾನು ಚೈತ್ರಳನ್ನು ಕರ್ಕೊಂಡು ಹೋಗೋಣ ಅಂತ ಬಂದಿದೀನಿ... ''ಅಮ್ಮ ಒಬ್ಳೇ ಆಗ್ಬಿಟ್ಟಿದಾಳೇ.''

''ಚೈತ್ರಾ? ಯಾವ ಚೈತ್ರಾ?'' ಚೈತ್ರಳ ಕಡೆ ನೋಡಿ ನಸುನಕ್ಕ ಕಣ್ಣು ಹೊಡೆದ. ಅವಳು ಗಲಿಬಿಲಿಗೊಂಡು ಕೆಂಪಾಗಿದ್ದಳು.

''ಇವರೇ...ಓ ಇವರು ಪಲ್ಲವಿ ಅಂತ ಹೆಸರು ಬದಲಾಯಿಸ್ಕೊಂಡಿದಾರಂತೆ. ದೊಡ್ಡಮ್ಮ ಹೇಳಿದ್ರು, ನಾನು ನಾಳೇನೇ ಕರ್ಕೊಂಡು ಹೋಗೋಣಾಂತ.''ಅಂದ್ಕೋಡಿದೀನಿ.

''ವಾಪಸ್ಸು ಯಾವಾಗ ಬರ್ತೀರಿ ಚೈತ್ರಾ?'' ಅವಳ ಕಡೆ ಬಾಗಿ ಕೇಳಿದ.

''ನಾನು ಇಲ್ಲಿಂದ ಹೋದ್ರೆ ಮತ್ತೆ ವಾಪಸ್ಸು ಬರುಲ್ಲ.'' ಭುಜಂಗ ಅವಳ ಕಡೆ ತೀಕ್ಷ್ಣವಾಗಿ ನೋಡಿ ಚಿದಾನಂದನ ಕಡೆ ತಿರುಗಿದ.

''ಈಗ ನೀವು ಏನ್ಮಾಡ್ತಿದೀರಿ ಚಿದಾನಂದ್..? ಬೆಂಗಳೂರ್ನಲ್ಲಿ ಯಾವುದೋ ಕೆಲಸದಲ್ಲಿ ಇದೀರಿ ಅಂತ ತಿಳೀತು..'' ಚಿದಾನಂದ ಚೈತ್ರಳ ಕಡೆ ನೋಡಿದ.

''ಸಧ್ಯಕ್ಕೆ ಏನೂ ಇಲ್ಲ.. ಹಿಂದೆ ಮಾಡ್ತಿದ್ದ ಕೆಲಸವನ್ನು ಬಿಡಬೇಕಾಯ್ತು..''

''ಹೌದಾ! ನಮುಗ್ಯಾರ್ಗೂ ಗೊತ್ತೇ ಇರ್ಲಿಲ್ಲ.''

''ಆ ವಿಷಯಾನೇ ನಿಮ್ಮ ಹತ್ರ ಮಾತ್ನಾಡ್ಬೇಕಾಗಿತ್ತು. ಯಾವ ಕೆಲ್ಸ ಆದ್ರೂ ಸರಿ ನಾನು ಮಾಡ್ತೀನಿ. ಈ ಊರ್ನಲ್ಲಿ ಯಾವ್ದಾದ್ರೂ ಕೆಲ್ಸ ಸಿಗುತ್ತಾ?..'' ಆಶಾಭಾವದಿಂದ ಕೇಳಿದ.

"ಸಿಗಬಹುದು, ನಾನು ವ್ಯವಸಾಯ ಬಲ್ಲವನು. ಬೇರೆ ಎಲ್ಲಾದ್ರೂ ವಿಚಾರಿಸ್ಬೇಕಾಗುತ್ತೆ. ಸ್ವಲ್ಪ ಸಮಯ ತಗೊಳ್ಳುತ್ತೆ. ಮನೆಗೆ ಬನ್ನಿ ಆ ಬಗ್ಗೆ ಮಾತನಾಡೋಣ.." ಮೂವರೂ ಮಾತನಾಡುತ್ತಾ ಮನೆಯ ಸಮೀಪಕ್ಕೆ ಬಂದರು. ಭುಜಂಗ ತನ್ನ ಮನೆಗೆ ಹೋದ. ಇವರಿಬ್ಬರೂ ವೈದೇಹಿಯ ಮನೆಗೆ ಬಂದರು.

* * *

"ಅಮ್ಮಾ, ಇವರು ಚಿದಾನಂದ ಅಂತ. ಅತ್ತೆಯ ತಂಗಿ ಮಗ.. ಪಲ್ಲವಿಯ ಅಣ್ಣ".. ಸಾಯಂಕಾಲದ ವೇಳೆಗೆ, ಅವರ ಮನೆಗೆ ಬಂದ ಚಿದಾನಂದನನ್ನು ಭುಜಂಗ ತನ್ನ ತಾಯಿಗೆ ಪರಿಚಯ ಮಾಡಿಕೊಟ್ಟ. ಚಿದಾನಂದ ವಿನಯದಿಂದ ಕೈ ಮುಗಿದು ನಮಸ್ಕರಿಸಿದ.

"ಇಬ್ರೂ ಮಾತಾಡ್ತಿರಿ, ನಾನು ಕಾಫಿ ತರ್ತೀನಿ." ಆಕೆ ಒಳಗೆ ಹೋದಳು.

"ನಿಮ್ಮ ತಂದೆ ಹೇಗಿದಾರೆ?" ಸುಮ್ಮನೆ ಎಂಬಂತೆ ಚಿದಾನಂದ ಕೇಳಿದ.

"ಅವರು ಮನೇಲಿಲ್ಲ. ದಿನಾ ಸಾಯಂಕಾಲ, ತೋಟಕ್ಕೆ ಹೋಗಿ ಸುತ್ತಾಡ್ಕೊಂಡು ಬರ್ತಾರೆ.. ಹಾಗೇ ಸ್ವಲ್ಪ ಹೊತ್ತು ಈಶ್ವರನ ದೇವಸ್ಥಾನದ ಕಟ್ಟೆಯ ಮೇಲಿ ಕೂತು, ಅವರ ಸ್ನೇಹಿತರೊಡನೆ ಹರಟೆ ಹೊಡೆದು ಬರ್ತಾರೆ. ಚಿದಾನಂದ್, ನಿಮ್ಮ ತಂದೆ ಏನ್ಮಾಡ್ತಿದ್ರು? ಏನೋ ಬಿಸಿನೆಸ್ ಅಂತ ಹೇಳಿದ್ದಾಗೆ ನೆನಪು."

"ನಂಗೂ ಸರಿಯಾಗಿ ಗೊತ್ತಿಲ್ಲ. ರಿಯಲ್ ಎಸ್ಟೇಟ್ ಏಜೆಂಟ್ ಆಗಿದ್ರು ಅಂತ ಗೊತ್ತು.. ಏನೇನೋ ಗಲಾಟೆ ಆಗಿ, ಆ ಕೆಲಸವೂ ಹೋಯ್ತು ಅಂತ ಅಮ್ಮ ಹೇಳ್ತಿದ್ಲು. ಅವರು ಹೋದ್ಮೇಲೆ ಅಮ್ಮನೇ ಸಂಪಾದ್ನೆ ಮಾಡಿ ಸಾಕಿದ್ದು ನನ್ನನ್ನ. ನಾನು ಹೆಚ್ಚಿಗೆ ಓದಲಿಲ್ಲ. ನನಗೆ ಕೆಲಸ ಸಿಗುವುದು ಕಷ್ಟ ಅಂತ ನಂಗೆ ಗೊತ್ತು.." ವಿಷಾದದ ದನಿಯಿತ್ತು.

"ನನ್ನ ಮನಸ್ನಲ್ಲಿ ಒಂದು ವಿಷಯ ಇದೆ. ನೀವು ಏನಂತೀರೋ?" ಅವನನ್ನೇ ದಿಟ್ಟಿಸಿದ. "ಅಲ್ಲಿ ಇಲ್ಲಿ ಅಂತ ಕೆಲಸ ಯಾಕೆ ಹುಡಿಕ್ತೀರಿ!...ನಿಮ್ಮ ದೊಡ್ಡಮ್ಮನ, ಗದ್ದೆ ಜಮೀನುಗಳ ಉಸ್ತುವಾರಿ ನೋಡಿಕೊಳ್ಳಲು ಒಬ್ಬರು ಸಹಾಯಕರು ಬೇಕಾಗಿದಾರೆ ನಿಮ್ಕೈಲಿ ಆಗುತ್ತಾ?"

"ನನಗೆ ಈ ಕೆಲಸಗಳೆಲ್ಲಾ ಮಾಡಿ ಗೊತ್ತಿಲ್ಲ. ಯಾವ ಅನುಭವವೂ ಇಲ್ಲ."

"ಅನುಭವ ಬೇಕು ಅಂತೇನಿಲ್ಲ. ತಾನಾಗಿಯೇ ಬರುತ್ತೆ. ದೊಡ್ಡಮ್ಮಂಗೆ ಗಂಡು ಮಕ್ಕಳಿಲ್ಲ. ಮಗಳು ಹೇಮಾ ಇಲ್ಲಿಲ್ಲ.. ನಾನೇ ನೋಡ್ಕೊಳ್ತಿದೀನಿ.. ನೀವು ಒಪ್ಪಿದರೆ, ನಾನು ದೊಡ್ಡಮ್ಮನ ಹತ್ರ ಮಾತಾಡ್ತೀನಿ.." ಭುಜಂಗನ ತಾಯಿ, ಕಾಫಿಯನ್ನು ತಂದಿತ್ತಳು.

"ನೀನಾಗಿಯೇ ನನಗೊಂದು ಅವಕಾಶವನ್ನು ಕಲ್ಪಿಸಿ ಕೊಡ್ತಿರುವಾಗ, ನಾನ್ಯಾಕೆ ಬೇಡ ಅನ್ನಲಿ! ಆದರೆ ಅಮ್ಮನ್ನ ಒಂದ್ಮಾತು ಕೇಳ್ಬೇಕು.. ಅವಳು ಒಪ್ಪಿದರೆ ಆಯಿತು ಅಷ್ಟೇ.."

"ಸರಿ, ಹಾಗೇ ಮಾಡಿ, ಪಟ್ಟಣಗಳಲ್ಲಿ ಕೆಲಸ ಸಿಗುವುದು ಕಷ್ಟ. ಹಳ್ಳಿಯ ಜೀವನ ಎಲ್ಲರಿಗೂ ಒಗ್ಗುವುದಿಲ್ಲ. ನಾನು ಪದವೀಧರ, ಆದರೂ ಬೇರೆ ಊರಿನಲ್ಲಿ ಕೆಲಸಕ್ಕೆ ಪ್ರಯತ್ನ ಪಡಲಿಲ್ಲ.

ಈಗ ಇದೇ ಒಗ್ಗಿ ಹೋಗಿದೆ.. ಇಲ್ಲೇ ಹುಟ್ಟಿ, ಇಲ್ಲೇ ಬೆಳೆದವನು. ನನ್ನ ಪ್ರಪಂಚ ಇದೇ.. ಬೇರೇನೂ ಗೊತ್ತೇ ಇಲ್ಲ ನನಗೆ.'' ನಸು ನಕ್ಕು ನುಡಿದ.

''ನಿಮಗೆ ವ್ಯವಹಾರ ಜ್ಞಾನ ಚೆನ್ನಾಗಿದೆ. ವ್ಯವಸಾಯದ ಮೇಲೆ ಆಸಕ್ತಿ ಇದೆ. ನಿಮ್ಮದೇ ಜಮೀನು, ನಿಮ್ಮದೇ ತೋಟ... ನೀವೇ ಒಡೆಯರು. ನಿಮ್ಮಂಥೋರಿಂದಲೇ ಹಳ್ಳಿಗಳು ಅಭಿವೃದ್ಧಿಯನ್ನು ಪಡೆಯುವುದು.... ನಿಮ್ಮನ್ನ ನೋಡಿದ್ರೆ ಒಂಥರಾ ಖುಷಿಯಾಗುತ್ತೆ.''

''ನನ್ನಂಥೋರು ಬೇಕಾದಷ್ಟು ಮಂದಿಗಳಿದಾರೆ. ನನ್ನದೇನೂ ಹೆಚ್ಚುಗಾರಿಕೆ ಇಲ್ಲ. ಅಪ್ಪಯ್ಯನ ತಾತನ ಕಾಲದಿಂದ ಈ ಜಮೀನುಗಳಲ್ಲಿ ವ್ಯವಸಾಯ ನಡೀತಿದೆ. ಆಯಾ ಕಾಲಕ್ಕೆ ತಕ್ಕಂತೆ, ಲಾಭದಾಯಕವಾದ ಬೆಳೆಗಳನ್ನು ಬೆಳೀತೀವಿ. ತೋಟದಲ್ಲಿ ತೆಂಗಿನ ಮರಗಳಿವೆ. ಮಾವಿನ ಮರಗಳಿವೆ. ಬಾಳೆ ಹಣ್ಣು ತರಕಾರಿಗಳು ಕೂಡಾ ಸಿಗುತ್ತವೆ. ಭತ್ತ ಬರುತ್ತೆ. ಅತ್ತೇಗೆ ನಮ್ಮಷ್ಟು ಜಮೀನಿಲ್ಲ. ಮಾವಂಗೆ ಹುಶಾರಿಲ್ಲವಲ್ಲ, ನೋಡಿಕೊಳ್ಳೋರು ಯಾರೂ ಇಲ್ಲ. ನಾನೇ ನೋಡ್ಕೊಳ್ತಿದೀನಿ..'' ಇಬ್ಬರೂ ನಿಧಾನವಾಗಿ ಕಾಫಿಯನ್ನು ಕುಡಿದು ಮುಗಿಸಿದರು.

''ಹುಂ, ಮುಂದೆ ಆ ಮನೆಯ ಅಳಿಯ ನೀನೇ ಅಂತ ನಿರ್ಧಾರವಾಗಿದೆಯಂತಲ್ಲ, ಯಾವಾಗ ಮದುವೆ?'' ಭುಜಂಗನಿಗೆ ಈ ಪ್ರಶ್ನೆ ಇಷ್ಟವಾಗಲಿಲ್ಲ, ಮುಖ ಕೆಟ್ಟಿತು.

''ಹೇಮಳ ಕೋರ್ಸ್ ಮುಗೀಬೇಕು. ಅಲ್ಲಿಯವರೆಗೆ ಮದುವೆಯ ಮಾತಿಲ್ಲ.''

''ಅವಳು ಡಾಕ್ಟರಾದ್ಮೇಲೆ, ಇಲ್ಲಿಯೇ ಕ್ಲಿನಿಕ್ ಇಡ್ತಾಳಾ?'' ಭುಜಂಗ ಗಂಭೀರನಾದ.

''ಏನೋ ನಂಗೊತ್ತಿಲ್ಲ. ಅದೆಲ್ಲಾ ಅವಳಿಗೆ ಸೇರಿದ್ದು. ಆ ಬಗ್ಗೆ ನಾನೆಂದೂ ಮಾತಾಡಿಲ್ಲ.'' ಚಿದಾನಂದ ಪೆಚ್ಚಾದ. ಭುಜಂಗನಿಗೆ ಆ ಮಾತುಗಳು ಇಷ್ಟವಾಗಲಿಲ್ಲವೆನ್ನುವುದನ್ನು ಅರಿತ.

''ನನ್ನ ಮಾತ್ನಿಂದ ಬೇಸರವಾಯ್ತೇನೋ ಏನೋ ಗೊತ್ತಾಗ್ಲಿಲ್ಲ.. ಕ್ಷಮಿಸಿ.''

''ಪರವಾಗಿಲ್ಲ ಬಿಡಿ.. ಹಾಗೇ ಇನ್ನೂ ಒಂದು ವಿಷಯವನ್ನು ಕೇಳ್ಬೇಕಾಗಿತ್ತು.. ಅದು ನಿಮ್ಮ ತಂಗಿಯ ಬಗ್ಗೆ...'' ಅನುಮಾನಿಸುತ್ತಾ ಹೇಳಿದ.

''ಚೈತ್ರಳ ಬಗ್ಗೇನಾ? ಏನ್ಮಾಡಿದ್ಲು ಅವಳು?'' ಚಿದಾನಂದ ಗಾಬರಿಗೊಂಡಿದ್ದ.

''ಬನ್ನಿ, ಹಾಗೇ ತಿರುಗಾಡ್ಕೊಂಡು ಬರೋಣ...'' ಭುಜಂಗ ಎದ್ದು ಚಪ್ಪಲಿಯನ್ನು ಮೆಟ್ಟಿ, ಅಲ್ಲಿಂದಲೇ ತಾಯಿಗೆ ಹೇಳಿ, ಜಗುಲಿಯಿಂದ ಕೆಳಗಿಳಿದ. ಚಿದಾನಂದ ಅವನನ್ನು ಹಿಂಬಾಲಿಸಿದ.

''ನನಗೆ ಪಲ್ಲವಿ ಇಷ್ಟವಾಗಿದಾಳೆ. ಪಲ್ಲವಿ, ಹಾಗೂ ನಿಮ್ಮೆಲ್ಲರ ಒಪ್ಪಿಗೆ ಇದ್ದರೆ, ನಾನು ಮದುವೆಯಾಗ್ತೀನಿ'' ಚಿದಾನಂದನ ಹೆಜ್ಜೆಗಳು ನಿಂತವು. ಭುಜಂಗ ಹಿಂತಿರುಗಿ ನೋಡಿದ. ''ಯಾಕೆ ನಿಂತು ಬಿಟ್ರೀ..?..ನಿಮಗೆ ಏನಾದ್ರೂ ಸಂದೇಹಾನಾ?''

ಚಿದಾನಂದ ಅವನ ಬಳಿಗೆ ಬಂದ. ''ಏನು ಹೇಳ್ತಿದೀರಿ ನೀವು? ಮತ್ತೇ ಹೇಮಾ?''

''ನನ್ನ ಹೇಮಾಳ ಮದುವೆ ನಡೆಯುಲ್ಲ. ಅವಳು ಅವಳಿಗೆ ತಕ್ಕವನಾದವನನ್ನು ಆಯ್ಕೆ ಮಾಡಿಕೊಂಡಿದಾಳೆ...ಈ ವಿಷಯವನ್ನು ಅವಳೇ ಹೇಳಿದಾಳೆ. ''ಅದು ಮುಗಿದ ವಿಷಯ.''

"ಈ ವಿಷಯ ದೊಡ್ಡಮ್ಮನಿಗೆ ಗೊತ್ತಾ?"

"ಇಲ್ಲ, ಹೇಮಾ ನನಗೆ ಮಾತ್ರ ಹೇಳಿದಾಳೆ, ಈಗ ನಾನು ನಿಮಗೆ ಹೇಳ್ತಿದೀನಿ. ಈ ವಿಷಯ ಪಲ್ಲವಿಗೆ ಗೊತ್ತು."

"ಹಾಗಾದ್ರೆ ನೀವು ಪಲ್ಲವಿಯ ಹತ್ರ ಮಾತ್ನಾಡಿದೀರಾ! ಅವಳೇನಂದ್ಲು?"

"ಅವಳಿನ್ನು ತನ್ನ ಒಪ್ಪಿಗೆಯನ್ನು ಕೊಟ್ಟಿಲ್ಲ..ಈಗ ನೀವು ಹೇಗೂ ಬಂದಿದೀರಿ. ಅವಳೊಡನೆ ಮಾತ್ನಾಡಿ, ಅವಳಿಗೆ ಒಪ್ಪಿಗೇನಾ ಅಂತ ತಿಳಿದು ಹೇಳಿ. ಬಲವಂತವೇನಿಲ್ಲ." ಚಿದಾನಂದ ಮೌನಿಯಾದ. ಪಿಳಿ ಪಿಳಿ ಅವನನ್ನೇ ನೋಡಿದ. "ಯಾಕೆ ಸುಮ್ಮನಾಗಿ ಬಿಟ್ರಿ ಚಿದಾನಂದ್!.. ಅವಳು ಪಟ್ಟಣದಲ್ಲಿ ಬೆಳೆದವಳು. ಈ ಹಳ್ಳಿ ಹಿಡಿಸುತ್ತೋ ಇಲ್ಲವೋ ಅಂತ ಯೋಚಿಸ್ತಿದೀರಾ!...ನಮ್ಮ ಮನೆಯಲ್ಲಿ ಎಲ್ಲಾ ಅನುಕೂಲಗಳೂ ಇವೆ."

"ಅದಲ್ಲ, ವಿಷಯ ಬೇರೆಯೇ ಇದೆ..."

"ಅಂದರೇ?.. ಏನಾದರು ಗಲಾಟೆಯಲ್ಲಿ ಸಿಕ್ಕಿಬಿದ್ದು ಇಕ್ಕಟ್ಟಿನಲ್ಲಿದಾರಾ?"

"ಹಾಗೇ ಅಂತ ಅಂದ್ಕೊಳ್ಳಿ.. ಆ ವಿಷಯಗಳಿಂದ ದೂರ ಇರುಕ್ಕೆ ಅಂತಲೇ ಇಲ್ಲಿಗೆ ಬಂದಿರೋದು..."

"ಏನೇ ಇರಲಿ, ಎಷ್ಟು ದಿನ ಅಂತ ಹೀಗೆ ಅಜ್ಞಾತವಾಗಿರುಕ್ಕೆ ಸಾಧ್ಯ!.. ಬಹುಶಃ ದೇವರು, ನನಗೋಸ್ಕರವೇ ಪಲ್ಲವಿಯನ್ನು ಇಲ್ಲಿಗೆ ಕಳಿಸಿರಬಹುದು."

"ಅವಳು ಪಲ್ಲವಿ ಅಲ್ಲ. ಅವಳ ಹೆಸರು ಚೈತ್ರಾ...ನಾನು ಅವಳ ಸ್ವಂತ ಅಣ್ಣನಲ್ಲ. ಅಮ್ಮ ಅವಳಿಗೆ ಸ್ವಂತ ತಾಯಿ ಅಲ್ಲ..."

"ಏನು? ಏನೇನೋ ಹೇಳ್ತಿದೀರಲ್ಲ. ಇದು ಹೇಗೆ ಸಾಧ್ಯ?.."

"ನಿಜವನ್ನೇ ಹೇಳ್ತಿದೀನಿ. ಈ ನಿಜ ತಿಳಿದದ್ದೂ ಈಚೆಗೇನೇ!.. ಇನ್ನು ಒಂದು ಮುಖ್ಯವಾದ ವಿಷಯವಿದೆ. ಇವಳಿಗೆ ಮದುವೆಯಾಗಿದೆ...ಇನ್ನೂ ಡೈವೋರ್ಸ್ ಸಿಕ್ಕಿಲ್ಲ..." ಎಂದ.

ಭುಜಂಗ ಕೈ ಮೇಲೆ ಎತ್ತಿ ನಾನು ನಂಬುವುದಿಲ್ಲ ಎಂಬಂತೆ ಅಲುಗಾಡಿಸಿದ. "ನೀವು ತಮಾಷೆ ಮಾಡ್ತಿಲ್ಲ ಅಂತ ನಂಗೆ ಗೊತ್ತಾಗ್ತಿದೆ. ಆದ್ರೂ ನಿಮ್ಮ ಮಾತಿನ ಮೇಲೆ ನನಗೆ ನಂಬಿಕೆ ಬರ್ತಿಲ್ಲ. ಪಲ್ಲವಿ ಎಂದೂ ಇದನ್ನೆಲ್ಲ ಹೇಳಿಕೊಂಡಿಲ್ಲ..ಮತ್ತಿನ್ನೇನಿದು?"

"ಹೇಗೆ ಹೇಳ್ತಾಳೇ?... ಅವಳು ನಿಮ್ಮನ್ನು ಪ್ರೀತಿಸದೇ ಇರಬಹುದು."

"ನಾವಿಬ್ಬರೂ ಸ್ನೇಹಿತರಾಗಿದೀವಿ. ನನ್ನ ಜೊತೆ ಓಡಾಡಿದಾಳೆ. ಹರಟಿದಾಳೆ, ಆದರೂ ಈ ಬಗ್ಗೆ ಒಂದು ದಿನವೂ ಒಂದು ಸುಳಿವನ್ನು ಹೊರಗೆಡಹಿಲ್ಲ.. ಅಂತಾ ರಹಸ್ಯ ಏನು?"

"ಅದಕ್ಕೇ ಹೇಳ್ತಿದೀನಿ. ಮೊದಲು ಅವಳ ಹತ್ರ ಮಾತನ್ನಾಡಿ...ಎಲ್ಲಾ ತಿಳಿಯಾಗಲಿ..'

"ನಾನು ಹೇಗೆ ಕೇಳಲಿ ಚಿದಾನಂದ್..?..ಒಂದ್ಮಾತು, ಡೈವೋರ್ಸ್ ತಗೊಳ್ಳುವಂಥ ಪ್ರಸಂಗ ಯಾಕೆ ಬಂತು?.."

"ಅದನ್ನೆಲ್ಲಾ ಅವಳೇ ಹೇಳಲಿ.. ಆದರೆ ಒಂದು ವಿಷಯ ಮಾತ್ರ ನಿಜ... ಇವಳು ಒಂದೇ ಒಂದು ದಿನವೂ ಗಂಡನ ಮನೆಗೆ ಹೋಗಲಿಲ್ಲ. ಗಂಡನೊಡನೆ ಸಂಬಂಧವಿರಲಿಲ್ಲ."

"ಈ ವಿಷಯವೆಲ್ಲಾ ನಿಮಗೆ ಹೇಗೆ ಗೊತ್ತು? ಎಲ್ಲಾ ತೊಳಸಂಬಟ್ಟೆಯಾಗಿದೆ. ನಿಮ್ಮ ತಾಯಿ ನಿಮಗೆ ಹೇಳಿದ್ರಾ!.. ನಾನು ಬೇಕಾದ್ರೆ ಅವರ ಹತ್ರವೇ ಮಾತಾಡ್ತೀನಿ."

"ಈ ವಿಷಯಗಳನ್ನೆಲ್ಲ ನನ್ನೊಡನೆಯಾಗಲಿ, ನನ್ನ ತಾಯಿಯೊಡನೆಯಾಗಲಿ ಚರ್ಚಿಸುವುದು ಚೈತ್ರಳಿಗೆ ಇಷ್ಟವಾಗುವುದಿಲ್ಲ, ಅವಳಿಗೆ ನನ್ನ ತಾಯಿಯ ಬಗ್ಗೆ ಹೆಚ್ಚು ಗೌರವವಿಲ್ಲ. ನನ್ನ ಬಗ್ಗೆ ಮಮತೆ ಇಲ್ಲ...ಸಂಬಂಧವೂ ಬೇಕಿಲ್ಲ ಅವಳಿಗೆ."

"ಹಾಗ್ಯಾಕೆ ಅಂಥಾದ್ದೇನು ನಡೀತು? ನೋಡಿದ್ರೆ ಕೆಟ್ಟವಳು ಅಂತ ಅನ್ನಿಸುವುದಿಲ್ಲ."

"ಅದು ಕೆಟ್ಟತನ ಅಲ್ಲ, ಯಾರೇ ಅವಳ ಸ್ಥಾನದಲ್ಲಿದ್ದರೂ ಹೀಗೇ ವರ್ತಿಸುತ್ತಿದ್ದರೋ ಏನೋ...ಇದುವರೆಗೂ ಅಮ್ಮನಿಂದ, ನನ್ನಿಂದ ದೂರವಿದ್ದೇ ಬೆಳೆದವಳು..ನಿಜ ತಿಳಿದ ಮೇಲೆ ಅವಳಿಗೆ ಅಮ್ಮನ ಬಗ್ಗೆ ತಿರಸ್ಕಾರ ಹುಟ್ಟಿದೆ.."

"ನಿಮಗೆ ನಿಮ್ಮ ತಾಯಿಯ ಮೇಲೆ ಗೌರವವಿದೆ. ಪ್ರೀತಿ ಇದೆ. ಪಲ್ಲವಿಯಂತೆ, ಅಮ್ಮ ಮಾಡಿದ್ದು ತಪ್ಪು ಅಂತ ನಿಮಗೆ ಅನ್ನಿಸ್ಲಿಲ್ವಾ!"

"ಇಲ್ಲ, ಅಮ್ಮ ಯಾವ ತಪ್ಪನ್ನು ಮಾಡಿಲ್ಲ.. ಅವಳ ಮೇಲೆ ಪೂರಾ ನಂಬಿಕೆ ಇದೆ."

"ಹಾಗಾದ್ರೆ ಪಲ್ಲವಿಯ ತಂದೆ ಯಾರು?."

"ಪಲ್ಲವಿಯ ತಂದೆ ಯಶವಂತರಾಯರು, ತಾಯಿ ರಾಜಲಕ್ಷ್ಮಿ. ಆಕೆ ಈಗ ಬದುಕಿಲ್ಲ. ಆತನಿಗೆ ಆರೋಗ್ಯ ಚೆನ್ನಾಗಿಲ್ಲ. ಅವರಿಬ್ಬರ ಮಗಳು ಈ ಚೈತ್ರ...ಆದರೆ..

"ಸರಿ, ಹಾಗಾದ್ರೆ, ನಿಮ್ಮ ತಾಯಿ, ಹೇಗೆ ಅವಳಿಗೆ ತಾಯಿ ಆಗ್ತಾರೆ!.. ಸಾಕಿದಂತೆಯೂ ಇಲ್ಲ..."

"ಹೌದು, ನಮ್ಮಮ್ಮ ಅವಳನ್ನು ಸಾಕಿ ಬೆಳೆಸಲಿಲ್ಲ. ಆದರೆ ಹೊತ್ತು ಹೆತ್ತಿದ್ದು ನನ್ನ ಅಮ್ಮನೇ, ಬಾಡಿಗೆ ತಾಯಿಯಾಗಿ..."

"ಆಂ! ಏನು? ಬಾಡಿಗೆ ತಾಯೀನಾ!.. ವಿಚಿತ್ರವಾಗಿದೆಯಲ್ಲ.."

"ಹೌದು, ನನಗೆ ತಿಳಿದಾಗಲೂ ವಿಚಿತ್ರ ಎನಿಸಿತ್ತು. ತಾನು ಬಾಡಿಗೆ ತಾಯಿಗೆ ಹುಟ್ಟಿದವಳು ಅಂತ, ಚೈತ್ರ ನನ್ನ ಅಮ್ಮನನ್ನು ಗೌರವಿಸುವುದಿಲ್ಲ, ದ್ವೇಷಿಸ್ತಾಳೆ.. ಅವಳಿಗೆ ಈಗ ಯಾರನ್ನು ಕಂಡರೂ ಆಗುವುದಿಲ್ಲ. ಅವಳಿಗೆ ಒಬ್ಬ ಅಣ್ಣನಿದಾನೆ. ಅವನು ಅವಳ ತಂದೆ ತಾಯಿಗೆ ಸಾಕು ಮಗ. ಈಗ ಅವನನ್ನು ಕಂಡರೂ ಆಗುವುದಿಲ್ಲ. ಅವನ ಸ್ನೇಹಿತ ರಾಜೀವನನ್ನು ಇವಳು ಮದುವೆಯಾದಳು. ಆದರೆ ಅವನೂ ಬೇಡವಾದ.. ಹೀಗೇ ಏನೇನೇನೋ ನಡೆದಿದೆ.."

"ನಿಮ್ಮ ಮಾತುಗಳು ಹೆದರಿಕೆಯನ್ನು ಹುಟ್ಟಿಸುತ್ತದೆ.. ಹಾಗಾದ್ರೆ ಪಲ್ಲವಿ ಯಾರನ್ನೂ ಪ್ರೀತಿಸಲು ಸಾಧ್ಯವಿಲ್ಲವೆ!, ಎಲ್ಲರನ್ನೂ ದ್ವೇಷಿಸುವುದು ಅವಳ ಸ್ವಭಾವವೆ!...

“ಇಲ್ಲ, ಖಂಡಿತಾ ಹಾಗಿಲ್ಲ, ಒಳ್ಳೆಯ ಗುಣದವಳೇ, ಪರಿಸ್ಥಿತಿಯ ಅಸಹಾಯಕತೆಯಿಂದ ಏನೇನೋ ಆಗಿ ಹೋಯಿತು. ಈಗ ಕೆಲವು ವಾರಗಳಿಂದ ನೀವು ಅವಳನ್ನು ಕಂಡಿದ್ದೀರಿ. ಮಾತನಾಡಿದೀರಿ. ನೀವು ನಿಜವಾಗಿಯೂ ಅವಳನ್ನು ಪ್ರೀತಿಸುವುದಾದರೆ, ಅವಳ ಕೈ ಬಿಡಬೇಡಿ, ಅವಳೂ ನಿಮ್ಮನ್ನು ಪ್ರೀತಿಸುವಂತೆ ವರ್ತಿಸಿ.. ಅವಳು ನಿಮಗೆ ಒಲಿಯಬಹುದು.”

“ನಿಮ್ಮ ಮಾತುಗಳಿಂದ ಅವಳ ಮೇಲಿನ ಪ್ರೀತಿ ಕಡಿಮೆ ಆಗುವುದಿಲ್ಲ. ಆದರೆ ನಾನು ಪಲ್ಲವಿಯ ಮನಸ್ಸಲ್ಲಿ ಏನಿದೆ ಅಂತ ತಿಳಿದುಕೊಳ್ಳಲೇ ಬೇಕು. ಆದರೆ ನನಗೆ ನಿಮ್ಮ ಸಹಕಾರ ಬೇಕು.”

“ನನ್ನ ಸಹಕಾರ ಯಾವತ್ತೂ ಇದೆ. ನಿಮ್ಮ ಒಳ್ಳೆಯತನ ನನಗೆ ಇಷ್ಟವಾಗಿದೆ. ಆದರೆ, ಈ ವಿಷಯಗಳ ಬಗ್ಗೆ ನಮ್ಮಿಬ್ಬರ ನಡುವೆ ಮಾತುಕತೆ ನಡೆಯಿತು ಅಂತ ಅವಳಿಗೆ ತಿಳಿಯದಿರುವುದೇ ಕ್ಷೇಮ. ನಾನು ಅವಳಿಗೆ ವಾವೆಯಲ್ಲಿ ಅಣ್ಣ ನಿಜ. ಆದರೆ ಅವಳ ಪರವಾಗಿ ತೆಗೆದುಕೊಳ್ಳುವ ಯಾವ ಅಽಕಾರವು ನನಗಿಲ್ಲ. ನಾನು ಈ ವಿಷಯಗಳನ್ನು ಹೇಳದಿದ್ದರೂ ನಡೆಯುತ್ತಿತ್ತು. ಆದರೆ ತಿಳಿಸುವುದು ಕ್ಷೇಮ ಅಂತ ಅನ್ನಿಸಿತು.. ಭುಜಂಗ, ನೀವು ಒಳ್ಳೆಯವರು, ನನಗೆ ಹೇಮಾಳೂ ತಂಗಿಯೇ.. ಆದರೆ ಅವಳು ನಿಮ್ಮನ್ನು ತಿರಸ್ಕರಿಸಿದ್ದು ಸರಿಯಲ್ಲ, ಆದರೆ ಅವಳಿಗೆ ತಿಳುವಳಿಕೆ ಹೇಳುವ ಅಽಕಾರವೂ ನನಗಿಲ್ಲ. ಆದ್ದರಿಂದ ನೀವೇ ಸರಿಯಾದ ನಿರ್ಧಾರವನ್ನು ತೆಗೆದುಕೊಳ್ಳುವುದು ಒಳ್ಳೆಯದು. ಆ ನಿರ್ಧಾರದಿಂದ ಎಲ್ಲರಿಗೂ ಒಳ್ಳೆಯದಾಗುತ್ತದೆಂಬ ನಂಬಿಕೆ ನನಗಿದೆ. ಆದರೆ ದೊಡ್ಡಮ್ಮ ಏನಂದುಕೊಳ್ಳುವರೋ ಅಂತ ಆತಂಕ.. ಎಷ್ಟೇ ಆಗಲಿ, ಅವರು ಅವರ ಸ್ವಂತ ಮಗಳ ಪರದಲ್ಲಿ ನಿಲ್ತಾರೆ ಅಲ್ವಾ?”

“ಹೌದು ಚಿದಾನಂದ, ನೀವು ಹೇಳೋದು ನಿಜ. ಮೊದಲು ಪಲ್ಲವಿಯ ಒಪ್ಪಿಗೆ ಮುಖ್ಯ. ನಂತರ ನಾನೇ ಅತ್ತೆಯ ಹತ್ರ ಹೇಮಾಳ ನಿರ್ಧಾರವನ್ನು ತಿಳಿಸ್ತೀನಿ. ಅದೇ ಸರಿ. ಪಲ್ಲವಿ ತಾನಾಗಿಯೇ ಮಾತನಾಡಲಾರಳು ಅಂತ ನನಗೆ ಗೊತ್ತು. ನೀವು ಒಪ್ಪಿಸಿ ಅಂತಲೂ ಹೇಳುವುದಿಲ್ಲ. ನಿಮ್ಮನ್ನು ಬಿಟ್ಟು, ಇನ್ಯಾರಾದ್ರೂ, ಪಲ್ಲವಿಗೆ ಆಪ್ತರು ಯಾರಾದ್ರೂ ಇದಾರಾ?.. ಅವರು ಬಂದು ಹೇಳಿದರೆ ಸುಲಭವಾಗುತ್ತೆ.”

“ಚೈತ್ರಳ ಆಪ್ತ ಗೆಳತಿ ಶ್ವೇತಾ ಅಂತ ಒಬ್ಬಳಿದಾಳೆ...ಅವಳು ಮಾತಿನಲ್ಲಿ ಜಾಣೆ. ಚೈತ್ರಳಿಗೆ ಅನೇಕ ವಿಧದಲ್ಲಿ ಸಹಾಯ ಮಾಡಿದಾಳೆ. ಅವಳನ್ನು ಕರೆಸಬಹುದು. ಆದರೆ ಇವಳು ಇಲ್ಲಿದಾಳೆ ಅಂತ ಅವಳಿಗೆ ತಿಳಿಯದು...”

“ಹೋಗಲಿ ಬಿಡಿ. ಪಲ್ಲವಿಗೆ ತೊಂದರೆ ಒದಗುವಂಥ ಕೆಲಸ ಯಾವುದನ್ನು ಮಾಡುವುದು ಬೇಡ.. ಆದರೆ ಪಲ್ಲವಿಯನ್ನು ಇಲ್ಲಿಂದ ಕರೆದ್ಕೊಂಡು ಹೋಗಬೇಡಿ. ಅವಳು ಇಲ್ಲಿ ಕ್ಷೇಮವಾಗಿದಾಳೆ. ಹಾಗೇ ಅತ್ತೆಗೆ ಜೊತೆಯಾಗಿದಾಳೆ...”

“ದೊಡ್ಡಮ್ಮಂಗೆ ಅವಳು ಇಲ್ಲಿ ಇರುವುದು ಇಷ್ಟವಿಲ್ಲ ಅಂತ ಕಾಣಿಸುತ್ತೆ.”

“ನಾನು ಅತ್ತೆಯ ಹತ್ರ ಮಾತಾಡ್ತೀನಿ. ಆಗ ಎಲ್ಲಾ ಸಮಸ್ಯೆಗಳೂ ಮುಗಿಯುತ್ವೆ” ಎಂದು ಹೇಳಿ ಭುಜಂಗ ಬಂದ ದಾರಿಯಲ್ಲಿ ಹೆಜ್ಜೆ ಹಾಕತೊಡಗಿದ. ಚಿದಾನಂದನೂ ಹಿಂಬಾಲಿಸಿದ.

* * *

"ನಾನು ನಿಮ್ಮ ಜೊತೆ ಬರುವುದಿಲ್ಲ. ಸಧ್ಯಕ್ಕೆ ನಾನು ಇಲ್ಲಿಯೇ ಇರ್ತೀನಿ" ಚೈತ್ರ ಚಿದಾನಂದನಿಗೆ ಹೇಳಿದಳು. ಅವನಿಗೆ ಅಚ್ಚರಿಯಾಗಲಿಲ್ಲ.

"ನೀವು ಇಲ್ಲಿ ಇರುವುದು ಕ್ಷೇಮ. ಆದರೆ ಇಲ್ಲಿ ದೊಡ್ಡಮ್ಮನ ಮನೇಲಿ ಎಷ್ಟು ದಿನಗಳು ಇರುಕ್ಕೆ ಆಗುತ್ತೆ?...ಹೇಮಾ ಆಗ ಈಗ ಬರ್ತಾ ಇರ್ತಾಳೆ...ಅವಳಿಗೂ ಭುಜಂಗನಿಗೂ ಮದುವೆ ಗೊತ್ತಾಗಿದೆ...ಸಧ್ಯದಲ್ಲೇ ಮದುವೆ ಮಾಡ್ತೀವಿ ಅಂತ ದೊಡ್ಡಮ್ಮ ಹೇಳಿದ್ರು.."

"ಇಲ್ಲ ಆನಂದ್.. ಈ ಮದುವೆ ನಡೆಯುವುದಿಲ್ಲ, ಹೇಮಾ ಮಾಡಿಕೊಳ್ಳುವುದಿಲ್ಲ."

"ಹೌದಾ! ನಿಮಗೆ ಹೇಗೆ ಗೊತ್ತಾಯ್ತು! ಹೇಮಾ ಹೇಳಿದ್ಲಾ?"

"ಇಲ್ಲ, ಅವಳು ನನ್ಹತ್ರ ಹೆಚ್ಚು ಮಾತಾಡ್ಲಿಲ್ಲ, ಭುಜಂಗನಿಗೆ ಹೇಳಿದಾಳೆ.. ಅವರಿಗೆ ಬಹಳ ಅಪ್ಸೆಟ್ ಆಗಿದೆ..." ಅವರಿಗೆ ಹೀಗಾಗಬಾರದಾಗಿತ್ತು."

"ಯಾಕಂತೆ!.. ದೊಡ್ಡಮ್ಮಂಗೆ ಗೊತ್ತಾದ್ರೆ ದೊಡ್ಡ ರಂಪವೇ ಆಗುತ್ತೆ.. ಅವಳನ್ನು ಮೆಡಿಕಲ್ ಕಾಲೇಜಿಗೆ ಸೇರಿಸಿದ್ದೇ ತಪ್ಪಾಯಿತು...ಓದನ್ನೇ ಬಿಡಿಸಿ ಬಿಡ್ತಾರೆ ಅಷ್ಟೇ."

"ಅವಳಿಗೆ ತಾನು ಡಾಕ್ಟರಾಗುವವಳು ಅಂತ ಅಹಂಕಾರ. ಪಾಪ, ಭುಜಂಗ ಅವಳಿಗಾಗಿ ಇದುವರೆಗೂ ಕಾದಿದ್ದು ವ್ಯರ್ಥವಾಯಿತು.. ಒಂದು ವೇಳೆ ಇಬ್ಬರ ಮದುವೆ ನೆರವೇರಿದ್ರೂ ಇಬ್ಬರೂ ಸುಖವಾಗಿರ್ತಿರ್ಲಿಲ್ಲ..." ಚಿದಾನಂದ ಪಲ್ಲವಿಯ ಮನಸ್ಸನ್ನು ಓದಲು ಪ್ರಯತ್ನಿಸಿದ.

"ಹೋಗ್ಲಿ ಬಿಡಿ, ಭುಜಂಗ ಗಂಡಸು, ಅವರಿಗೇನು ಬೇರೆ ಹುಡುಗಿ ಖಂಡಿತಾ ಸಿಗ್ತಾಳೆ."

"ಹೌದು, ಸಿಗಲೇ ಬೇಕು. ಭುಜಂಗ ಒಳ್ಳೆಯವರು, ಇವರನ್ನು ಬಿಟ್ಟು, ಅವಳು ಬೇರೆ ಯಾರನ್ನೋ ನೋಡಿಕೊಂಡಿದಾಳಂತೆ. ಇದು ಮೋಸ ಅಲ್ವಾ!..."

"ಮೋಸ ಅಂತ ಹೇಗೆ ಹೇಳ್ತೀರಿ! ಸಧ್ಯ ಮದುವೆಗೆ ಮುಂಚೆಯೇ ತಿಳಿಸಿದ್ದು ಒಳ್ಳೇದೇ ಆಯ್ತು ಅಲ್ವಾ!...ಇಲ್ದಿದ್ರೆ ದೊಡ್ಡಮ್ಮನ ಬಲವಂತಕ್ಕೆ ಮದುವೆಯಾಗಿ ನಂತರ ಹೇಳಿದ್ದರೆ ಅದು ಮೋಸ ಆಗ್ತಿತ್ತು...ಇದನ್ನೆಲ್ಲ ನಿಮಗೆ ಭುಜಂಗ ಹೇಳಿದ್ರಾ?"

"ಆದರೂ ಹೇಮಾ ಮಾಡಿದ್ದು ಸರಿಯಲ್ಲ.. ಅವರಿಗೆ ಬಹಳ ಬೇಸರವಾಗಿದೆ. ಅವರು ಅವಳನ್ನು ಪ್ರೀತಿಸುವುದಿಲ್ಲ. ಖಂಡಿತಾ ಬೇರೆ ಮದುವೆಯಾಗ್ತಾರೆ.."

"ನಿಮಗೆ ಅವರು ಇಷ್ಟವಾಗಿದ್ರೆ ಹೇಳಿ, ನಾನು ಮಾತಾಡ್ತೀನಿ..."

"ಬೇಡ, ನನಗೋಸ್ಕರ ಯಾರೂ ಮಾತಾಡುವುದು ಬೇಡ. ನಾನೇ ಸಮಯ ನೋಡಿ ಮಾತಾಡ್ತೀನಿ. ಡೈವೋರ್ಸ್ ಪೇಪರ್‌ಗಳು ಸಿಕ್ಕಿದ್ದಿದ್ರೆ ಚೆನ್ನಾಗಿತ್ತು. ರಾಜೀವನ ಹೆಂಡತಿ ಅನ್ನೋ ಪಟ್ಟವನ್ನಿಟ್ಟುಕೊಂಡು, ನಾನು ಮತ್ತೆ ಹೇಗೆ ಮದುವೆಯಾಗ್ಲೀ..."

"ನಿಮಗೆ ಇಷ್ಟವಿದ್ದರೆ, ಎಲ್ಲವನ್ನೂ ಭುಜಂಗನಿಗೆ ಹೇಳಿ. ಡೈವೋರ್ಸ್ ಸಿಗುವವರೆಗೂ ಅವರು ಕಾಯ್ತಾರೆ.. ಇಲ್ದಿದ್ರೆ, ನಿಮ್ಮ ಮನಸ್ನಲ್ಲಿ ಏನಿದೆ ಅಂತ ಅವರಿಗೆ ತಿಳಿಯುವುದಾದ್ರೂ ಹೇಗೆ?..."

"ನೀವು ಬೆಂಗಳೂರಿಗೆ ಹೋಗಿ, ರಾಜೀವನ ಹತ್ರ ಮಾತನ್ನಾಡಿ, ಡೈವೋರ್ಸ್ ಯಾವಾಗ

ಸಿಗುತ್ತೆ ಅಂತ ತಿಳ್ಕೊಂಡು ಬಂದು ಹೇಳ್ತೀರಾ?...

"ನೀವೂ ಬರೋದಾದ್ರೆ ಕರ್ಕೊಂಡು ಹೋಗ್ತೀನಿ."

"ಇಲ್ಲ, ನಾನು ಎಲ್ಲಿಗೂ ಬರುವುದಿಲ್ಲ. ನನಗೆ ಅಲ್ಲಿಯ ಸಂಬಂಧಗಳು ಬೇಡ.."

"ಈ ಊರೇ ಒಗ್ಗಿ ಹೋಗಿರುವ ಹಾಗಿದೆ..."

"ಒಗ್ಗಿಸಿಕೊಳ್ಳುವ ಪ್ರಯತ್ನವನ್ನು ಮಾಡ್ತಿದೀನಿ...ಕೆಲವು ಅನುಕೂಲಗಳಿವೆ."

ಚಿದಾನಂದ ಮನದೊಳಗೇ ನಕ್ಕೊಂಡ. ಅವಳ ಮನದ ಇಂಗಿತ ತಿಳಿದಿತ್ತು. ಇವಳು ನನ್ನ ಸ್ವಂತ ತಂಗಿ ಅಲ್ಲ. ಆದರೂ ಒಂದು ಸಮೀಪದ ಸಂಬಂಧವಿದೆ. ಇವಳು ತನ್ನ ತಾಯಿ ಹೆತ್ತ ಮಗಳು ಅಂತ ತಿಳಿಯದೇ ಇದ್ದಿದ್ದರೇ...ಚೆನ್ನಾಗಿತ್ತೆನಿಸಿತ್ತು.. ಈಗ ಇವಳಿಗೆ ಯಾವ ಸಂಬಂಧಗಳ ಮೇಲೂ ವಿಶ್ವಾಸವಿಲ್ಲ. ಎಲ್ಲರನ್ನೂ ಬಿಟ್ಟು ಇಲ್ಲಿ ಬಂದು ಸೇರಿದ್ದಾಳೆ. ಇಲ್ಲಿ ಹೇಗಿರುತ್ತಾಳೋ..? ಇವಳಿಗೆ ಇವಳ ಸ್ವಂತದವರು ಅನ್ನೋರು ಯಾರೂ ಇಲ್ಲ. ಭುಜಂಗನನ್ನು ಮದುವೆಯಾದರೆ, ಸುಖವಾಗಿರುತ್ತಾಳೆ.. ಆದರೆ ಅಲ್ಲಿಯೂ ಅಡಚಣೆ.. ರಾಜೀವ ಏನಂತಾನೋ? ಶರತ್ ಏನ್ಮಾಡ್ತಾನೋ..? ಈ ದೊಡ್ಡಮ್ಮನ ಕಿರಿ ಕಿರಿ ಬೇಸರವನ್ನುಂಟು ಮಾಡಬಹುದು. ಅಮ್ಮನ್ನ ಇಲ್ಲಿಗೆ ಬಂದು ಅಕ್ಕನ ಮನೆಯಲ್ಲಿರು ಅಂತ ಹೇಳ್ಬೇಕು. ಚೈತ್ರಳಿಗೆ ಬೇಕಿರಲಿ ಬೇಡವಾಗಿರಲಿ, ತಾಯಿ ಹತ್ತಿರ ಇರ್ತಾಳೆ..." ಯೋಚಿಸಿಕೊಂಡ.

"ಚಿದೂ ಊಟಕ್ಕೆ ಬಾರೋ...ಹಾಗೇ ನಿನ್ನ ತಂಗಿಗೆ ಒಂದು ತಟ್ಟೆ ಹಾಕುವಂತೆ ಹೇಳು" ವೈದೇಹಿ ಎತ್ತರದ ಧ್ವನಿಯಲ್ಲಿ ಕೂಗಿ ಹೇಳಿದಾಗ, ಚಿದಾನಂದ ಎಚ್ಚೆತ್ತ. ಪಲ್ಲವಿ ಎದ್ದು ಒಳಕ್ಕೆ ಹೋಗಿದ್ದಳು. ಹಿಂದಿನಿಂದ ಭುಜಂಗ ಕರೆದು ನಿಲ್ಲಿಸಿದ.

"ಊಟ ಆದ್ಮೇಲೆ, ನಮ್ಮ ಮನೇ ಕಡೆ ಬನ್ನಿ..." ಎಂದ.

"ಬನ್ನಿ, ನೀವೂ ಊಟ ಮಾಡೋರಂತೆ.." ಚಿದಾನಂದ ಕರೆದ.

"ಅತ್ತೆ ಮನೆಯ ಊಟ ಅಪರೂವೇನಿಲ್ಲ. ಅದಕ್ಕೇನಂತೆ ಬರ್ತೀನಿ" ಎಂದು ಹೇಳಿದ. ಇಬ್ಬರೂ ಒಳಗೆ ಬಂದರು. "ಪಲ್ಲವೀ ನಂಗೊಂದು ತಟ್ಟೆಯನ್ನು ಹಾಕಿ. ನಾನೂ ಇಲ್ಲೇ ಊಟ ಮಾಡ್ತೀನಿ" ಎಂದ. ಪಲ್ಲವಿ ಕತ್ತೆತ್ತಿ ನೋಡಿ ನಸುನಕ್ಕು ಮೂವರಿಗೂ ತಟ್ಟೆಗಳನ್ನಿಟ್ಟಳು. ಅತ್ತೇ, ಮಾವನ ಊಟ ಆಯ್ತಾ!...ಹೇಗಿದಾರೆ! ಈ ನಡುವೆ ಅವರನ್ನು ನೋಡಿ ಮಾತನಾಡ್ಸುಕ್ಕೇ ಆಗಿಲ್ಲ" ಎಂದ ಚಾಪೆಯ ಮೇಲೆ ಕುಳಿತುಕೊಳ್ಳುತ್ತಾ..

"ನಿಂಗೆಲ್ಲಪ್ಪಾ ಬಿಡುವು...?" ಎನ್ನುತ್ತಾ ವೈದೇಹಿ ಎಲ್ಲರಿಗೂ ಬಡಿಸಿದಳು. ಭುಜಂಗ ಆಗಾಗ್ಗೆ ಪಲ್ಲವಿಯ ಕಡೆ ನೋಡುತ್ತಿರುವುದನ್ನು ಆಕೆ ಗಮನಿಸಿದ್ದಳು. ಪಲ್ಲವಿಯ ಉದಾಸೀನತೆ ಕಡಿಮೆಯಾಗಿರುವುದನ್ನು ಗಮನಿಸಿದ್ದಳು. ಚಿದಾನಂದನ ಕಡೆ ನೋಡಿದಳು. ಅವನು ಕತ್ತು ತಗ್ಗಿಸಿ ತನ್ನ ಪಾಡಿಗೆ ತಾನು ಊಟದ ಕಡೆ ಗಮನವನ್ನಿಟ್ಟಿದ್ದ. ಹೆಚ್ಚು ಮಾತು ಕತೆ ಇಲ್ಲದೆ ಊಟ ಬೇಗನೇ ಮುಗಿಯಿತು.

ಕೈ ತೊಳೆದುಕೊಂಡು, ಇಬ್ಬರು ಭುಜಂಗನ ಮನೆಯ ಕಡೆಗೆ ಹೊರಟರು.

“ದೊಡ್ಡಮ್ಮ ನೀವು ಕೂತ್ಕೊಳ್ಳಿ”.. ನಾನು ಬಡಿಸ್ತೀನಿ. “ಮೊಟ್ಟ ಮೊದಲ ಬಾರಿಗೆ ಅವಳು ವೈದೇಹಿಯನ್ನು ಉಪಚರಿಸಿದ್ದಳು. ವೈದೇಹಿ ಕುಳಿತಳು.

ಚಿದಾನಂದ, ತನ್ನ ಹಾಗೂ ಚೈತ್ರಳ ನಡುವೆ ನಡೆದ ಮಾತನ್ನು ಭುಜಂಗನಿಗೆ ತಿಳಿಸಿದ. ಭುಜಂಗನಿಗೆ ಖುಷಿಯಾಗಿತ್ತು.. “ಅವಳೇ ನಿಮ್ಮ ಹತ್ರ ಎಲ್ಲವನ್ನು ತಿಳಿಸ್ತಾಳೆ. ಆದರೆ ಅದಕ್ಕೆ ಮುಂಚೆ ರಾಜೀವನೊಡನೆಯ ಸಂಬಂಧ ಪೂರ್ಣವಾಗಿ ಕಳಚಬೇಕು ಅಂತ ಅವಳ ಇಚ್ಛೆ. ನಾನು ಸಧ್ಯದಲ್ಲೇ ಬೆಂಗಳೂರಿಗೆ ಹೋಗ್ತೀನಿ...ಚೈತ್ರಳ ಅಗತ್ಯವಿದ್ದರೆ, ನಾನು ನಿಮಗೆ ಫೋನು ಮಾಡ್ತೀನಿ. ನೀವು ಅವಳನ್ನು ಕರ್ಕೊಂಡು ಬರ್ಬೇಕಾಗುತ್ತೆ..” ಅಂತಂದ.

“ಆಗ್ಲಿ, ಕರ್ಕೊಂಡು ಬರ್ತೀನಿ. ನಾನು ಪಲ್ಲವಿಯ ತಂದೆಯನ್ನು ನೋಡಿದ ಹಾಗಾಗುತ್ತೆ.. ಅಗತ್ಯ ಬಿದ್ದರೆ ಶರತ್ ಜೊತೆಯೂ ಮಾತಾಡ್ತೀನಿ..” ಅಂತಂದ. ಚಿದಾನಂದ ಆತಂಕಗೊಂಡ.

“ಪಲ್ಲವಿಯ ಯೋಗಕ್ಷೇಮ ನಿಮಗೆ ಸೇರಿದ್ದು..” ಎಂದ ಅವನ ಕೈಗಳನ್ನು ಹಿಡಿದು.

* * *

ಚಿದಾನಂದ ಊರಿಗೆ ಹೊರಟು ಹೋಗಿದ್ದ. ತನಗೆ ಬೇಡವಾದ ಸಂಬಂಧಗಳ ಬಗ್ಗೆ ಯೋಚಿಸುತ್ತಿದ್ದ ಚೈತ್ರಳಿಗೆ ಒಬ್ಬಳೇ ಕೂತಿರುವುದು ಬೇಸರವೆನಿಸಿತು. ಹಾಗೇ ತಿರುಗಾಡಿ ಬಂದರೆ, ಮನಸ್ಸು ತಿಳಿಯಾಗುವುದೆಂದುಕೊಂಡು ಆಂಟಿಗೆ ಹೇಳಿ ಆಚೆ ನಡೆದಳು. ಸ್ವಲ್ಪವೇ ಹೊತ್ನಲ್ಲಿ ಭುಜಂಗ ಅತ್ತೆಯ ಮನೆಗೆ ಬಂದ. ಅತ್ತಿತ್ತ ನೋಡಿದ, ಪಲ್ಲವಿ ಕಾಣಲಿಲ್ಲ. ಮಾವನನ್ನು ಮಾತನಾಡಿಸಿ, ಅತ್ತೆಯನ್ನು ಕೇಳಿದ.

“ಪಲ್ಲವಿ ಎಲ್ಲಿಗೆ ಹೋದ್ಲು ಅತ್ತೇ?..ನಮ್ಮ ಮನೆಗೆ ಬಂದಂತಿಲ್ಲ.”

“ಬಂದು ಇಷ್ಟು ದಿನಗಳಾಯ್ತು ನಿಮ್ಮ ಮನೆಗೆ ಎಂದು ಬಂದಿದಾಳೆ?.. ನೀನು ನಿಮ್ಮಮ್ಮ ನಿಮ್ಮಪ್ಪನಿಗೆ ಹೆದರ್ತೀಯ. ನನ್ನನ್ನ ಕಂಡ್ರೆ ಭಯವೇ ಇಲ್ಲ ನಿಂಗೆ.”

“ಯಾಕೆ ಹೀಗೆ ಮಾತಾಡ್ತೀರಿ ಅತ್ತೆ...ಅಂಥಾದ್ದೇನು ಮಾಡ್ದೆ ನಾನು?”

“ಚಿದಾನಂದ ಪಲ್ಲವೀನ ಇಲ್ಲೇ ಬಿಟ್ಟು ಹೋದ. ಕೇಳಿದ್ರೆ ಸರಿಯಾಗಿ ಹೇಳ್ಲಿಲ್ಲ. ನೀವೆಲ್ಲಾ ಒಂದು. ನಿನ್ನ ಮೇಲೆ ಅವಳ ಜವಾಬ್ದಾರಿಯನ್ನು ವಹಿಸಿ ಹೋದವನ ಥರ ನೀನೂ ಆಡ್ತೀಯ. ಇಲ್ಲೇ ಎಲ್ಲೋ ಹೋಗಿರ್ತಾಳೆ ಬಿಡು. ಬರ್ತಾಳೆ, ಮೊದಲ್ನಿಂದ್ಲೂ ಇವಳೇ ಇದ್ಲಾ ನಿಂಗೆ?.. ಈಗ ನನ್ನನ್ನ ಕೇಳ್ಕೊಂಡು ಬರೋದೇ ಇಲ್ಲ ನೀನು.. ಅವಳಿಗೋಸ್ಕರ ಬರ್ತೀಯ..”

“ಹಾಗೇನಿಲ್ಲ ಅತ್ತೆ...ಇಲ್ಲಿ ನಿಮ್ಮ ಮನೇಲಿ ನಿಮ್ಮಿಬ್ಬರನ್ನು ಬಿಟ್ಟರೆ ಬೇರೆ ಯಾರಿದಾರೆ!.. ನೀವು ಎದುರಿಗೇ ಕಾಣ್ತೇರಿ. ಮಾವ ಮಲಗಿರ್ತಾರೆ. ಸುಮ್ಮನೇ ಕೇಳ್ತೀನಿ ಅಷ್ಟೇ.”

“ಸುಮ್ಮನಿರು, ನಂಗೆಲ್ಲಾ ಗೊತ್ತು. ಬೆಕ್ಕು ಕಣ್ಣುಮುಚ್ಕೊಂಡು ಹಾಲು ಕುಡಿದ ಸಮಾಚಾರ.. ಹೇಮಾ ಪೆದ್ದು. ನಿನ್ಮೇಲೆ ವಿಪರೀತ ನಂಬಿಕೆ. ನೀನು ಇವಳ ಜೊತೆ ವಿಪರೀತ ಸುತ್ತಾಡ್ತೀಯ ಅಂತ ಗೊತ್ತಾಗ್ಲಿ.. ನಿನ್ನನ್ನ ತರಾಟೆಗೆ ತಗೊಳ್ದೇ ಬಿಡುಲ್ಲ.”

"ಗೊತ್ತಾದ್ರೆ ಏನ್ಮಾಡ್ತಾಳೆ ಅತ್ತೇ..." ಉತ್ತರವನ್ನು ಕಾತುರದಿಂದ ನಿರೀಕ್ಷಿಸಿದ.

"ತಕ್ಷಣವೇ ನಿನ್ನನ್ನ ಮದುವೆಯಾಗ್ತಾಳೆ...ನಿನ್ನ ನೋಟ ಅತ್ತ ಇತ್ತ ತಿರುಗದಂತೆ ನಿನ್ನನ್ನ ಕಟ್ಟಿ ಹಾಕ್ತಾಳೆ." ಭುಜಂಗನಿಗೆ ಆಕೆಯ ಕಡೆ ನೋಡಲು ಸಾಧ್ಯವಾಗಲಿಲ್ಲ. ಕತ್ತು ತಗ್ಗಿಸಿದ. ಮಗಳ ಮೇಲೆ ಕಿಂಚಿತ್ತೂ ಅನುಮಾನವಿಲ್ಲ. ಇದೆಂಥಾ ಮೂಢತನ ಎನಿಸಿತು.

"ಅತ್ತೇ.. ನಾನು ತೋಟಕ್ಕೇ ಹೋಗ್ಬೇಕು" ಎಂದು ಬಾಗಿಲ ಕಡೆಗೆ ನಡೆದ.

"ನನ್ಮೇಲೆ ಕೋಪ ಮಾಡ್ಕೋಬೇಡ ಕಣೋ ಭುಜಿ...ನಂಗೆ ನಿನ್ನನ್ನ ಬಿಟ್ರೆ ಬೇರೆ ಯಾರಿದಾರೆ ಹೇಳು. ಹೇಮಂಗೆ ಮೋಸ ಮಾಡ್ಬೇಡ ಕಣೋ.."

"ಈ ಸಾರಿ ಹೇಮ ಬಂದಾಗ ನಾನೂ ಮಾತಾಡ್ತೀನಿ. ನೀವೂ ಮಾತ್ನಾಡಿ. ಅವಳು ಬೇಗ ಒಂದು ನಿರ್ಧಾರಕ್ಕೆ ಬರುವುದು ಒಳ್ಳೆಯದು" ಎಂದು ಹೇಳಿ ಬಾಗಿಲನ್ನು ದಾಟಿದ. ಮನಸ್ಸು ಕಸಿವಿಸಿಗೊಂಡಿತ್ತು. ತನ್ನ ಬಗ್ಗೆ ಅತ್ತೆಗೆ ಸಂಶಯ ಬರುತ್ತಿರಬಹುದೇ.. ಹೇಮಾ ಯಾಕೆ ನೇರವಾಗಿ ಅಮ್ಮನ ಹತ್ರ ಮಾತ್ನಾಡಬಾರದು ಅಂತ ಯೋಚಿಸುತ್ತಾ, ಸೀದಾ ತೊರೆಯ ಬಳಿಗೆ ಬಂದ. ಬಂಡೆಯ ಬಳಿ ಕುಳಿತು, ನೀರಿನೊಡನೆ ಚೆಲ್ಲಾಟವಾಡುತ್ತಿದ್ದ ಪಲ್ಲವಿಯನ್ನು ಕಂಡ. ಏನೋ ಉಲ್ಲಾಸಗೊಂಡಿರುವಂತಿದೆ ಏನಿರಬಹುದು ಎಂದುಕೊಂಡು ಅವಳನ್ನು ಸಮೀಪಿಸಿದ. ಹೆಜ್ಜೆಯ ಸಪ್ಪಳವನ್ನು ಕೇಳಿ ಅವಳು ತಿರುಗಿದಳು.

"ಓ..ನೀವಾ! ನನ್ನನ್ನ ಹುಡುಕ್ಕೊಂಡು ಬಂದ್ರಾ?.."

"ಹುಂ, ಮತ್ತೆ ಹೀಗೆ ಒಂಟಿಯಾಗಿ ಬಂದ್ಬಿಟ್ರೆ ಆತಂಕ ಆಗುಲ್ವಾ?"

"ಆತಂಕ ಯಾಕೆ! ನೀವೇನು ನನ್ನ ಬಾಡಿಗಾರ್ಡಾ?" ಭುಜಂಗ ತಿಳಿಯಾಗಿ ನಕ್ಕ.

"ಓ..ಹಾಗಾದ್ರೆ, ನಾನು ನಿಮ್ಮ ಬಾಡಿಗಾರ್ಡ್ ಆಗಿರಲಿ ಅಂತ ನೀವು ಬಯಸ್ತೀರಿ ಅಂತ ಅರ್ಥ ಆಯ್ತು...ಚಿದಾನಂದ ಬಂದಿದ್ರಲ್ಲ.. ನಿಮ್ಮ ಮನೆಯ ವಿಷಯಗಳನ್ನು ಹೇಳಿದ್ರಾ?"

"ನನಗಿಂತ ಹೆಚ್ಚು ನಿಮ್ಮ ಹತ್ರಾನೇ ಮಾತಾಡ್ತಿದ್ದ ಹಾಗಿತ್ತು.."

"ಕೆಲವು ಮುಖ್ಯವಾದ ವಿಷಯಗಳ ಬಗ್ಗೆ ಮಾತನಾಡಿದೆವು. ಆದರೆ ನಿಮ್ಮ ಬಗ್ಗೆ ಅಲ್ಲ ಬಿಡಿ.." ಅವನೂ ನೀರಿನಲ್ಲಿ ಕೈಯಾಡಿಸುತ್ತಾ ನುಡಿದ. ಅವಳು ನಿರಾಳವಾಗಿದ್ದಾಳೆನಿಸಿತು.

"ಒಳ್ಳೇದೇ ಆಯ್ತು ಬಿಡಿ... ಅವರಿಗೆ, ನನ್ನ ಬಗ್ಗೆ ಮಾತನಾಡಲು ಯಾವ ಹಕ್ಕೂ ಇಲ್ಲ."

"ಅಂದ್ರೇ ಏನರ್ಥ? ಅಣ್ಣನಾದವನಿಗೆ ತಂಗಿಯ ಬಗ್ಗೆ ಅಲ್ಪಸ್ವಲ್ಪ ಹಕ್ಕು ಇರುತ್ತೇ ಅಲ್ವಾ!"

"ಚಿದಾನಂದ ನನ್ನ ಅಣ್ಣ ಅಲ್ಲ, ಮಂದಾಕಿನಿ ನನ್ನ ತಾಯಿ ಅಲ್ಲ...ನನ್ನ ತಾಯಿ ಸತ್ತು ಹೋಗಿದಾರೆ. ತಂದೆ ಅನಾರೋಗ್ಯದಿಂದ ಅಲ್ಲಾಡದೇ ಮಲಗಿರ್ತಾರೆ." ಉದ್ವೇಗಗೊಂಡಿದ್ದಳು.

"ಉದ್ವೇಗ ಯಾಕೆ ಪಲ್ಲವಿ? ನಂಗೆ ಗೊತ್ತಿರ್ಲಿಲ್ಲ..." ಅವನು ಅವಳ ಭುಜವನ್ನು ಒತ್ತಿದ. ಅವಳು ಅವನ ಭುಜಕ್ಕೆ ಒರಗಿಕೊಂಡಳು.

"ನನ್ನವರು ಅಂತ ಸಂಗ್ಯಾರೂ ಇಲ್ಲ ಭುಜಂಗ್...ನಂಗೆ ಎಲ್ಲಾ ಮೋಸ ಅಂತ ಅನ್ನಿಸ್ತಿದೆ.

ಮನಸ್ಸು ಕಳವಳಗೊಳ್ಳುತ್ತೆ.. ಆತ್ಮಹತ್ಯೆ ಮಾಡ್ಕೋಬೇಕು ಅಂತ ಅನ್ಸುತ್ತೆ...ಆದರೆ ಧೈರ್ಯವಿಲ್ಲ."

"ಈ ತೊರೆಗೆ ಬಿದ್ರೆ, ಖಂಡಿತಾ ಯಾರೂ ಸಾಯುಲ್ಲ. ಕೈ ಕಾಲು ಮುರಿಯುತ್ತೆ ಅಷ್ಟೆ. ಅತ್ತೆಗೆ ಕಷ್ಟವಾಗುತ್ತೆ. ಮತ್ತೆ ಈ ಬಾಡಿಗಾರ್ಡ್‌ಗೇ ಕೆಲಸ ಬೀಳುತ್ತೆ" ನಗಿಸಲು ನೋಡಿದ.

"ನಿಮಗೆ ತಮಾಷೆ, ನನ್ನ ಮನಃಸ್ಥಿತಿ ಅರ್ಥವಾಗುಲ್ಲ..."

"ಹೇಳಿದ್ರೆ ಅರ್ಥವಾಗುತ್ತೆ.. ಈ ಭುಜಂಗ ಎಂಥಾ ಸಹಾಯ ಮಾಡೋಕು ತಯಾರು.." ತನ್ನ ತೋಳನ್ನೆತ್ತಿ ತೋರುತ್ತಾ ನುಡಿದ.

"ನಾನು ಹೇಗೆ ಹೇಳ್ಲೀ ಭುಜಂಗ್..? ನನ್ನ ಹಿಂದೆ ಒಂದು ಕತೆಯೇ ನಡೆದು ಹೋಗಿದೆ. ನಾನು ಯಾರಿಗೂ ಬೇಡವಾದವಳು."

"ಹಾಗೆ ಹೇಳ್ಬೇಡಿ, ನನಗೆ ನೀವು ಬೇಕು.. ನೀವು ಅಂದ್ರೆ ನಂಗೆ ತುಂಬಾ ಇಷ್ಟ"

"ನನ್ನ ವಿಷಯ ತಿಳಿದ್ರೆ, ನೀವೂ ನನ್ನನ್ನ ತಿರಸ್ಕರಿಸ್ತೀರಿ, ಖಂಡಿತಾ ಇಷ್ಟ ಪಡುಲ್ಲ."

"ಇಲ್ಲ, ಖಂಡಿತಾ ಇಲ್ಲ, ಏನೇ ನಡೆದಿರಲಿ, ನೀವು ಹೇಗೇ ಇದ್ದರೂ, ನಾನು ಇಷ್ಟ ಪಡ್ತೀನಿ. ಇದು ನನ್ನ ಗರುಡ ಮಚ್ಚೆಯ ಆಣೆಗೂ ಸತ್ಯ.."

"ಇಲ್ಲ ಭುಜಂಗ್, ನಿಮ್ಮ ಪ್ರೀತಿಗೆ ನಾನು ಅರ್ಹಳಲ್ಲ.. ನಾನು ಒಳ್ಳೆಯವಳಲ್ಲ."

"ಹಾಗಂತ ಯಾರು ಹೇಳ್ತೋರು?... ನೀವು ಕೆಟ್ಟವರಲ್ಲ ಅಂತ ನಂಗೆ ಗೊತ್ತಿದೆ."

"ಇಲ್ಲ ಭುಜಂಗ್.. ನಾನು ಕೆಟ್ಟವಳು, ಯಾರಿಗೂ ಬೇಡವಾದವಳು, ಕಳಂಕಿನಿ ಅನ್ನೋ ಅಪವಾದ ಹೊತ್ತವಳು.." ಎನ್ನುತ್ತಾ ಅಳತೊಡಗಿದಳು. ಅವನಿಗೆ ಪೆಟ್ಟಾಗಿತ್ತು.

"ಯಾಕೆ ನಿಮಗೆ ನೀವೇ ದೋಷಗಳನ್ನು ಹೊರಿಸಿಕೊಳ್ತೀರಿ?.. ನನ್ನೊಡನೆ ನೀವು ಏನನ್ನೂ ಹೇಳದಿದ್ದರೂ ಪರವಾಗಿಲ್ಲ. ನನಗೆ ನೀವು ಇಷ್ಟವಾಗಿದೀರಿ ಅಷ್ಟು ಸಾಕು. ನೀವು ಒಪ್ಪಿಗೆ ಕೊಟ್ಟ ಕೂಡಲೇ ನಾನು ಮನೆಯವರೊಡನೆ ಮಾತನಾಡಿ, ನಮ್ಮ ಮದುವೆಗೆ ಏರ್ಪಾಟು ಮಾಡಿಸ್ತೀನಿ.. ಈ ನದೀ ದೇವತೆಯ ಮೇಲಾಣೆ. ನಾನು ನಿಮ್ಮನ್ನು ಚೆನ್ನಾಗಿ ನೋಡಿಕೊಳ್ತೀನಿ. ನಿಮಗೆ ಯಾವ ಆತಂಕವೂ ಬೇಡ..." ಎನ್ನುತ್ತಾ ಅವಳನ್ನು ತನ್ನ ದೇಹಕ್ಕೆ ಒರಗಿಸಿಕೊಂಡ.

ಅವನ ಮೈಯ ಬಿಸಿ ಅವಳಲ್ಲಿ ವಿಶ್ವಾಸವನ್ನು ತುಂಬಿತು. ಅವನ ಸಾಮೀಪ್ಯ ಹೊಸ ಹೊಸ ತರಂಗಗಳನ್ನು ಎಬ್ಬಿಸಿದವು. ಹಾಗೇ ಅವನೊಟ್ಟಿಗೆ ಕುಳಿತಿರುವ ಮನಸ್ಸಾಗಿತ್ತು. ಅವನು ಮೆಲ್ಲನೆ ಅವಳನ್ನು ಸರಿಸಿದ.

"ಮನೆಗೆ ಹೋಗೋಣ...ಮನೆಯವರು ಹುಡುಕಿಕೊಂಡು ಬಂದಾರು" ಎಂದ.

"ನನಗೆ ತುಂಬಾ ಗೊಂದಲ ಆಗ್ತಿದೆ ಭುಜಂಗ್.. ಭಯವೂ ಆಗ್ತಿದೆ" ಎಂದಳು.

"ಈ ಬಾಡಿಗಾರ್ಡ್ ಇರುವಾಗ ನಿಮಗೆಂಥಾ ಭಯ..?" ಅವಳನ್ನು ಎತ್ತಿಕೊಂಡ. ಅವಳು ತನ್ನ ತೋಳುಗಳನ್ನು ಹಾರವಾಗಿ ಹಾಕಿದಳು. ಅವಳನ್ನೆತ್ತಿಕೊಂಡಂತೆಯೇ ಬಂಡೆಗಳನ್ನು ದಾಟಿ, ತೊರೆಯ ಅತ್ತ ದಡದಲ್ಲಿದ್ದ ಗವಿಯ ಬಳಿಗೆ ಬಂದು, ಅವಳನ್ನು ಇಳಿಸಿದ.

"ಆ ದಿನ ಕರೆದ್ರೆ ನೀವು ಬರ್ಲಿಲ್ಲ, ಇವತ್ತು ನಾನೇ ಕರ್ಕೊಂಡು ಬಂದಿದೀನಿ. ಈ ಗವಿಯ ಬಾಯಿಗೆ, ಬಾಯನ್ನಿಟ್ಟು ನಿಮ್ಮ ಆಸೆ ಏನಿದೆಯೋ ಅದನ್ನು ಕೇಳ್ಕೊಳ್ಳಿ..ಖಂಡಿತಾ ನೆರವಾಗುತ್ತೆ."

"ನನಗೆ ಇದರಲ್ಲೆಲ್ಲಾ ನಂಬಿಕೆ ಇಲ್ಲ. ನಿಮ್ಮ ಆಸೆ ಯಾವುದಾದ್ರೂ ನೆರವೇರಿದ್ಯಾ?"

"ಹುಂ, ಒಂದು ಆಸೆ ನೆರವೇರುವ ಹಂತದಲ್ಲಿದೆ.. ಈ ದೇವಿಯವರ ಕೃಪೆ ಇದ್ದರೆ ಬೇಗ ನೆರವೇರುತ್ತೆ" ಎಂದ ಅವಳ ಮುಂದೆ ಬಾಗಿ. ಅವಳಿಗೆ ನಗು ಬಂತು. ಅವನ ತಲೆಯ ಮೇಲೆ ಮೆಲ್ಲಗೆ ಏಟನ್ನು ಹಾಕಿದಳು.

"ನನ್ನನ್ನ ನಿಮ್ಮ ಮನೆಯವರು ಒಪ್ಕೋತಾರಾ ಭುಜಂಗ್?"

"ಒಪ್ಪದೇ ಇರುವಂಥ ಕಾರಣಗಳು ಯಾವುದೂ ಇಲ್ಲ.. ಆ ನಂಬಿಕೆ ನನಗಿದೆ."

"ಒಂದು ವೇಳೆ ನನಗೇ ನೀವು ಒಪ್ಪಿಗೆಯಾಗದಿದ್ರೆ?" ಸವಾಲೆಸೆದು ಕೆಣಕಿದಳು.

"ನಾಲ್ಕು ಬಾರಿಸಿ, ಒಪ್ಪಿಸ್ತೀನಿ. ಏನಂದ್ಕೊಂಡಿದೀರಿ ನನ್ನನ್ನ?"

"ಅಷ್ಟು ಸುಲಭ ಅಲ್ಲ ಮಿ॥ ಬಾಡಿಗಾರ್ಡ್, ಹೊಡೀರಿ ನೋಡೋಣ.."

"ಅವನು ಬೆರಳನ್ನು ಅವಳ ಕೆನ್ನೆಗೆ ತಾಗಿಸಿದ.. ನಿಮಗೆ ನನ್ನ ಕೋಪ ಗೊತ್ತಿಲ್ಲ. ಹೆಡೆ ಎತ್ತಿದರೆ, ನಾನು ಭುಜಂಗನೇ...ಸುಮ್ಮನೇ ನನ್ನನ್ನ ಸತಾಯಿಸ್ಬೇಡಿ..." ಎನ್ನುತ್ತಾ ಅವಳ ಕೈ ಹಿಡಿದು, ಗವಿಯ ಕಿಂಡಿಗೆ ಬಾಯನ್ನಿಟ್ಟು, "ಪಲ್ಲವೀ...ನಾನು ನಿಮ್ಮನ್ನು ತುಂಬಾ ಪ್ರೀತಿಸ್ತೀನಿ" ಅಂತ ಕೂಗಿ ಹೇಳಿದ. ಅವನ ನುಡಿಗಳು ಮಾರ್ದನಿಗೊಂಡವು. ಅವಳು ಗವಿಯ ಬಂಡೆಗೆ ಕಿವಿಯಾನಿಸಿ ಕೇಳಿಸಿಕೊಂಡಳು ಪುಳಕಿತಳಾದಳು. "ನಿಮಗೇನಾದ್ರೂ ಹೇಳೋದು ಇದೆಯಾ?" ಅವನು ಕೇಳಿದ.

"ಇನ್ನೊಂದು ದಿನ ಹೇಳಿದರೆ ಆಗುಲ್ವಾ?"..

"ನೀವು ತುಂಬಾ ಜಿಪುಣರು.." ಹಂಗಿಸಿದ..

"ಹಾಗೇ ಅಂದ್ಕೊಳ್ಳಿ..." ಎಂದಳು ಕಿಲಕಿಲನೆ ನಗುತ್ತಾ.

"ನೀವು ನಗ್ತಾ ಇದ್ದರೆ ನಿಮ್ಮನ್ನೇ ನೋಡ್ತಾ ಇರೋಣ ಅಂತ ಅನ್ನಿಸುತ್ತೆ...ಇನ್ನು ಸ್ವಲ್ಪ ಹೊತ್ತು ಇದೇ ಸ್ಥಳದಲ್ಲಿದ್ದರೆ, ನನ್ನನ್ನ ನಾನೇ ಮರೆತು ಬಿಡ್ತೀನಿ ಅಷ್ಟೆ. ನನ್ನಿಂದ ಏನಾದರೂ ಅಚಾತುರ್ಯ ನಡೆಯುವ ಮೊದಲೇ, ನಾವಿಬ್ಬರೂ ಇಲ್ಲಿಂದ ಹೋಗಿ ಬಿಡ್ಬೇಕು. ಅದೇ ಕ್ಷೇಮ" ಎನ್ನುತ್ತಾ, ಮತ್ತೆ ಅವಳನ್ನು ಎತ್ತಿಕೊಂಡ. ಇಬ್ಬರೂ, ಮತ್ತೆ ಇತ್ತ ದಡಕ್ಕೆ ಬಂದರು. ಅವನು ಏದುಸಿರು ಬಿಡುತ್ತಾ ಅವಳನ್ನು ಇಳಿಸಿದ. ಹಣೆಯ ಮೇಲೆ ಬೆವರಿನ ಹನಿಗಳು ಮೂಡಿದವು. ಅವಳು ತನ್ನ ದುಪ್ಪಟ್ಟಾದ ತುದಿಯಿಂದ ಬೆವರಿನ ಹನಿಗಳನ್ನು ಒರೆಸಿದಳು.

"ಕಷ್ಟಪಟ್ಟರೆ ಫಲವುಂಟು ಅಂತಾರೆ...ಹಾಗೇ ಬೆವರು ಸುರಿಸಿದ್ದಕ್ಕೂ ಸಾರ್ಥಕವಾಯ್ತು." ಎಂದ.

"ನಿಮಗೆ ಏನಾದ್ರೂ ಉಡುಗೊರೆ ಕೊಡ್ಬೇಕು ಅಂತ ಅನ್ನಿಸ್ತಿದೆ, ಏನ್ಬೇಕು ಕೇಳಿ."

"ನನಗೆ ನೀವು ಬೇಕು.. ಆಮೇಲೆ ಉಳಿದದ್ದೆಲ್ಲಾ ತಾನಾಗಿಯೇ ಸಿಗುತ್ತೆ" ಅಂತಂದ ತುಂಟತನದಿಂದ, ಅವಳು ನಾಚಿಕೆಯಿಂದ ಕೆಂಪಾದಳು.. ಮೌನಿಯಾದಳು. ಮೌನ ಸಮ್ಮತಿಯ ಲಕ್ಷಣ ಅಂತ ಅಂದುಕೊಂಡ.." ನಡೀರಿ ಹಾಗೇ ಹೆಜ್ಜೆ ಹಾಕ್ತಾ ಮಾತಾಡೋಣ" ಎಂದ. ಇಬ್ಬರೂ ಕೈ ಕೈ ಹಿಡಿದು ಅಕ್ಕ ಪಕ್ಕದಲ್ಲಿ ನಡೆದರು.

"ನಾನು ನಿಮ್ಮಿಂದ ಒಂದು ವಿಷಯವನ್ನು ಮುಚ್ಚಿಟ್ಟಿದೀನಿ..ಭುಜಂಗ್.."

"ಈಗ ಅವಸರವೇನು! ನಿಧಾನವಾಗಿ ಹೇಳೋರಂತೆ. ಈಗ ಬೇಗ ಮನೆಗೆ ಹೋಗೋಣ. ಹೊಟ್ಟೆ ಹಸೀತಿದೆ. ನಮ್ಮ ಮನೆಗೇ ಬನ್ನಿ. ಅಮ್ಮ ಸೊಗಸಾಗಿ ಅಡಿಗೆ ಮಾಡ್ತಾಳೇ.."

"ಇವತ್ತು ಬೇಡ ಭುಜಂಗ್, ಚಿದಾನಂದ್ ವಾಪಸ್ಸು ಬರಲಿ, ಹೋಗಿ ಎರಡು ದಿನಗಳು ಕಳೆದವು. ಫೋನನ್ನು ಕೂಡಾ ಮಾಡಿಲ್ಲ."

"ಇವತ್ತು ನಾನೇ ಮಾಡ್ತೀನಿ. ನಿಮ್ಮ ಹತ್ರ ಫೋನು ನಂಬರ್ರು ಇದ್ರೆ ಕೊಡಿ."

"ಚಿದಾನಂದನ ಹತ್ರ ಮೊಬೈಲ್ ಫೋನು ಇಲ್ಲ. ನಮ್ಮ ಮನೆಗೇ ಫೋನು ಮಾಡ್ಬೇಕಾಗುತ್ತೆ" ಎಂದು ಹೇಳಿ ನಂಬರನ್ನು ಹೇಳಿದಳು. ಇಬ್ಬರೂ ಮನೆಯನ್ನು ತಲುಪಿದರು.

"ಅತ್ತೆಯ ಜೊತೆ ಯಾರೋ ಮಾತನ್ನಾಡುತ್ತಿರುವಂತಿದೆ." ಎಂದ ಪಿಸುದನಿಯಲ್ಲಿ.

"ಯಾರು ಅಂತ ನೋಡ್ಕೊಂಡು ಬನ್ನಿ. ನಾನು ಇಲ್ಲೇ ನಿಂತಿರ್ತೀನಿ" ಎಂದಳು.

"ಯಾರಿಗ್ಯಾಕೆ ಹೆದರ್ಬೇಕು ಪಲ್ಲವೀ? ಬನ್ನಿ" ಎನ್ನುತ್ತಾ ಅವಳ ಕೈ ಹಿಡಿದು ಒಳಗೆ ಬಂದ. ಅಡಿಗೆ ಮನೆಯ ಬಾಗಿಲಲ್ಲಿ ಕುಳಿತಿದ್ದ ಮಂದಾಕಿನಿಯನ್ನು ಕಂಡು ಪಲ್ಲವಿ, ಕೈಯನ್ನು ಬಿಡಿಸಿಕೊಂಡು ವೆರಾಂಡಕ್ಕೆ ಬಂದಳು. ಭುಜಂಗನಿಗೆ ಆಕೆ ಮಂದಾಕಿನಿ ಎಂದು ತಿಳಿಯಿತು. ಅವಳು ಕಟ್ಟೆಯ ಬಳಿಗೆ ನಡೆದಳು. ಅವನೂ ಹಿಂಬಾಲಿಸಿದ.

"ಇವರ್‍ಯಾಕೆ ಬಂದಿದಾರೆ ಇಲ್ಲಿಗೆ?" ಅವಳು ಅಸಹನೆಯಿಂದ ಪ್ರಶ್ನಿಸಿದಳು.

"ನಿಮ್ಮನ್ನು ಕರೆದುಕೊಂಡು ಹೋಗಲು ಬಂದಿರಬಹುದು."

"ನಾನ್ಯಾಕೆ ಹೋಗ್ಲೀ? ನಂಗೆ ಅವರನ್ನ ಕಂಡ್ರೇ ಮೈಯೆಲ್ಲಾ ಉರಿದು ಹೋಗುತ್ತೆ."

"ಇಷ್ಟು ದ್ವೇಷ ಒಳ್ಳೇದಲ್ಲ ಪಲ್ಲವೀ.. ಅಕ್ಕನ ಮನೆಗೆ ಅಂತ ಬಂದಿದಾರೆ. ನಿಮಗೇನು ಕಷ್ಟ!.."

"ನಂಗೆ ಕಷ್ಟ ಆಗುತ್ತೆ ಭುಜಂಗ್, ಉಸಿರಾಡೋಕೂ ಕಷ್ಟ ಆಗುತ್ತೆ..."

"ಅವರು ನಿಮಗೆ ಜನ್ಮ ಕೊಟ್ಟ ತಾಯಿ..."

"ಅವರು ನನಗೆ ಬಾಡಿಗೆ ತಾಯಿ... ಈ ಪದವೇ ನನ್ನನ್ನ ಹಿಂಸೆ ಮಾಡುತ್ತೆ..'

"ಇದರಲ್ಲಿ ಇವರ ತಪ್ಪು ಏನಿದೆ?"

"ತಪ್ಪು ಇಲ್ಲ ಅಂತ ಹೇಗೆ ಹೇಳ್ತೀರಿ?.. ಹಣವನ್ನು ತೆಗೆದುಕೊಂಡು ನನ್ನನ್ನು ಹೆತ್ತು ನನ್ನ

ತಂದೆ ತಾಯಿಗೆ ಉಪಕಾರ ಮಾಡಿದೆ ಅನ್ನುವುದನ್ನು ತಿಳಿಸಿದಾಗ್ನಿಂದ, ನನಗೆ ಈ ಸಂಬಂಧಗಳೇ ಇಷ್ಟವಾಗ್ತಿಲ್ಲ...ಅದರಲ್ಲೂ ಈಕೆಯನ್ನು ಕಂಡರಂತೂ...ತಲೆ ಕೆಟ್ಟಂತಾಗುತ್ತೆ."

"ಹೀಗೇ ಮನಸ್ಸಲ್ಲಿ ಏನೇನನ್ನೋ ತುಂಬಿಕೊಂಡರೆ ನಿರಾತಂಕವಾಗಿರಲು ಸಾಧ್ಯವಿಲ್ಲ. ಅವರ ಹತ್ರ ನೇರವಾಗಿ ಮಾತ್ನಾಡಿ. ಏನು ಕಾರಣ ಅಂತ ತಿಳಿದ್ಕೊಳ್ಳಿ.. ಅವರನ್ನು ನೋಡಿದರೆ ಹಣಕ್ಕೆ ಆಸೆ ಪಡೋರ ಥರ ಕಾಣಲ್ಲ."

"ಹಣ ಅಲ್ಲದೇ ಬೇರೆ ಇನ್ನೇನಿರುಕ್ಕೆ ಸಾಧ್ಯ?.. ನಮ್ಮ ತಂದೆಗೂ ಆಕೆಗೂ ಸಂಬಂಧ ಇತ್ತು ಅಂತ ಊಹಿಸ್ಕೊಳ್ಳೋಕೂ ಸಾಧ್ಯವಿಲ್ಲ. ಚಿದಾನಂದ ತಾಯಿಯ ತಪ್ಪನ್ನು ಮನ್ನಿಸಿರುವ ಮಹಾನುಭಾವನಂತೆ ಮಾತಾಡ್ತಾರೆ. ಈ ಆದರ್ಶಗಳು ನಂಗೆ ಅರ್ಥವಾಗುಲ್ಲ. ಇಷ್ಟು ವರ್ಷಗಳ ನಂತರ ಈ ವಿಷಯಗಳನ್ನು ಬಂದು ಹೇಳುವ ಅಗತ್ಯವೇನಿತ್ತು?.. ನಿಜ ಏನೂಂತ ತಿಳಿಸಲು ನನ್ನ ತಾಯಿ ಬದುಕಿಲ್ಲ. ತಂದೆ ಹೀಗೆ...ಇದನ್ನೆಲ್ಲ ಹೊರಗಿನವರು ಯಾಕೆ ಒಪ್ಕೋತಾರೆ?.."

"ನಾನೀಗ ನಿಮಗೆ ಹೊರಗಿನವನಲ್ಲ ಪಲ್ಲವೀ.. ನನಗೆ ನೀವು ಮುಖ್ಯ. ಬೇರೆ ಯಾವ ಸಂಬಂಧಗಳಿಗೂ ನಾನು ಕಿವಿಗೊಡುವವನಲ್ಲ.."

"ಆದರೆ ನಿಮ್ಮ ತಂದೆ ತಾಯಿ? ಎಷ್ಟಾಗಲೀ ಅವರುಗಳು ಹಳೆಯ ಸಂಪ್ರದಾಯದವರು. ಅವರಿಗೆ ನಾನು ಒಪ್ಪಿಗೆಯಾಗದಿರಬಹುದು."

"ಮತ್ತೆ ಮತ್ತೆ ಈ ಆತಂಕ ನಿಮ್ಮನ್ನು ಕಾಡುತ್ತಲ್ಲ. ಈ ಚಿಂತೆ ನಿಮಗೆ ಬೇಡ. ಈ ಪ್ರಶ್ನೆಗಳೇ ಹುಟ್ಟದಂತೆ ಎಚ್ಚರಿಕೆ ವಹಿಸಿದರಾಯ್ತು. ಈ ವಿಷಯಗಳನ್ನು ತಿಳಿಸಲೇಬೇಕು ಅಂತೇನಿಲ್ಲವಲ್ಲ. ನನಗೆ ನೀವು ಬೇಕು.. ನಿಮಗೋಸ್ಕರ, ಯಾವುದಕ್ಕೂ ಬೆಲೆ ಕೊಡೋನಲ್ಲ.".

"ಆದರೂ, ಒಂದ್ಮಾತು. ನಿಮಗೂ ಹೇಮಂಗೂ ಮದುವೆ, ಅಂತ ನಿಶ್ಚಯವಾಗಿತ್ತು. ಅವರನ್ನು ಅಷ್ಟು ಸುಲಭವಾಗಿ ಮರೆಯೋಕೆ ಆಗುತ್ತಾ?" ಅನುಮಾನದಿಂದ ಕೇಳಿದಳು.

"ಅವಳು ನನ್ನ ಸೋದರತ್ತೆಯ ಮಗಳು. ಈ ಸಂಬಂಧ ಇದ್ದೇ ಇರುತ್ತೆ...ಚಿಕ್ಕ ವಯಸ್ಸಿನಲ್ಲಿ ನಮ್ಮಿಬ್ಬರಿಗೆ ಮದುವೆ, ನಾವಿಬ್ಬರೂ ಗಂಡಹೆಂಡತಿಯರಾಗ್ತೀವಿ ಅನ್ನೋದನ್ನ ಹಿರಿಯರು ನಮ್ಮ ಕಿವಿಗೆ ತುಂಬಿದರು. ನಾನೆಂದೂ ಅವಳನ್ನು ಪ್ರೀತಿಸಲಿಲ್ಲ. ಈಗ ಅವಳಿಗೂ ನಾನು ಬೇಕಿಲ್ಲ. ಅದನ್ನು ನಾವಿಬ್ಬರೂ ಅರಿತುಕೊಂಡಿದೀವಿ. ಆದ್ದರಿಂದ ನನಗೇನೂ ಹೆಚ್ಚು ಬೇಸರವಾಗ್ಲಿಲ್ಲ. ಆದರೆ, ಅತ್ತೆಗೆ ಆಘಾತವಾಗುತ್ತೆ. ಅವರಿಗೆ ಕೋಪ ಬರುತ್ತೆ. ಆದರೆ ಕ್ರಮೇಣ ಎಲ್ಲಾ ಸರಿ ಹೋಗುತ್ತೆ ಅನ್ನುವ ನಂಬಿಕೆ ನನಗಿದೆ."

ಅಷ್ಟರಲ್ಲಿ ವಾಣಿ ಓಡೋಡಿ ಬಂದಳು. "ನೀನು ಇಲ್ಲಿದೀಯ..? ತೋಟಕ್ಕೆ ಹೋಗಿ ನಿನ್ನನ್ನ ಕರ್ಕೊಂಡು ಬಾ ಅಂತ ಅಪ್ಪಯ್ಯ ಹೇಳಿದ್ರು." ಅವನು ಹುಬ್ಬುಗಳನ್ನು ಸೇರಿಸಿದ.

"ಏನ್ಬೇಕಂತೆ ನಿನ್ನ ಅಪ್ಪಯ್ಯಂಗೆ?" ಎನ್ನುತ್ತಾ ಅವಳ ಹಿಂದೆ ನಡೆದ. ಪಡಸಾಲೆಯಲ್ಲಿ ಕುಳಿತಿದ್ದ ಕೃಷ್ಣಪ್ಪ ನೇರವಾಗಿ ಕೇಳಿದರು.

"ತೋಟಕ್ಕೆ ಹೋಗದೇ ಎಲ್ಲಿಗೆ ಹೋಗಿದ್ದೆ ನೀನು?"

"ತೊರೆಯ ಹತ್ತಿರ ಹೋಗಿದ್ದೆ..." ತಾಯಿಯ ಕಡೆ ನೋಡುತ್ತಾ ಹೇಳಿದ.

"ತೋಟದ ಆಳುಗಳ ಮೇಲೆ ನಿಗಾ ಇಡದೇ, ತೊರೆಯ ಹತ್ತಿರ ಏನ್ಕೆಲಸ?" ನಂಗೊತ್ತು, ನಿನ್ನ ಅತ್ತೆಗೆ, ಕೆಟ್ಟ ಬುದ್ಧಿ.. ನಮಗೆ ಅವಮಾನ ಮಾಡುಕ್ಕೆ ಹೊರಟಿದಾಳೇ."

"ಅಂಥಾದ್ದೇನಾಯ್ತು? ವೈದೇಹಿ ಏನ್ಮಾಡಿದ್ಲು?" ಸಾವಿತ್ರಿ ಕೇಳಿದಳು.

"ನೀನು ಸುಮ್ನಿರು ಸಾತೂ...ನಿನ್ಮಗ ಯಾರ ಜೊತೆ ಎಲ್ಲೆಲ್ಲಿ ಸುತ್ತಾಡ್ತಿದಾನೆ...ಸದಾ ಅತ್ತೆಯ ಮನೆಗೆ ಯಾಕೆ ಓಡಿ ಓಡಿ ಹೋಗ್ತಾನೆ ಅಂತ ನಿಂಗೆ ಗೊತ್ತಿದೆಯಾ?"

"ಅಪ್ಪಯ್ಯಾ!.. ಏನೇನೋ ಆಪಾದನೇನ ಯಾಕೆ ಹೊರಿಸ್ತಿದೀರಿ?"

"ಇದು ಆಪಾದನೇನ? ನಿಜ ಅಲ್ವಾ?..ರಂಗಣ್ಣ ಸುಳ್ಳು ಹೇಳ್ತಾನಾ?..ನಾನು ಕಂಡಿದ್ದು ಸುಳ್ಳಾ?..ಯಾರು ಆ ಹುಡುಗಿ?

"ಅವಳು ಪಲ್ಲವಿ ಅಂತ.. ಅತ್ತೆಯ ತಂಗಿಯ ಮಗಳು.. ಅತ್ತೇ ಹೇಳಿದ್ರು ಅಂತ ಅವಳನ್ನು ತೋಟಕ್ಕೆ, ತೊರೆಯ ಬಳಿಗೆ ಕರ್‍ಕೊಂಡು ಹೋಗಿದ್ದೆ.. ಬೇಕಾದ್ರೆ ಅತ್ತೇನೇ ಕೇಳಿ..."

"ನಿನ್ನ ಅತ್ತೆ, ಅವಳ ಮಗಳು, ಮುಂದಾಲೋಚನೆ ಇಲ್ಲದೆ ಈ ಕೆಲಸ ಮಾಡುಲ್ಲ...ಏನೋ ಒಳಗುಟ್ಟಿದೆ...ನೀನು ದಡ್ಡ ಅಷ್ಟೇ"

"ಅಂಥಾದ್ದೇನೂ ಇಲ್ಲ ಅಪ್ಪಯ್ಯ..."

"ಯಾಕಿಲ್ಲ! ನಿನ್ನ ಅತ್ತೆಗೆ ಕೋಡು ಬೆಳೀತಿದೆ...ಮಗಳು ಡಾಕ್ಟರಾಗ್ತಾ ಇದಾಳೆ ನೋಡು...ತಾಯಿ ಮಗಳು ಸೇರಿ, ನಿನ್ನನ್ನ ದೂರ ಮಾಡೋಕೆ ನೋಡ್ತಿದಾರೆ. ಅದಕ್ಕೆ ನಾನು ಅವಕಾಶ ಕೊಡುಲ್ಲ ನಾನು. ನೀನು ಈ ಹುಡುಗಿಯಿಂದ ದೂರು ಇರು.. ಹಿರಿಯರು ನಿಶ್ಚಯಿಸಿದ ಮದುವೇನ ಮುರಿಯೋಕೆ ನಾನು ಬಿಡುಲ್ಲ."

"ಈಗ ಆ ಮಾತೆಲ್ಲಾ ಯಾಕೆ? ಮಂದಾಕಿನಿ ಮಗಳು ನಾಲ್ಕು ದಿನ ಇದ್ದು ಹೋಗೋಕೆ ಬಂದಿದಾಳಂತೆ.. ಸುಮ್ಮನೇ ಗಲಾಟೆ ಯಾಕೆ?..ನಿಮ್ಮ ತಂಗಿಯ ಬಳಿ ಕುಳಿತು ಮಾತನಾಡಿ. ಮದುವೆ ದಿನವನ್ನು ನಿಶ್ಚಯ ಮಾಡಿ...ಈಗ ಇವನ ಮೇಲೆ ಯಾಕೆ ಕೂಗಾಡ್ತೀರಿ!.. ನಾನು ಆಗಲೇ ಹೇಳಿದೆ, ನಮ್ಮ ಮನೆಗೆ ಸೊಸೆಯಾಗಿ ಬರೋಳಿಗೆ ಕಾಲೇಜು ಓದು ಯಾಕೆ ಅಂತ. ನೀವೆಲ್ಲಿ ಕೇಳಿದ್ರಿ? ಸೊಸೆ ಮುದ್ದು ಅಂತ ಅವಳ ಮಾತಿಗೆ ಕುಣಿದು, ಮೆಡಿಕಲ್ ಕಾಲೇಜಿಗೆ ಸೇರಿಸಿದ್ರಿ.."

"ನೀನು ಸ್ವಲ್ಪ ಸುಮ್ನಿರ್ತೀಯ?...ಆಗ ಇವನೂ ಸುಮ್ಮನಿದ್ನಲ್ಲ. ಹುಡುಗಿ ಆಸೆ ಪಡುತ್ತೆ. ಓದು ಕಷ್ಟ ಅಂತ ಬಿಟ್ಟು ಬರುತ್ತೆ ಅಂತ ಅಂದ್ಕೊಂಡಿದ್ದೆ. ಆಮೇಲೆ, ಮನೆಯ ಸೊಸೆ ಡಾಕ್ಟರು ಅಂತಂದ್ರೆ ಹೆಮ್ಮೆ ಅಂತ ಅಂದ್ಕೊಂಡೆ..ಈಗ ನೋಡಿದ್ರೆ ಎತ್ತೆತ್ತ್ಲೋ ತಿರುಗ್ತಿರುವ ಹಾಗೆ ಅನುಮಾನ ಬರ್ತಿದೆ.."

"ನಿಮ್ಮ ಅನುಮಾನಕ್ಕೆ ತಲೆ ಬುಡ ಇಲ್ಲ. ನಿಮ್ಮ ಮಗನ ಮೇಲೆ, ನಿಮ್ಮ ಸೊಸೆಯ ಮೇಲೆ ನಂಬಿಕೆ ಇದೆ ತಾನೇ?.. ಕೃಷ್ಣಪ್ಪ ಹೆಂಡತಿಯ ಕಡೆ ನೋಡಿ ತಲೆಯನ್ನು ಅಡ್ಡಡ್ಡ

ಓಡಿಸಿದರು. "ಇನ್ನೊಂದು ವರ್ಷದೊಳಗೆ ಅವಳ ಕೋರ್ಸು ಮುಗಿಯುತ್ತಂತೆ. ಹಾಗಂತ ಈ ಸಾರಿ ಹೇಮ ಬಂದಿದ್ದಾಗ ಹೇಳಿದ್ಲು" ಎಂದಳು

"ಅವಳು ಹೇಳಿದ್ದನ್ನ ಕೇಳಿಸ್ಕೊಂಡು ಸುಮ್ಮನಿದ್ಯಾ?. ಸಾಕು ನಿನ್ನ ಓದು.. ಬಂದು ಸಂಸಾರ ಮಾಡ್ಕೊಂಡು ಇರು ಅಂತ ಹೇಳ್ಬೇಕಾಗಿತ್ತು."

"ಹೇಳಿದ್ರೆ ಕೇಳ್ಬೇಕಲ್ಲ. ಸೊಸೆ ಡಾಕ್ಟರಾಗ್ಲಿ ಅಂತ ಕಳಿಸ್ದೋರು ನೀವೇ ತಾನೇ.. ನೀವೇ ನಿಮ್ಮ ತಂಗಿ ಹತ್ರ ಮಾತ್ನಾಡಿ. ನನಗೇನೂ ಗೊತ್ತಿಲ್ಲ."

"ಏನು ನಿನ್ನ ತಂಗಿ ತಂಗಿ ಅಂತ.. ಅವಳ್ಯಾವೂರಿನ ತಂಗಿ ನಂಗೆ? ನಿನ್ನ ತಮ್ಮ ಮೈಯಲಿ ಬಲವಿಲ್ದೇ ಮಲಗಿದಾನೆ. ಅವಳದ್ದೇ ದರ್ಬಾರು."

"ಅಪ್ಪಯ್ಯಾ ಸುಮ್ಮನಿರ್ತೀರಾ?.. ಮಾವಂಗೆ ಹುಶಾರಿಲ್ಲ. ಮನೆ ಅಳಿಯನಾಗಿರಲಿ ಅಂತ, ನನ್ನನ್ನ ಕೇಳದೇ ನನ್ನ ಮದುವೆ ನಿಶ್ಚಯ ಮಾಡ್ದೋರು ನೀವುಗಳೇ...ಈಗ ಹೀಗೆ ಮಾತಾಡ್ತೀರಲ್ಲ. ನನ್ನ ಮನಸ್ನಲ್ಲಿ ಏನಿದೆ ಅಂತ ಎಂದಾದ್ರೂ ಕೇಳಿದೀರಾ?"

"ಏನಿದೆ ನಿನ್ನ ಮನಸ್ನಲ್ಲಿ ಹೇಳು, ಕೇಳ್ತಿದೀನಿ." ನೇರವಾಗಿ ಕುಳಿತರು.

"ಸದ್ಯಕ್ಕೆ ಏನೂ ಇಲ್ಲ. ನನ್ನ ಮನಸ್ಸೂ ಬದ್ಲಾಗಬಹುದು. ನನಗೂ ತಿಳಿವಳಿಕೆ ಇದೆ. ಮೆಜಾರಿಟಿಗೆ ಬಂದಿದೀನಿ. ಅಮ್ಮಾ ನಾನು ಮಾರ್ಕೆಟ್ಟಿಗೆ ಹೋಗ್ಬೇಕು. ಏನಾದ್ರೂ ಸಾಮಾನು ಬೇಕಿದ್ರೆ ಹೇಳು...ಅಪ್ಪಯ್ಯ ನಿಮ್ಗೇನಾದ್ರೂ ಬೇಕಾ?" ಮಾತಿನ ಜಾಡನ್ನು ಬದಲಿಸಿದ.

"ಮಾತು ಮರೆಸೋದ್ರಲ್ಲಿ ನಿಸ್ಸೀಮ ನೀನು. ನೆಸ್ಯ ಮುಗಿದು ಹೋಗಿದೆ. ನಂಗೊಂದಿಷ್ಟು ನೆಸ್ಯ ತಂದ್ಕೊಡು.." ತಾಯಿ ಹೇಳಿದ ಸಾಮಾನುಗಳ ಪಟ್ಟಿಯನ್ನು ಬರೆದಿಟ್ಟುಕೊಂಡು, ಕೈ ಚೀಲಗಳನ್ನು ಹಿಡಿದು ಹೊರಟ.

"ಅಣ್ಣಾ ನಂಗೊಂದಿಷ್ಟು ನೋಟ್‌ಬುಕ್ಸ್‌ಗಳು ಬೇಕಾಗಿತ್ತು. ತಂದ್ಕೊಡ್ತೀಯಾ? ವಾಣಿ ಬಂದು ಕೇಳಿದಳು. 'ಹೂಂ' ಎಂದು ತಲೆಯಾಡಿಸಿ ಬೈಕ್‌ನ್ನೇರಿದ.

* * *

ಅಡಿಗೆ ಮನೆಯ ಕೆಲಸಗಳನ್ನೆಲ್ಲಾ ಮುಗಿಸುವ ಸನ್ನಾಹದಲ್ಲಿ ಇದ್ದಳು ಸಾವಿತ್ರಿ. ಭುಜಂಗ ಅಡಿಗೆ ಮನೆಯ ಬಾಗಿಲಲ್ಲಿ ನಿಂತ. "ಏನಾದ್ರೂ ಬೇಕಿತ್ತೇನೋ ಭುಜೀ...?"

"ಸಾಮಾನಗಳನ್ನೆಲ್ಲ ತೆಗೆದಿಟ್ಟುಕೊಂಡ್ಯಾ! ಎಲ್ಲಾ ಸರಿಯಾಗಿದೆಯಾ?"

"ಇರಬಹುದು, ನಾಳೆ ನೋಡ್ತೀನಿ. ಅವಸರವೇನು?"

"ನಿನ್ಹತ್ರ ಸ್ವಲ್ಪ ಮಾತಾಡ್ಬೇಕಾಗಿತ್ತು.. ಮಹಡಿಗೆ ಬರ್ತೀಯಾ?"

"ಇಷ್ಟೊತ್ನಲ್ಲಿ ಎಂಥಾ ಮಾತೋ? ಬೆಳಿಗ್ಗೆ ಆಡಿದ್ರೆ ಆಗುಲ್ವಾ?"

"ಅಪ್ಪಯ್ಯ, ವಾಣಿ ಇಬ್ರೂ ಮಲಗಿದಾರೆ.. ಈಗ್ಲೇ ಆಡಿದ್ರೆ ವಾಸಿ. ನಾನು ಹೋಗಿರ್ತೀನಿ.

ನೀನು ಬಾ'' ಎಂದು ಹೇಳಿ ಮಹಡಿಯನ್ನೇರಿ, ತಾಯಿ ಬರುವುದನ್ನೇ ಕಾದ. ಕೆಲಸ ಮುಗಿಸಿ, ಅಡಿಗೆ ಮನೆಯ ಬಾಗಿಲನ್ನು ಎಳೆದು ಚಿಲಕ ಹಾಕಿ ಸೌಟನ್ನು ಸಿಕ್ಕಿಸಿ, ಮಹಡಿ ಮೆಟ್ಟಿಲನ್ನು ಕಷ್ಟ ಪಟ್ಟು ಹತ್ತಿದಳು.

''ಅಜ್ಜಿ ಎಚ್ಚರವಾಗಿದ್ರೋ, ಮಲಗಿದ್ರೋ'' ಕೇಳಿದ.

''ಆಗ್ಲೇ ಮಲಗಿದ್ರು. ನಿಮ್ಮ ಅಪ್ಪಯ್ಯಂಗೂ ಬುದ್ಧಿ ಇಲ್ಲ. ಅವರ ಎದುರಿಗೆ ಹಾಗೆಲ್ಲಾ ಮಾತ್ನಾಡೋದಾ?.. ಮೊದಲೇ ಇವರಿಗೆ ನಿನ್ನ ಮಾವನ್ನ ಕಂಡ್ರೆ ಅಷ್ಟಕ್ಕಷ್ಟೇ..''

''ಬರೀ ಇಷ್ಟೇ. ಒಬ್ಬರನ್ನ ಕಂಡ್ರೆ ಇನ್ನೊಬ್ಬರಿಗಾಗುಲ್ಲ. ಅಷ್ಟಾದ್ರೂ ಈ ಸಂಬಂಧಗಳಲ್ಲೇ ಯಾಕೆ ಮದುವೆ ಮಾಡ್ಕೋಬೇಕು? ನಗುತ್ತಾ ಕೇಳಿದ.

''ನಂಗೂ ನಿದ್ದೆ ಬರ್ತಿದೆ, ಬೆಳಿಗ್ಗೆ ಬೇಗ ಏಳ್ಬೇಕು. ಅದೇನು ಮಾತನ್ನಾಡ್ಬೇಕೋ ಆಡಿಬಿಡು. ಎನ್ನುತ್ತಾ ಅಲ್ಲಿದ್ದ ಕುರ್ಚಿಯ ಮೇಲೆ ಕುಳಿತಳು.

''ಹೇಮಾ ತುಂಬಾ ಬದಲಾಗಿ ಬಿಟ್ಟಿದಾಳಮ್ಮ.. ನಿಂಗೆ ಹಾಗೆನ್ನಿಸುಲ್ವಾ?..''

''ಹುಂ, ಬದಲಾಗ್ದೇ ಇರ್ತಾಳ? ಮುಂದೆ ಡಾಕ್ಟರಾಗುವವಳು..''

''ಅವಳು ಡಾಕ್ಟರಾಗ್ತಾಳೆ. ನಾನು ಹಳ್ಳಿ ರೈತನಾಗಿಯೇ ಇದೀನಿ. ಅವಳಿಗೆ ಈಗ ಈ ಹಳ್ಳಿಯ ಮೇಲಾಗಲೀ, ನಮ್ಮ ಮನೆಯವರ ಮೇಲಾಗಲೀ ಮೊದಲಿನ ವಿಶ್ವಾಸ ಪ್ರೀತಿ ಒಂದೂ ಇಲ್ಲಮ್ಮ.. ಒಲವು, ನೀತಿ ಯಾವುದೂ ಇಲ್ಲ.''

''ಏನೋ ಹೀಗಂತೀಯಾ? ಅಪ್ಪ ಏನೇನೋ ಅಂದ್ರು ಅಂತ ನೀನೂ ಏನೇನೋ ಆಡ್ಬೇಡ. ಡಾಕ್ಟರಾದ್ರೇನಂತೆ? ಹೆಂಡತಿಯಾಗಿ, ಈ ಮನೆಗೆ ಸೊಸೆಯಾಗಿ ಬಂದ್ಮೇಲೆ ನಮಗೆ ಹೇಗೆ ಬೇಕೋ ಹಾಗೆ ತಿದ್ದಿದ್ದರೆ ಆಯ್ತು..''

ಅವಳು ಈ ಊರಿಗೆ ವಾಪಸ್ಸು ಬರದಿದ್ರೆ...?

''ಅದ್ಯಾಕೋ ಇಂಥಾ ಅನುಮಾನ ಬಂತು ನಿಂಗೆ?''

''ಇದು ಅನುಮಾನ ಅಲ್ಲಮ್ಮ.. ಅವಳ ನಿರ್ಧಾರ. ಅವಳೇ ಈ ಸಾರಿ ಬಂದಾಗ ನನ್ನ ಹತ್ರ ಹೇಳಿದ್ಲು.. ಅವಳು ಇಲ್ಲಿಗೆ ವಾಪಸ್ಸು ಬರುಲ್ಲವಂತೆ.''

''ಚೆನ್ನಾಗಿದೆ. ಹಾಗಂದ್ರೆ ಹೇಗೆ? ಅಪ್ಪ, ಅಮ್ಮನ್ನ ಮರೆತು ಎಲ್ಲಿರ್ತಾಳಂತೆ! ನೀನು ದಬಾಯಿಸಿ ಕೇಳ್ಬೇಕಾಗಿತ್ತು.''

''ಕೇಳುಕ್ಕೆ ಏನೂ ಉಳಿದಿಲ್ಲಮ್ಮ.. ಎಂದೋ ನಿರ್ಧರಿಸಿದ್ದಾಗಿದೆ. ಈಗ ಹೇಳಿದ್ಲು ಅಷ್ಟೇ.''

''ಏನೋ ನಿರ್ಧಾರ ಅಂತಂದ್ರೆ? ನಿನ್ನನ್ನ ಕೇಳದೇ ಏನನ್ನೂ ನಿರ್ಧರಿಸುವ ಹಕ್ಕು ಅವಳಿಗಿಲ್ಲ. ಅವಳು ನಿನ್ನ ಹೆಂಡತಿಯಾಗೋಳು.''

''ಹೆಂಡತಿಯೇ ಆಗದಿದ್ರೆ...''

''ಅಸಂಬದ್ಧ ಮಾತಾಡ್ಬೇಡ. ಅವಳೊಬ್ಬಳೇ ತೆಗೆದುಕೊಳ್ಳುವ ತೀರ್ಮಾನ ಇದಲ್ಲ. ಹಿರಿಯರು

ನಿಶ್ಚಯಿಸಿರುವ ಮದುವೆ.. ಹಿರಿಯರೊಡನೆ ಮಾತನಾಡುವ ಧೈರ್ಯ ಅವಳಿಗೆ ಇದೆಯಾ?"

"ಈ ವಿಷಯದಲ್ಲಿ ಬಲವಂತ ಮಾಡುಕ್ಕೆ ಆಗುತ್ತೇನಮ್ಮ.. ಈ ವಿಷಯಾನ ಅತ್ತೆ ಹತ್ರ ನೀನೇ ಹೇಳ್ಬೇಕು ಅಂತ ನಂಗೆ ಹೇಳಿದಾಳೆ..."

"ಅಂದ್ರೇ ಅವಳಿಗೆ ಈ ಮದುವೆ ಇಷ್ಟವಿಲ್ಲ ಅಂತ ನೀನು ವೈದೇಹಿಗೆ ಹೇಳ್ಬೇಕಾ?.. ಸಾಧ್ಯವಿಲ್ಲ ಅಂತ ಕಪಾಳಕ್ಕೆ ಬಾರಿಸ್ಬೇಕಾಗಿತ್ತು."

"ಹೊಡೆಸಿಕೊಳ್ಳುವ ವಯಸ್ಸೇನಮ್ಮ ಅವಳದು! ಅಲ್ಲದೇ ನನಗೆ ಯಾವ ಅಧಿಕಾರ ಇದೆ? ಅಲ್ಲದೇ ಅವಳು ಹೇಳೋದೂ ನಿಜವೇ...ಅವಳಿಗೆ ನಾನು ತಕ್ಕವನಲ್ಲ. ಅವಳ ಗಂಡನಾಗುವ ಅರ್ಹತೆ ನನಗೆಲ್ಲಿದೆ!"

"ಹಾಗಂದ್ಲಾ ಅವಳು?.. ನಿಂಗಿಂತ ನಾಲ್ಕಕ್ಷರ ಹೆಚ್ಚು ಓದಿದ ಮಾತ್ರಕ್ಕೆ, ಅವಳು ನಿಂಗಿಂತ ಹೆಚ್ಚಾಗಿ ಬಿಟ್ಲಾ! ಹೆಣ್ಣು ಹೆಣ್ಣೇ. ಅವಳನ್ನು ಮೆಡಿಕಲ್ ಕಾಲೇಜಿಗೆ ಸೇರಿಸಿದ್ದು ನಿಮ್ಮ ಅಪ್ಪಯ್ಯನೇ...ನಾವು ಅವಳ ಆಸೆಗೆ ಬೆಲೆ ಕೊಡ್ಲಿಲ್ವಾ! ಈಗ್ಯಾಕೆ ಈ ಮಾಕು?"

"ಇದು ಸಮಾಕು ಅಲ್ಲಮ್ಮ. ಅವಳಿಗೆ ಅನ್ನಿಸಿದ್ದನ್ನು ಅವಳು ಹೇಳಿದಾಳೆ. ಆ ಸ್ವಾತಂತ್ರ್ಯ ಅವಳಿಗಿದೆ ಅಲ್ವಾ?.. ಸ್ವಂತವಾಗಿ ನಿರ್ಧರಿಸುವ ಹಕ್ಕು ಅವಳಿಗಿದೆ.."

"ಅವಳಿಗೆ ವಯಸ್ಸು ಚಿಕ್ಕದು. ತಿಳುವಳಿಕೆ ಸಾಲದು. ಹಿರಿಯರು ಅಂತ ನಾವುಗಳು ಇದೀವಿ.. ಅವಳಿಗೆ ಬಾ ಅಂತ ಫೋನು ಮಾಡು. ಬರಲಿ. ಎಲ್ರೂ ಕೂತು ಮಾತನಾಡೋಣ."

"ಪ್ರಯೋಜನವಿಲ್ಲಮ್ಮ... ಅವಳ ಆಯ್ಕೆ ಬದಲಾಗಿದೆ. ಅವಳು ಬೇರೊಬ್ಬ ಹುಡುಗನ್ನ ಇಷ್ಟ ಪಡ್ತಿದಾಳಂತೆ. ಬಲವಂತ ಮಾಡುಕ್ಕೆ ಆಗುತ್ತೇನಮ್ಮ? ಅವಳೂ ಸುಖವಾಗಿರುಲ್ಲ. ನಾನೂ ಸುಖವಾಗಿರುಲ್ಲ. ಈ ಹಳ್ಳಿಯ ಜೀವನಕ್ಕೆ ಹೊಂದಿಕೊಳ್ಳುಲ್ಲ. ಅಂಥಾ ಸೊಸೇನ ನೀನು ಇಷ್ಟಪಡ್ತೀಯೇನಮ್ಮ...ನಂಗಂತೂ ಅಂಥಾ ಹೆಂಡ್ತಿ ಬೇಕಿಲ್ಲ.."

"ಇಷ್ಟಕ್ಕೆಲ್ಲಾ ನೀನೇ ಕಾರಣ...ಯಾರೋ ಪಲ್ಲವಿಯಂತೆ. ಅವಳು ಬಂದ್ಲು ಅಂತ ಅವಳ ಹಿಂದೆ ಮುಂದೆ ಸುತ್ತೋದನ್ನ ಅವಳು ಕಂಡಿರಬಹುದು. ಅದಕ್ಕೇ ನಿನ್ನ ಹತ್ರ ಸುಳ್ಳು ಹೇಳಿರಬಹುದು. ನಿಂದೂ ತಪ್ಪಿದೆ."

"ಇಲ್ಲಮ್ಮ ಸುಳ್ಳಲ್ಲ. ಇದೆಲ್ಲಾ ಪಲ್ಲವಿ ಇಲ್ಲಿಗೆ ಬರೋಕೆ ಮುಂಚೆಯೇ ಜರುಗಿದೆ. ಒಟ್ಟೊಟ್ಟಿಗೆ ಓಡಾಡಿದರೆ. ಸ್ನೇಹದಿಂದ ಇದಾರೆ. ಹಿಂದೆ ಬರಲಾಗದಷ್ಟು ಸ್ನೇಹ ಮುಂದುವರೆದಿದ್ರೆ, ನಾವು ಏನೂ ಮಾಡುಕ್ಕಾಗುಲ್ಲ."

"ನಾನು ನಾಳೇನೇ ವೈದೇಹಿ ಹತ್ರ ಮಾತಾಡ್ತೀನಿ. ಏನಿದು ಹುಡುಗಾಟ? ನಿಮ್ಮಪ್ಪಯ್ಯ ಹೇಳ್ದಾಗೇ ಇದೆಲ್ಲಾ ನಮಗೆ ಅವಮಾನ ಮಾಡೋಕೆ ಅಂತಲೇ ಮಾಡ್ತಾ ಇರೋದು.."

"ಇಲ್ಲಮ್ಮ ಯಾವ ವಿಷಯವೂ ಅತ್ತೆಗೆ ಗೊತ್ತಿಲ್ಲ. ನೀನು ಹೇಳಿದ್ರೆ, ಅತ್ತೆ, ಅತ್ತು ಕರೆದು ಭಾರಿ ರಂಪ ಮಾಡ್ತಾರೆ.. ಅವಳ ಓದೂ ಪೂರೈಸುಲ್ಲ. ಏನು ಸಾರ್ಥಕವಾದ ಹಾಗಾಯ್ತು?"

"ಹಾಗಂತ ಸುಮ್ಮನಿದ್ದು ಬಿಡು ಅಂತೀಯಾ?..ಇನ್ನು ನಿನ್ನ ಗತಿಯೇನೋ? ಹೀಗೇ ಇದ್ದು

ಬಿಡ್ತೀಯಾ?.. ಇವಳ್ಯಾಕೆ ಹೀಗೆ ಮಾಡಿದ್ಲೋ?''

''ಯಾಕಮ್ಮ ನಂಗೆ ಬೇರೆ ಹೆಣ್ಣೇ ಸಿಗುಲ್ಲ ಅಂತ ಅಂತೀಯ?'' ಬೇರೆ ನೋಡಿದ್ರಾಯ್ತು?''

''ಆದರೆ, ಬೇರೆ ಹೆಣ್ಣುಗಳನ್ನು ವಿಚಾರಿಸುಕ್ಕೆ ಹೋದ್ರೆ ನೆಂಟರಿಷ್ಟರಿಗೆಲ್ಲ ಗೊತ್ತಾಗುತ್ತಲ್ಲ. ಅವರೆಲ್ಲ ಆಡ್ಕೊಂಡು ನಗುಲ್ವೇನೋ?.. ಎಲ್ರಿಗೂ ಹೇಮಾಳೇ ನಮ್ಮ ಸೊಸೆ, ಡಾಕ್ಟರಾಗೋಳು ಅಂತ ಹೆಮ್ಮೆಯಿಂದ ಹೇಳ್ಕೊಂಡಿದ್ನಲ್ಲೋ..ಈಗ ತಲೆ ತಗ್ಗಿಸುವಂತಾಗುತ್ತದೆ.'' ಪೇಚಾಡಿದಳು.

''ತಲೆ ತಗ್ಗಿಸುವಂಥಾದ್ದೇನಾಗಿದೆ? ನಾವೇನು ಕಳ್ಳತನ ಮಾಡಿದೀವಾ? ಸುಳ್ಳು ಹೇಳಿದೀವಾ?..ಆಡಿಕೊಳ್ಳುವಂಥ ನೆಂಟರಿಷ್ಟರನ್ನು ಕರೆಯೋದೇ ಬೇಡ...ನಿಂಗೆ ಇಷ್ಟವಿಲ್ಲ ಅಂತಿದ್ರೆ ಹೇಳ್ಬಿಡು. ನಾನು ಹೀಗೇ ಇದ್ದು ಬಿಡ್ತೀನಿ.'' ಹುಸಿ ಬಾಣವನ್ನೆಸೆದ.

''ನೀನ್ಯಾಕೆ ಹಾಗೇ ಇರ್ಬೇಕು? ನೀನು ಗಂಡ್ಸು...ಅವಳನ್ನು ಮೀರಿದ ಹೆಣ್ಣನ್ನು ತಂದು ಮನೆ ತುಂಬಿಸಿಕೊಳ್ತೀನಿ..'' ತಾಯಿ ಹಾಗೆ ಹೇಳಿದಾಗ ಮುದವೆನಿಸಿತ್ತು.

''ಸರಿ, ಆ ವಿಷಯ ಹಾಗಿರಲಿ...ಈಗ ಹೋಗಿ ಮಲಕ್ಕೋ ಹೊತ್ತಾಗಿದೆ.''

''ನೀನೇನೂ ಯೋಚಿಸ್ಬೇಡ ಭುಜೀ.. ನಾನು ನಿನ್ನ ಅಪ್ಪಯ್ಯನ ಹತ್ರ ಮಾತ್ನಾಡ್ತೀನಿ.''

''ನಂಗೆ ಯಾವ ಯೋಚನೆಯೂ ಇಲ್ಲಮ್ಮ. ಈಗ ನನಗೆ ನಿರಾಳವಾಗಿದೆ. ನನಗೆ ಮದುವೆಗೆ ಅವಸರ ಏನಿಲ್ಲ. ಆದರೆ ನೀನು ಮಾಡ್ಕೋ ಅಂತ ಹೇಳಿದ್ರೆ.. ಅದೂ ಸರಿ. ಆದರೆ ಅಪ್ಪಯ್ಯಂಗೆ ತಾಳ್ಮೆಯಿಂದ ಇರುವಂತೆ ಹೇಳು. ಕೂಗಿ ಗಲಾಟೆ ಮಾಡಿ ಜಗಳ ಆಡಿದರೆ, ನಮಗೂ ಅವಮಾನ ಆಗುತ್ತೆ. ಅವರುಗಳೂ ನಮ್ಮವರೇ. ಹೇಮ ನನ್ನನ್ನ ತಿರಸ್ಕರಿಸಿದಳು ಅಂತ ಅವಳನ್ನು ದ್ವೇಷಿಸುಕ್ಕೆ ಆಗುತ್ತೇನಮ್ಮ?.. ಅವರನ್ನು ದೂರ ಮಾಡುಕ್ಕೆ ಆಗುತ್ತೇನಮ್ಮ?.. ಎಷ್ಟೋ ವರ್ಷಗಳಿಂದ ನಾವು ಅನ್ಯೋನ್ಯವಾಗಿದೀವಿ. ಈಗ ಈ ಕಾರಣದಿಂದ ಮನಸ್ತಾಪವನ್ನು ಬೆಳೆಸಿಕೊಳ್ಳುವುದು ಬೇಡ. ಹೇಮಾನೂ ಬರದಿದ್ರೆ ಅತ್ತೆ ಮಾವನ್ನ ನೋಡ್ಕೋಳ್ಳೋರು ಯಾರಿದಾರೆ? ಅವರಿಗೆ ಈ ವಯಸ್ನಲ್ಲಿ ಕಷ್ಟ ಆಗುಲ್ವೇನಮ್ಮ.?'' ಅವನ ದನಿಯಲ್ಲಿ ಕಳಕಳಿ ಇತ್ತು.

''ನಿನ್ನ ಒಳ್ಳೆಯತನ ಅವರುಗಳಿಗೆ ಅರ್ಥವಾಗಬೇಕಲ್ಲ? ನೋಡೋಣ ದೇವರು ನಡೆಸಿದಂತಾಗುತ್ತೆ. ಹುಟ್ಟಿಸಿದ ಬ್ರಹ್ಮ ಒಂದು ಹೆಣ್ಣಿಗೆ ಒಂದು ಗಂಡು ಅಂತ ಸೃಷ್ಟಿಸಿ ಗಂಟು ಹಾಕಿರ್ತಾನೆ. ಹೇಮಳ ಭಾಗ್ಯದಲ್ಲಿ ನೀನು ಇಲ್ಲ ಅಂತ ಅಂದ್ಕೋಬೇಕು. ಆಗೋದೆಲ್ಲಾ ಒಳ್ಳೇದಕ್ಕೆ ಅಂತ ಸಮಾಧಾನ ಪಟ್ಕೋಬೇಕು.'' ಮಗನಿಗೆ ಸಮಾಧಾನ ಹೇಳಿದಳು.

''ಅಬ್ಬಾ! ನನ್ನ ತಲೆ ಭಾರ ಕಡಿಮೆ ಆಯ್ತು..ಅಪ್ಪಯ್ಯಂಗೆ, ಅತ್ತೆಗೆ ಏನೇನು ಹೇಳ್ತೀಯೋ ಅದೆಲ್ಲ ನಿನ್ನ ಕೆಲಸ...'' ತಾಯಿಯ ಎರಡೂ ಭುಜಗಳ ಮೇಲೆ ಕೈಯನ್ನಿಟ್ಟ.

''ನಾವೇ ಆಡಿದ್ರೆ, ನೀನು ಕೆಟ್ಟೋನಾಗ್ತೀಯಲ್ಲೋ..''

''ನಾನು ಕೆಟ್ಟೋನಾದ್ರೂ ಪರವಾಗಿಲ್ಲ. ಅತ್ತೆ ಮಾವಂಗೆ ಬೇಸರವಾಗಬಾರ್ದು. ಅವರು ಹೇಮನ್ನ ದೂರ ಮಾಡ್ಬಾರ್ದು. ಅದು ನನ್ನಾಸೆ. ಅತ್ತೆ ಬೈದರೂ ಬೈಸಿಕೊಳ್ತೀನಿ.''

''ಅತಿಯಾಯ್ತು ನಿಂದು. ಇಲ್ಲಿ ನಿನ್ನ ತಪ್ಪೇನಿದೆ? ತಪ್ಪು ಮಾಡಿರುವವಳು ಹೇಮ, ಅವಳು

ಅನುಭವಿಸಲಿ.. ಅವಳದ್ದೇ ತಪ್ಪಾಗಿರಲಿ..''

"ಹಾಗೆನ್ನಬೇಡಮ್ಮ. ನಿನಗೆ ಅವಳು, ವಿಜಯ, ವಾಣಿಯಂತೆ, ಅಂತ ಎಷ್ಟೋ ಸಾರಿ ನೀನೇ ಹೇಳಿದೀಯ.. ಅವಳೂ ಸುಖವಾಗಿರ್ಬೇಕು ತಾನೇ.. ಯಾರೂ ಅವಳನ್ನು ಬೈಯಬಾರದು..'' ಬಹುಶಃ ನಮ್ಮ ನಿರೀಕ್ಷೆ ಜಾಸ್ತಿಯಾಗಿತ್ತು. ಅದೂ ತಪ್ಪು ತಾನೇ!''

"ನಿನ್ನ ಮಾತು ಅರ್ಥವಾಗ್ತಿಲ್ಲ. ನಿಧಾನವಾಗಿ ಯೋಚಿಸ್ತೀನಿ'' ಎಂದು ಹೇಳಿ ಆಕೆ ಕೆಳಗಿಳಿದು ಹೋದಳು. ಭುಜಂಗ, ತಲೆಯಡಿ ಕೈಗಳನ್ನು ಇಟ್ಟು ಮಲಗಿದ. ನಿದ್ದೆ ಬರುವವರೆಗೂ ಛಾವಣಿಯನ್ನೇ ದಿಟ್ಟಿಸುತ್ತಿದ್ದ. ಹೊಸದಾಗಿ ಹಾಕಿಸಿದ್ದ ಕಿಟಕಿಯಿಂದ, ಮೇಲೇರಿದ್ದ ಚಂದ್ರನ ಕಿರಣಗಳು ರೂಮಿನೊಳಕ್ಕೆ ಪಸರಿಸಿದ್ದವು. ಬೆಳದಿಂಗಳ ಬೆಳಕಿನಲ್ಲಿ ಪಲ್ಲವಿಯ ಮುಖ ಕಂಡಿತ್ತು.

* * *

"ಮಂದಾ, ಏನಾಗಿದೆ ನಿನ್ನ ಮಗಳಿಗೆ! ಯಾವಾಗ ನೋಡಿದ್ರೂ ಬಾವಿಯ ಕಟ್ಟೆಯ ಮೇಲೆ ಕುಳಿತು ಆಕಾಶ ನೋಡ್ತಾ ಇರೋದು, ಅಥವಾ ಸುತ್ತಾಡ್ಕೊಂಡು ಬರ್ತೀನಿ ಅಂತ ಹೊರಗೆ ಒಬ್ಬಳೇ ಹೋಗೋದು. ಬಂದು ಒಂದು ತಿಂಗಳಾಯ್ತು, ಒಂದು ದಿನವಾದ್ರೂ, ದೊಡ್ಡಮ್ಮ ನಿಮಗೇನಾದ್ರೂ ಸಹಾಯ ಮಾಡ್ಲಾ ಅಂತ ಒಳಗೆ ಬಂದು ಕೇಳಿಲ್ಲ'' ವೈದೇಹಿ ಆಕ್ಷೇಪಣೆ ಮಾಡಿದಳು.

"ತಲೆ ತುಂಬಾ ಸಮಸ್ಯೆ ತುಂಬಿಕೊಂಡಿದಾಳೆ.. ಏನೂ ಬೇಡ ಅವಳಿಗೆ''

"ಈ ವಯಸ್ನಲ್ಲೇ ಹೀಗಾದ್ರೆ ಏನ್ಗತಿ?.. ಯಾರಾದ್ರೂ ಡಾಕ್ಟರಿಗೆ ತೋರಿಸ್ಬೇಕಾಗಿತ್ತು.''

"ನಿನ್ನ ಮಗಳೇ ಡಾಕ್ಟರಲ್ಲ ಅಕ್ಕಾ.. ಈ ಸಾರಿ ಬಂದಾಗ ನೋಡು ಅಂತ ಹೇಳು''

"ನನ್ನ ಮಗಳು ಬರೋದೇ ಅಪರೂಪ.. ಬಂದರೂ, ಮಾರನೇ ದಿನವೇ ಹೊರಟು ಬಿಡ್ತಾಳೆ. ಬಿಡುವೆಲ್ಲಿರುತ್ತೆ!..ನಿನ್ನ ಮಗಳು ಏನೂ ಗೊತ್ತೇ ಇಲ್ಲದವಳಂತೆ 'ಗುಂ' ಅಂತ ಇದ್ದಳು. ಇವಳ್ಯಾಕೆ ತಾನಾಗಿಯೇ ಮಾತಾಡಿಸ್ತಾಳೆ? ಸಮಸ್ಯೆ ಇರೋದು ನಿನ್ನ ಮಗಳಿಗೆ. ಅವಳು ತಾನೇ ಹೇಳ್ಬೇಕು. ನಿನ್ನ ಕೈಯಲ್ಲೂ ಹೇಳಿಲ್ವಾ?..''

"ಇಲ್ಲ ಅಕ್ಕ. ಅವಳು ನನ್ನ ಹತ್ರವೂ ಸರಿಯಾಗಿ ಮಾತಾಡುಲ್ಲ..''

"ಅದೇ ಯಾಕೆ ಅಂತ.. ನೀನು ಇದ್ದ ಕಡೆ ಅವಳು ಇರುವುದಿಲ್ಲ. ನಿನ್ನನ್ನ ಕಂಡ್ರೆ ಪ್ರೀತಿ ಇದ್ದಂತೆ ಅನ್ನಿಸುವುದಿಲ್ಲ..''

"ಪ್ರೀತಿ ಹೇಗೆ ಹುಟ್ಟುತ್ತೆ ಹೇಳು? ನಾನು ಸಾಕಿದ್ರೆ ತಾನೇ?''

"ಅಂದ್ರೇ...ನೀನ್ಯಾಕೆ ಸಾಕ್ಲಿಲ್ಲ..? ಎಲ್ಲಿ ಬಿಟ್ಟಿದ್ದೆ?''

"ಹೌದಕ್ಕ. ನಾನು ಇವಳನ್ನು ಬೇರೆ ಯಾರಿಗೋ ಮಕ್ಕಳಿಲ್ಲದವರಿಗೆ ಕೊಟ್ಟು ಬಿಟ್ಟಿದ್ದೆ.'' ತಪ್ಪನ್ನು ಮಾಡಿದವಳ ದನಿ ಇತ್ತು.

"ಇದೆಂಥಾ ಅನ್ಯಾಯಾನೇ..? ಹೊತ್ತು ಹೆತ್ತು ಮಗುವನ್ನು ಯಾರಿಗೋ

ಕೊಡುವುದೆಂದರೇ?.. ಯಾಕೇ ಇಂಥಾ ಕೆಲಸ ಮಾಡ್ದೆ?..

"ಪರಿಸ್ಥಿತಿ ಹಾಗಿತ್ತು ಅಕ್ಕಾ.."

"ಹೆತ್ತ ಮಗೂನ ಮಾರಿದೆ ಅಂತ ಹೇಳು.. ಎಷ್ಟು ಕೊಟ್ಟರು?.." ಚುಚ್ಚಿ ನುಡಿದಳು.

"ಅಕ್ಕಾ! ಹೀಗೆಲ್ಲಾ ಮಾತಾಡ್ಬೇಡ.. ಮಗಳು ಸುಖವಾಗಿ ಬೆಳೀಲಿ ಅಂತ. ನನಗೆ ಆಶ್ರಯ ಕೊಟ್ಟೋರಿಗೆ ವಹಿಸಿಕೊಟ್ಟೆ. ಅವರು ಅನುಕೂಲವಾಗಿದ್ದರು."

"ಮತ್ತೇನು ಸಮಸ್ಯೆ ಈಗ ನಿನ್ನ ಮಗಳಿಗೆ?"

"ಆ ದಂಪತಿಗಳಿಗೆ ಮಕ್ಕಳಿರಲಿಲ್ಲ. ಒಂದು ಗಂಡು ಮಗುವನ್ನು ದತ್ತು ತೆಗೆದುಕೊಂಡಿದ್ದರು. ನನ್ನ ಕಷ್ಟ ಕಾಲದಲ್ಲಿ ನನಗೆ ಸಹಾಯ ಮಾಡಿದರು. ಅವರಿಗೆ ಹೆಣ್ಣುಮಗುವೊಂದು ಬೇಕಾಗಿತ್ತು.. ಕೊಟ್ಟು ಬಿಟ್ಟೆ."

"ನಿನ್ನ ಗಂಡ ಒಪ್ಕೊಂಡ್ನೇನೇ?".. ಅವನೋ ಖಾರದ ಮನುಷ್ಯ.."

"ಅವರಿಗೆ ಗೊತ್ತೇ ಆಗ್ಲಿಲ್ಲ ಅಕ್ಕಾ. ಹತ್ತು ತಿಂಗಳು ಜೈಲಿನಲ್ಲಿದ್ದರು. ಆಗ ಹುಟ್ಟಿದವಳು ಇವಳು. ನಮಗೆ ಚಿದಾನಂದ ಒಬ್ಬನೇ ಸಾಕು ಅಂತ ಬಲವಾಗಿ ಅನ್ನಿಸಿತು."

"ಅದಕ್ಕೇ ಮತ್ತೇ, ಈ ಹುಡುಗಿಗೆ ನಿನ್ನನ್ನು ಕಂಡರೆ ತಿರಸ್ಕಾರ. ಯಾರು ಎಷ್ಟೇ ಸುಖವಾಗಿರಲಿ, ತಾಯಿ ದೂರ ಮಾಡಿದ್ರೆ.. ದ್ವೇಷ ಹುಟ್ಟದೇ ಇರುತ್ತಾ ? ನೀನು ಮಾಡಿದ್ದು ಸರಿಯಲ್ಲ. ಹೋಗಲಿ, ಆ ತಂದೆ ತಾಯಿಗಳನ್ನು ಬಿಟ್ಟು ಇಲ್ಲಿ ಯಾಕೆ ಬಂದು ಇದಾಳೆ?"

"ಅಲ್ಲಿ ಒಂದು ದುರಂತ, ತಂದೆಗೆ ಅನಾರೋಗ್ಯ.. ತಾಯಿ ಬದುಕಿಲ್ಲ. ಆ ಅಣ್ಣನಿಗೆ ಇವಳು ಬೇಕಿಲ್ಲ. ಮನೆಯ ಕಾರುಬಾರೆಲ್ಲಾ ಅವನದೇ. ಚಿದಾನಂದ ಅವರ ಮನೆಯಲ್ಲಿ ಕೆಲಸಕ್ಕೆ ಇದ್ದ. ದಿನಾ ಅಣ್ಣತಂಗಿಯರಿಗೆ ಜಗಳ. ಚಿದಾನಂದನಿಗೂ ನಿಜ ಏನೂಂತ ಗೊತ್ತಿರ್ಲಿಲ್ಲ. ಒಂದು ಸಾರಿ ನಾನು ಹೋಗಿದ್ದಾಗ, ನಿಜವನ್ನು ಹೇಳ್ಬಿಟ್ಟೆ. ಅದೇ ನಾನು ಮಾಡಿದ ತಪ್ಪು. ಅದನ್ನೇ ಪಟ್ಟು ಹಿಡಿದು, ಅಣ್ಣ ನಿಮ್ಮ ಮಗಳನ್ನು ಕರ್ಕೊಂಡು ಹೋಗಿ ಅಂತ ಪೀಡಿಸಲು ಪ್ರಾರಂಭಿಸಿದ. ಕಡೆಗೆ ಬಲವಂತವಾಗಿ ಈ ಹುಡುಗಿಯನ್ನು ಒಪ್ಪಿಸಿದೆ. ಆದರೆ ಇವಳು ನನ್ನ ಜೊತೆ ಇರಲು ಒಪ್ಪಲಿಲ್ಲ. ಕೆಲವು ದಿನಗಳು ಇಲ್ಲಿ ಇರಲಿ ಅಂತ ಕರ್ಕೊಂಡು ಬಂದೆ.." ಸುಳ್ಳುಗಳನ್ನು ಸೇರಿಸಿ ಆಡಿದಳು.

"ಸರಿ, ಹೇಗೂ ಬಂದಿದೀಯಲ್ಲ, ಈ ಸಾರಿ ನಿನ್ನ ಜೊತೆಗೆ ಕರ್ಕೊಂಡು ಹೋಗು.."

"ಯಾಕಕ್ಕಾ.. ನಿನಗೆ ಅವಳಿಂದ ತೊಂದರೇನೇ?"

"ಅವರವರ ಮಕ್ಕಳು ಅವರವರ ಮನೇಲಿರ್ಬೇಕು.. ಹೇಮಂಗೆ ಏನನ್ನಿಸುತ್ತೋ..? ಇದುವರೆಗೂ ಚಿಕ್ಕಮ್ಮ ಅಂತ ನೀನಾಗಲೀ, ಅಥವಾ ನಿನ್ನ ಮಗಳಾಗಲಿ, ಎಲ್ಲಿದೀರ, ಹೇಗಿದೀರಿ ಅಂತ ಅವಳಿಗೆ ಗೊತ್ತಿತ್ತಾ!.. ಅವಳೂ ಬೆಳೆದಿದಾಳೆ. ಓದ್ತಾ ಇದಾಳೆ.. ಅವಳಿಗೂ ಮುಜುಗರ ಆಗುತ್ತೆ.. ಅದೂ ಅಲ್ದೇ ಮುಂದೆ ಅವಳನ್ನು ಭುಜಂಗ ಮದುವೆಯಾಗೋನು.. ಅವನೂ ಆಗ ಈಗ ನಮ್ಮ ಮನೆಗೆ ಬರ್ತಾ ಇರ್ತಾನೆ.."

"ಓ ನಿನ್ನ ಮಗಳಿಗೆ ಮದುವೆ ನಿಶ್ಚಯವಾಗಿದೆಯಲ್ವಾ, ಯಾವಾಗ ಮದುವೆ?"

"ಅವಳ ಓದು ಮುಗೀಬೇಕು. ಮೊದಲು ನನ್ನ ಮಗಳು ಡಾಕ್ಟರಾಗಲಿ....ಆಮೇಲೆ ಮದುವೆ." ಹೆಮ್ಮೆಯಿಂದ ಹೇಳಿಕೊಂಡಳು.

"ಹೂಂ, ಅವತ್ತೇ ಹೇಳಿದ್ಯಲ್ಲ, ಅವಳು ಇಲ್ಲಿಗೆ ಬಂದು ಏನು ಮಾಡ್ತಾಳೆ, ಕ್ಲಿನಿಕ್ಕು ಇಡ್ತಾಳಾ? ಅವಳ ಗಂಡನ ಮನೆಯವರು ಏನಂತಾರೆ?"

"ಅದೇನು ಮಾಡ್ತಾಳೋ, ಅದೆಲ್ಲಾ ಅವಳ ಗಂಡನ ಮನೆಯವರಿಗೆ ಸೇರಿದ್ದು. ಏನಿದ್ರೂ ಕನ್ಯಾದಾನ ಮಾಡೋದಷ್ಟೇ ನಮ್ಮ ಕೆಲಸ. ಅವನೂ ಮನೆ ಅಳಿಯನಾಗಿರ್ತಾನೆ. ಇವರಿಬ್ಬರನ್ನು ಬಿಟ್ಟು ಬೇರೆ ಯಾರಿದಾರೆ ನಮಗೆ?"

"ನಾಲ್ಕೈದು ವರ್ಷಗಳಿಂದ ಬೆಂಗಳೂರಿನಲ್ಲಿದಾಳೆ, ಅವಳಿಗೆ ಈ ಚಿಕ್ಕ ಊರು ಸರಿ ಹೋಗುತ್ತೇನೇ ಅಕ್ಕಾ...ಅತ್ತಿಗೆ ಮನೆಯವರು ಏನಂತಾರೆ?"

"ನೀನು ಅಪಸ್ವರದ ರಾಗ ಎಳೀಬೇಡ. ಅವಳ ಮಾವ, ಅವಳ ಆಸೆಗೆ ಒಪ್ಪಿ ಮೆಡಿಕಲ್ ಕಾಲೇಜಿಗೆ ಸೇರಿಸಿದಾರೆ. ಖರ್ಚೆಲ್ಲಾ ಅವರದೇ. ಅವಳು ಇಲ್ಲಿರಲೇ ಬೇಕು. ಇಲ್ಲಿರದೇ ಇನ್ನೆಲ್ಲಿಗೆ ಹೋಗ್ತಾಳೇ?.. ಇಂಥ ಪ್ರಶ್ನೆಗಳನ್ನ ನನ್ನ ಮಗಳ ಹತ್ರ ಕೇಳ್ಬೇಡ. ತಿಳೀತಾ?"

"ನಂಗೇನು ಅಷ್ಟು ತಿಳಿಯುಲ್ವಾ! ಸುಮ್ಮನೇ ಕೇಳ್ದೆ.. ನಿನ್ನ ನೆಂಟರಿಷ್ಟರ ಪೈಕಿ, ನಮ್ಮ ಚೈತ್ರಂಗೆ ಸರಿ ಹೊಂದುವಂಥ ಗಂಡು ಯಾವ್ದಾದ್ರೂ ಇದ್ರೆ ಹೇಳು.. ಅವಳಿಗೆ ಈಗ ನಾನೇ ಮದುವೆ ಮಾಡ್ಬೇಕು.."

"ಹೂಂ, ನೋಡಿದ್ರಾಯ್ತು.. ಪಲ್ಲವಿ ಈಗ ನಿನ್ನ ಮಗಳೋ, ಆ ದಂಪತಿಗಳ ಮಗಳೋ ಅಂತ ಸರ್‍ಯಾಗಿ ಹೇಳು. ಕೇಳ್ದೋರ್ಗೆ ಹೇಳ್ಬೇಡ್ವೇ.. ವರೋಪಚಾರ, ವರದಕ್ಷಿಣೆ ಅಂತ ಖರ್ಚು ಬೀಳುತ್ತೆ. ನಿನ್ಹತ್ರ ಏನಿದೆ? ನಿನ್ನ ಗಂಡ ಏನು ಆಸ್ತಿ ಬಿಟ್ಟು ಹೋಗಿದಾನೆ? ನಿನ್ನ ಮೂಗ ಎಷ್ಟು ಸಂಪಾದಿಸ್ತಾನೆ?.. ಆ ಅಣ್ಣ ಏನಾದ್ರೂ ಕೊಡ್ತಾನೋ ಹೇಗೆ? ಪಟಪಟನೆ ಕೇಳಿದಳು.

"ಹೀಗೆಲ್ಲಾ ಪ್ರಶ್ನೆ ಕೇಳಿದ್ರೆ ನಾನು ಏನು ಹೇಳ್ಲೀ?...ನನ್ನ ಸ್ಥಿತಿಗತಿ ನಿನಗೆ ಗೊತ್ತೇ ಇದೆ...ಸರಳವಾಗಿ ಮದುವೆಯಾಗುವಂಥ ವರ ಇದ್ರೆ ಹೇಳು...ಅಂದ್ಹಾಗೇ, ಹೇಮಂಗೆ ಅಂತ, ಒಡವೆ ವಸ್ತ್ರ ಬೆಳ್ಳಿ ಬಂಗಾರ ಎಲ್ಲಾ ತೆಗೆದು ಇಟ್ಟಿದೀಯ..? ವರೋಪಚಾರಕ್ಕೆ ಏನು ಕೊಡ್ತಿದೀಯ?.. ಒಬ್ಬಳೇ ಮಗಳು.. ನಿನ್ನದೆಲ್ಲಾ ಅವಳದ್ದೇ.. ಅಲ್ವೇನಕ್ಕಾ?"

"ಹೇಮಂಗೆ ಚಿನ್ನ ಬೆಳ್ಳಿ ಮೇಲೆ ಆಸೆ ಇಲ್ಲ, ಆದರೂ ಮದುವೇಲಿ ಅಳಿಯ ಮಗಳಿಗೆ ಸಂಪ್ರದಾಯದ ಪ್ರಕಾರ ಏನೇನು ಕೊಡ್ಬೇಕೋ ಅದನ್ನೆಲ್ಲ ಕೊಟ್ಟೇ ಕೊಡ್ತೀನಿ. ಇನ್ನು ವರದಕ್ಷಿಣೆ?.. ನಮ್ಮದು ಅಂತ ಏನಿದೆ? ಎಲ್ಲಾ ಅವನಿಗೇ.. ಈಗಲೂ ಅವನೇ ನೋಡಿಕೊಳ್ತಿದಾನೆ. ಮುಂದೂ ಅವನೇ.. ಭುಜಂಗ ತುಂಬಾ ಒಳ್ಳೆಯ ಹುಡುಗ...ಹೇಮಾ ಗಂಡು ಹುಡುಗನಾಗಿದ್ರೂ ಇಷ್ಟು ಅಕ್ಕರೆ ತೋರಿಸ್ತಾ ಇದ್ಲೋ ಇಲ್ವೋ.. ತಾಯಿಗೆ ತೋರಿಸುವಷ್ಟೇ ಪ್ರೀತಿ ವಿಶ್ವಾಸ ನನ್ನ ಮೇಲೆ ಇದೆ. ನಮ್ಮ ಹೇಮಾ ತುಂಬಾ ಅದೃಷ್ಟ ಮಾಡಿದ್ಲು"

"ನೀನು ಪುಣ್ಯವಂತೆ.." ಮಂದಾಕಿನಿ ಹೊಗಳಿದಳು. ವೈದೇಹಿ ಉಬ್ಬಿ ಹೋದಳು. ಅವರಿಬ್ಬರ ಸಂಭಾಷಣೆಗಳನ್ನು ಕೇಳಿಸಿಕೊಂಡ ಚೈತ್ರಾಳ ಚಿಂತೆ ಹೆಚ್ಚಾಗಿತ್ತು. ಮಂದಾಕಿನಿಯ ಮಾತುಗಳಿಗೆ ಅಚ್ಚರಿಗೊಂಡಳು. ಮಂದಾಕಿನಿ ಒಳ್ಳೆಯವಳಿರಬಹುದೇ ಅಂತೆನ್ನಿಸಿದರೂ, ಅವಳು ತನಗೆ ಬಾಡಿಗೆ ತಾಯಿಯಾಗಬಾರದಾಗಿತ್ತೆಂದುಕೊಂಡಳು. ತನ್ನ ಸ್ವಂತ ತಾಯಿಗೆ ಮಗುವನ್ನು ಹೊರುವ ಚೈತನ್ಯವಿಲ್ಲದಿದ್ದರೂ, ಈ ಆಸೆ ಯಾಕೆ ಹುಟ್ಟಿಕೊಂಡಿತು.? ತಾನು ಹುಟ್ಟದೇ ಇದ್ದಿದ್ದರೆ ಏನಾಗುತ್ತಿತ್ತು...? ಈ ಯಾವ ಪರಿಸ್ಥಿತಿಗಳೂ ಒದಗುತ್ತಿರಲಿಲ್ಲ ಅಂತಂದುಕೊಂಡು ಹೊರಗೆ ಬಂದು ನಿಂತಳು. ಭುಜಂಗ ಈ ಕಡೆಯೇ ಬರುತ್ತಿರುವುದನ್ನು ಕಂಡಳು. "ಈ ಭುಜಂಗನೂ ತನ್ನ ಆಪ್ತನಲ್ಲ, ಸಧ್ಯದಲ್ಲೇ ಹೇಮಾಳ ಪತಿಯಾಗುವವನು ಎಂದು ಕೆಲವೇ ಗಳಿಗೆಗೆ ಮೊದಲು ಕೇಳಿದ ಸಂಭಾಷಣೆ ನೆನಪಾಗಿ, ಅವನ ಮೇಲೂ ನಂಬಿಕೆ ಮೂಡಲಿಲ್ಲ. ಅವನು ಹತ್ತಿರ ಬಂದರೂ, ಅವನನ್ನು ಗಮನಿಸದವಳಂತೆ ಸುಮ್ಮನೇ ನಿಂತಿದ್ದಳು. ಅವನು ಅವಳನ್ನು ತನ್ನೆಡೆಗೆ ತಿರುಗಿಸಿಕೊಂಡ. "ಚಿದಾನಂದ ಫೋನು ಮಾಡಿದಾನೆ. ನಿಮ್ಮನ್ನು ಕರ್ಕೊಂಡು ಬಾ ಅಂತ ಹೇಳಿದಾನೆ" ಎಂದ.

"ಇನ್ನೇನಂತೆ ಹೊಸಾ ನಾಟಕ?.." ಏನು ವಿಷಯ ಅಂತ ಕೇಳ್ಬೇಕಾಗಿತ್ತು."

"ಶರತ್‌ನ ಪೋಲಿಸರು ಅರೆಸ್ಟ್ ಮಾಡಿದಾರಂತೆ.. ರಾಜೀವನ ಕೊಲೆಯಾಗಿದೆಯಂತೆ." ಚೈತ್ರ ನಂಬದವಳಂತೆ ಬಾಗಿಲಿಗೆ ಒರಗಿದಳು. "ನಾನು ಅತ್ತೆಗೆ ಹೇಳಿ ಬರ್ತೀನಿ. ನೀವು ರೆಡಿಯಾಗಿ ಈಗಲೇ ಹೊರಡೋಣ..."

"ನಾನು ಬಂದು ಅಲ್ಲಿ ಏನು ಮಾಡೋದಿದೆ?.." ಅವರ್‍ಯಾರೂ ನನ್ನ ಸಂಬಂಧಿಗಳಲ್ಲ"

"ಪೋಲೀಸರು ನಿಮ್ಮನ್ನು ವಿಚಾರಿಸ್ತಾ ಇದಾರಂತೆ.. ಅವರು ಇಲ್ಲಿಗೇ ಬಂದರೇ?"

"ಬರಲಿ ಬಿಡಿ. ಇಲ್ಲೇ ಮಾತಾಡ್ತೀನಿ.."

"ಸುಮ್ಮನೇ ಎಲ್ರಿಗೂ ವಿಷಯ ತಿಳಿಯುತ್ತೆ. ಜನರ ಕುತೂಹಲ ಹೆಚ್ಚಾಗುತ್ತೆ. ಮಂದಾಕಿನಿ ಅತ್ತೇನೂ ನಮ್ಮ ಜೊತೆಗೆ ಬರಲಿ. ಅಲ್ಲದೇ ಪೋಲಿಸರ ವಿಷಯ, ಅವರು ಇದ್ದಲ್ಲಿಗೇ ಹೋಗಿ ಮಾತಾಡುವುದು ಒಳ್ಳೆಯದು" ಎನ್ನುತ್ತಾ ಒಳಕ್ಕೆ ಹೊರಟ. ಅವನು ಮಂದಾಕಿನಿಗೆ ಏನು ಹೇಳಿದನೋ, ಅವಳು ಹೊರಕ್ಕೆ ಬಂದಿದ್ದಳು. ಚೈತ್ರ ಯಾವ ಕುತೂಹಲವನ್ನು ತೋರದೇ ಮುಖವನ್ನು ಅತ್ತ ತಿರುಗಿಸಿದ್ದಳು. ಅವರಿಬ್ಬರೂ ಏನು ಮಾತನಾಡಿಕೊಂಡರೋ, ಮಂದಾಕಿನಿ, ಇವಳ ಕಡೆಗೊಮ್ಮೆ ನೋಡಿ ಒಳಕ್ಕೆ ಹೊರಟು ಹೋಗಿದ್ದಳು. ಭುಜಂಗ ಇವಳ ಬಳಿಗೆ ಬಂದ.

"ನಾನು ಈಗಲೇ ಬೆಂಗಳೂರಿಗೆ ಹೊರಡ್ತೀನಿ. ಈ ವಿಷಯದ ಬಗ್ಗೆ ಇನ್ಯಾರಿಗೂ ಏನೂ ತಿಳಿಯದು. ನಾನು ಅಲ್ಲಿಯ ಪರಿಸ್ಥಿತಿ ಹೇಗಿದೆ ಅಂತ ತಿಳಿದ್ಕೊಂಡು ನಿಮಗೆ ಫೋನು ಮಾಡ್ತೀನಿ. ನಿಮ್ಮ ಅಗತ್ಯ ಬಿದ್ದರೆ ನೀವು ಬರೋರಂತೆ. ನೀವು ಏನೂ ಆತಂಕ ಪಟ್ಕೋಬೇಡಿ. ಬಂದ ನಂತರ ನಿಮಗೆ ಎಲ್ಲವನ್ನೂ ವಿವರವಾಗಿ ಹೇಳ್ತೀನಿ" ಅಂತಂದ. ಪಲ್ಲವಿ ಮೌನವಾಗಿ ತಲೆಯನ್ನಾಡಿಸಿದಳು. ಅವನು ಒಳಗೆ ಹೋಗದೇ, ಸೀದಾ ತನ್ನ ಮನೆಗೆ ಹೊರಟು ಹೋದ.

* * *

ಎರಡೇ ದಿನಗಳಲ್ಲಿ ಭುಜಂಗ ಹಿಂತಿರುಗಿದ್ದ. ಅವನೊಂದಿಗೆ ಶ್ವೇತಾಳೂ ಇದ್ದಳು. ಶ್ವೇತಾಳನ್ನು ತನ್ನ ಮನೆಗೆ ಕರೆತಂದ. ತಾಯಿಗೆ ಪರಿಚಯಿಸಿದ.

"ಅಮ್ಮಾ ಇವಳು, ಶ್ವೇತಾ ಅಂತ. ಪಲ್ಲವಿಯ ಸ್ನೇಹಿತೆ. ಬಸ್ನಲ್ಲಿ ಪರಿಚಯ ಆಯಿತು. ಪಲ್ಲವೀನ ನೋಡೋಕೆ ಅಂತ ಬಂದಿದಾರೆ. ಅತ್ತೆಯ ಮನೇಲಿ ಸ್ನೇಹಿತೆಯರು ಕೂತು ಮಾತನಾಡೋದು ಕಷ್ಟ ಇಲ್ಲಾದರೆ ಮಹಡಿ ಮೇಲೆ ಕೂತು ಮಾತನಾಡಬಹುದು. ನಾನು ಈಗಲೇ ಹೋಗಿ ಪಲ್ಲವಿಯನ್ನು ಕರ್‍ಕೊಂಡು ಬರ್ತೀನಿ" ಎನ್ನುತ್ತಾ ಅತ್ತೆಯ ಮನೆಗೆ ಓಡಿದ. ಬಾಗಿಲಲ್ಲೇ ಪಲ್ಲವಿಯನ್ನು ಕಂಡು ವಿಷಯವನ್ನು ತಿಳಿಸಿ, ತನ್ನ ಮನೆಗೆ ಕರೆತಂದ. ಶ್ವೇತಾ ಓಡಿ ಬಂದು ಪಲ್ಲವಿಯನ್ನು ತಬ್ಬಿಕೊಂಡು ಅತ್ತಳು. ಅವಳು ಏನಾದರೂ ಮಾತನಾಡುವ ಮೊದಲೇ ಭುಜಂಗ ಇಬ್ಬರನ್ನು ಕುರಿತು ಹೇಳಿದ.

"ನೀವಿಬ್ರೂ ಮೇಲ್ಗಡೆ ಕೂತ್ಕೊಂಡು ಮಾತಾಡಿ. ನಾನು ಕಾಫಿಯನ್ನು ತರ್ತೀನಿ" ಎನ್ನುತ್ತಾ ಅವರಿಬ್ಬರನ್ನೂ ಕಳಿಸಿ, ತಾನು ಅಡಿಗೆ ಮನೆಯ ಕಡೆಗೆ ನಡೆದ.

"ಚೈತ್ರಾ, ಇದೇನೇ ಪಲ್ಲವಿ ಅಂತ ಯಾಕೇ ಹೆಸರು ಬದಲಾಯಿಸ್ಕೊಂಡೆ?"

"ಯಾರೂ ನನ್ನನ್ನ ಹುಡುಕದಿರಲಿ ಅಂತ, ಯಾರಿಗೂ ತಿಳಿಯದಂತೆ ಇಲ್ಲಿ ಅಜ್ಞಾತವಾಗಿದೀನಿ"

"ನಿನಗೋಸ್ಕರ, ಹುಡುಕಿಸೋರು ಯಾರೂ ಇರ್‍ಲಿಲ್ಲ ಬಿಡು.. ನೀನು ಮನೆ ಬಿಟ್ಟು ಹೋದದ್ದೇ ಸಾಕು ಅಂತ ಶರತ್ ಹಾಯಾಗಿದ್ದ. ಕೆಲವೇ ದಿನಗಳಲ್ಲಿ ನಿಮ್ಮ ಡ್ಯಾಡಿಯನ್ನು 'ಸ್ಪೆಷಲ್ ಹೋಂ'ಗೆ ಸೇರಿಸಿದ. ಮನೆಯನ್ನು ಸಾಲಗಾರರಿಗೆ ಬರೆದು ಕೊಟ್ಟ.. ಎಲ್ಲಾ ಮುಗಿಸಿದ."

"ನನ್ನ ಸಿಗ್ನೇಚರ್ ಇಲ್ಲದೇ ಇದ್ನೆಲ್ಲಾ ಹೇಗೇ ಮಾಡ್ದ ?.." ನಾನು ಸುಮ್ಮನಿರಲ್ಲ.

"ಏನೋ ಗೊತ್ತಿಲ್ಲ, ನಿಂಗೆ ಯಾವುದರಲ್ಲೂ ಪಾಲು ಇಲ್ಲ ಅಂತ ಹೇಳ್ತಾನೇ ಇದ್ದ"

"ಅದ್ಹೇಗೇ ಸಾಧ್ಯ? ನಾನು ಆ ತಂದೆ ತಾಯಿಯರ ಸ್ವಂತ ಮಗಳು.." ನನಗೂ ಹಕ್ಕಿದೆ.

"ಯಾವ ಎವಿಡೆನ್ಸೂ ಇಲ್ಲದಂತೆ ಎಲ್ಲವನ್ನೂ ನಾಶ ಮಾಡಿರಬಹುದು.. ಕ್ರಿಮಿನಲ್ ಬುದ್ಧಿ ಏನೇನು ಮಾಡಿದನೋ.. ಆದರೂ ಈ ಹಂತಕ್ಕೆ ಹೋಗ್ತಾನೆ ಅಂತ ನಾನಂದ್ಕೊಂಡಿರ್‍ಲಿಲ್ಲ..."

"ಹಾಗಾದ್ರೆ ಈ ವಿಷಯ ನಿಜಾನಾ?" ದನಿ ನಡುಗಿತ್ತು.

"ಯಾವುದು? ರಾಜೀವನ್ನ ಕೊಂದಿದಾನೆ ಅನ್ನೋದಾ?..." ಹೌದು ಎನ್ನುವಂತೆ ತಲೆ ಆಡಿಸಿದಳು. "ಹುಂ, ನಿಜ ಅಂತ ಒಪ್ಕೊಂಡಿದಾನಂತೆ. ಪೇಪರ್ನಲ್ಲಿ ಬಂದಿತ್ತಲ್ಲ.. ನಿಂಗೊತ್ತಿಲ್ವಾ?"

"ಯಾವ ಪೇಪರ್ರೋ.. ಇಲ್ಲಿಯೋರ್ಗೆ ಅವನ್ಯಾರು ಅಂತ್ಲೇ ಗೊತ್ತಿಲ್ಲ.. ಚಿದಾನಂದನನ್ನೂ ಬಿಡಿಸಿ ಕಳಿಸ್ಬಿಟ್ಟ ಅಂತ ಎಷ್ಟೋ ದಿನಗಳ ಮೇಲೆ ಗೊತ್ತಾಯ್ತು..." ಅವನು ಇಲ್ಲಿಗೆ ಬಂದಿದ್ದ.

"ಚಿದಾನಂದ ಬಂದು ಹೇಳ್ದೇ ಇದ್ದಿದ್ರೆ, ನೀನು ಇಲ್ಲಿ ಇದೀಯ ಅಂತ ನಂಗೆ ಗೊತ್ತಾಗ್ತಾನೇ ಇರ್‍ತಿಲ್ಲ ಮಾರಾಯಿತಿ.." ಮೊದಲು ಇವರುಗಳ ಬಗ್ಗೆ ಗೊತ್ತೇ ಇರ್‍ತಿಲ್ಲ ನಿಂಗೆ?"

"ನಾನು ಇಲ್ಲಿದೀನಿ ಅಂತ ಶರತ್‌ಗೆ ಹೇಳ್ಬೇಡ... ಹೊಸಾ ಪ್ಲ್ಯಾನ್ ಮಾಡಿಯಾನು.."

"ಏನೂ ಮಾಡುಲ್ಲ, ಮಾಡಿದ್ರೂ ಯಾರೂ ನಂಬುಲ್ಲ. ನಾನು ಒಬ್ಬನೇ ಮಗ, ನನಗೆ ಅಣ್ಣ ತಂಗಿ ಯಾರಿಲ್ಲ ಅಂತ ಹೇಳಿದಾನಂತೆ.. ರಾಜೀವ ನನ್ನ ಬಿಸಿನೆಸ್ ಪಾರ್ಟ್ನರ್.. ಅವನಿಗೂ ನನಗೂ ಜಗಳ ಆಗಿತ್ತು ಅಂತ ಹೇಳಿಕೆ ಕೊಟ್ಟಿದಾನಂತೆ..."

"ಪೋಲಿಸರು ನನ್ನನ್ನು ಹುಡುಕಿಸುತ್ತಿರಬಹುದು ಅಂತ ಚಿದಾನಂದ ಹೇಳಿದ್ನಂತೆ.."

"ಚಿದಾನಂದನಿಗೆ ಹಾಗಂತ ಹೇಳ್ದೋಳು ನಾನೇ...ರಾಜೀವಂಗೆ ಮದುವೆಯಾಗಿತ್ತು. ಅವನ ಹೆಂಡತಿ ಓಡಿ ಹೋಗಿದಾಳೆ ಅಂತ ಹೇಳಿದ್ನಂತೆ..'

"ಥೂ, ಎಂಥಾ ಚೀಪ್ ಮೆಂಟಾಲಿಟಿ ಅಲ್ವಾ?.. ನನ್ನ ಈ ದುರವಸ್ಥೆಗೆ ಅವನೇ ಕಾರಣ. ನನ್ನನ್ನೇನಾದ್ರೂ ವಿಚಾರಣೆ ಮಾಡಿದ್ರೆ ನಾನು ಎಲ್ಲಾ ನಿಜವನ್ನು ಹೇಳಿಬಿಡ್ತೀನಿ."

"ಸುಮ್ನಿರು, ನೀನಾಗಿಯೇ ಮೈ ಮೇಲೆ ಇದನ್ನೆಲ್ಲಾ ಎಳ್ಕೋಬೇಡ. ಚಿದಾನಂದ ಒಬ್ಬ ಲಾಯರ್ರ ಹತ್ರ ಮಾತನಾಡಿದಾನೆ. ಅವರು ಸಾಕ್ಷ್ಯಾಧಾರಗಳಿಲ್ಲದೇ ಏನನ್ನೂ ಮಾಡುಕ್ಕೆ ಆಗುಲ್ಲ. ಶರತ್ ಹೇಳಿಕೆಯನ್ನು ಬದಲಾಯಿಸುವಂತೆ ಅನ್ನಿಸುವುದಿಲ್ಲ. ಈಗ ನೀನು ಮಂದಾಕಿನಿಯ ಮಗಳು ಅಂತಂದ್ರೇ ಕ್ಷೇಮ.. ನಿಜವನ್ನು ಹೇಳಿದ್ರೆ ಹಿಂಸೆಯೇ ಜಾಸ್ತಿ. ನಿನ್ನ ಪರ ಯಾರಿದಾರೆ ಹೇಳು "

"ಥೂ, ಬೇಡವಾದ ಸಂಬಂಧಕ್ಕೆ ಬಗ್ಗ ಬೇಕಾಯ್ತಲ್ಲೇ.. ಇದೂ ಒಂಥರಾ ಹಿಂಸೇನೇ.."

"ಬೇಡದಿದ್ರೆ ಹೋಗು..ರಾಜೀವನ ಕೊಲೆಯಲ್ಲಿ ನಾನೂ ಶಾಮೀಲು ಅಂತ ಹೇಳ್ಕೋ..."

"ರಾಜೀವನ ಹೆಂಡ್ತಿ ಎಲ್ಲಿ ಅಂತ ಅವನ ಮನೆಯವರು, ಪೋಲಿಸ್ನೋರು ಹುಡುಕಿಸದೇ ಇರ್ತಾರಾ?, ಪೋಲಿಸರು ಕೇಳಿದ್ರೆ ಏನೇ ಹೇಳ್ಲಿ?"

"ಅವನ ಮದುವೆ ಆಗಿತ್ತು ಅನ್ನೋದಕ್ಕೇ ಯಾವ ಸಾಕ್ಷಿಯೂ ಇಲ್ಲ, ಅಲ್ಲದೇ ಅವನು ಶರತ್‌ಗೆ ಮೋಸ ಮಾಡಿದ್ದ ಅನ್ನೋದು ಎಲ್ರಿಗೂ ಗೊತ್ತಿದೆ. ಮನೆಯೋರ್ಗೂ ಗೊತ್ತಿದೆ. ರಾಜೀವ ಮೋಸ ಮಾಡ್ದ, ಇವನು ಕೊಂದು ಹಾಕ್ದ ಅಷ್ಟೇ ಎಲ್ರೂ ಆಡ್ಕೊಳ್ತಾ ಇರೋದು.."

"ಆದರೂ ಭಯ ಆಗುತ್ತೇ ಕಣೇ.. ಏನಾದ್ರೂ ಹಗರಣ ಆದ್ರೆ.."

"ನಾನೂ, ಭುಜಂಗನಿಗೆ, ಚಿದಾನಂದನಿಗೆ ಎಲ್ಲವನ್ನು ಹೇಳಿದೀನಿ, ಭುಜಂಗ ನಿನ್ನನ್ನ ಪ್ರೀತಿಸ್ತಿದಾರಂತೆ. ಆದಷ್ಟು ಬೇಗ ಮದುವೆಯಾಗ್ಬಿಡು."

"ಡೈವೋರ್ಸ್ ಸಿಕ್ಕಿಲ್ಲವಲ್ಲೇ..."

"ಮದುವೆ ಆಗಿದೆ ಎನ್ನೋದಕ್ಕೇ ಸಾಕ್ಷಿ ಇಲ್ಲ, ಡೈವೋರ್ಸ್ ಯಾಕೆ!...ರಾಜೀವ ನಿನ್ನ ಅಕೌಂಟ್‌ಗೆ ಮೂವತ್ತು ಲಕ್ಷ ರೂಪಾಯಿಗಳನ್ನು ಹಾಕಿದಾನಂತೆ. ಆ ಹಣ ನಿನ್ನದು. ಆಗಿನ ಹೆಸರು ಚೈತ್ರಾ. ಈಗ ಪಲ್ಲವಿ ಅಂತ ಹೆಸರನ್ನು ಬದಲಾಯಿಸಿಕೊಂಡಿದೀಯ...ಚೈತ್ರಾನೇ ಪಲ್ಲವಿ ಅಂತ ಎಷ್ಟು ಜನರಿಗೆ ಗೊತ್ತಿರುತ್ತೇ?..ಅಥವಾ ತಿಳಿದುಕೊಳ್ಳಲು ಸಮಯ ಎಲ್ಲಿರುತ್ತೇ?..ಅಲ್ಲದೇ ಈಗ ಅವನೇ ಇಲ್ಲ...ಡೈವೋರ್ಸ್ ಆಗಲಿ, ಬಿಡಲಿ ಯಾವ ಲೆಖ್ಖ?" ಹಣ ಏನಾಯ್ತು? ಯಾವುದೂ ಬಯಲಾಗುವುದೇ ಬೇಡ. ಸುಮ್ಮನಿದ್ದು ಬಿಡು.

“ಆ ಹಣದ ಮೇಲೆ ನನಗೆ ಯಾವ ಹಕ್ಕೂ ಇಲ್ಲ, ಆಸೆಯೂ ಇಲ್ಲ”

“ನಿನಗೆ ಬೇಡವಾದ್ರೆ ನಂಗೆ ಕೊಡು. ನನಗೆ ಹಣದ ಅಗತ್ಯ ಇದೆ...ದಡ್ಡಿ ಕಣೇ ನೀನು. ಹಣ ಇಲ್ಲದೇ ಹೇಗೇ ಇರ್ತೀಯೋ”...ಶರತ್ ನಂಗೆ ಏನೂ ಕೊಡ್ಲೇ ಇಲ್ಲ”

“ಕೆಲಸಕ್ಕೇ ಸೇರ್‍ಕೊಂಡು ಸಂಪಾದಿಸ್ತೀನಿ...ಅದು ಹಾಗೇ ಬಿದ್ದಿರಲಿ.. ಏನೂ ಬೇಡ”

“ಪೆದ್ದು ಪೆದ್ದಾಗಿ ಮಾತಾಡ್ಬೇಡ.. ಭುಜಂಗನ್ನ ಮದುವೆಯಾಗಿ ಹೊಸ ಜೀವನವನ್ನು ಶುರು ಮಾಡು. ನಿನ್ನ ರಕ್ಷಣೆಗೆ ಒಬ್ಬರು ಬೇಕಲ್ಲೇ...ಬೇರೆ ಯಾರಿದಾರೆ?”

“ಈ ವಿಷಯಗಳನ್ನೆಲ್ಲಾ ತಿಳಿಸಿದ್ರೆ, ಮದುವೆಯಾಗ್ತಾರೇನೆ? ಯಾಕೋ ಅನುಮಾನ.”

“ಭುಜಂಗಂಗೆ ಎಲ್ಲಾ ಹೇಳಿದೀಯಲ್ಲ.. ಅವರು ನೋಡ್ಕೋತಾರೆ ಬಿಡು. ಎಷ್ಟು ಹ್ಯಾಂಡ್ಸಮ್ ಆಗಿದಾರೆ.. ಅಂಥೋರನ್ನ ಮದುವೆಯಾಗುಕ್ಕೆ ಅನುಮಾನಿಸ್ತೀಯಲ್ಲ. ನೀನು ಹೀಗೇ ಅನುಮಾನಿಸ್ತಾ ಇದ್ರೆ, ನಾನು ಅವರನ್ನು ಮದುವೆಯಾಗಿ ಬಿಡ್ತೀನಿ ಅಷ್ಟೇ...ಸುಮ್ನೆ ಹೂಂ ಅನ್ನು”

“ನೀನೂ ಅದೇ ಗುಂಪಿಗೆ ಸೇರಿದೀಯಲ್ಲೇ...ಶರತ್‌ನ ಲವ್ ಮಾಡ್ತಿದ್ದೆ ಅಲ್ವಾ?”

“ಈಗೆಂಥಾ ಲವ್? ಅವನು ಜೈಲಿನಲ್ಲಿದಾನೆ. ಕನ್ಫೆಸ್ ಬೇರೆ ಮಾಡ್ಕೊಂಡಿದಾನೆ. ಶಿಕ್ಷೆಯಾಗ್ದೇ ಇರುತ್ತಾ! ವಾಪಸ್ಸು ಬರ್ತಾನಾ! ಅವನಿಗೋಸ್ಕರ ಕಾಯ್ತಾ ಕೂತಿರುಕ್ಕೆ ಆಗುತ್ತಾ? ಅವನನ್ನು ನಂಬಿ ಕೆಟ್ಟೆ ಮದುವೆಯಾಗ್ತೀನಿ ಅಂತ ನಂಬಿಸಿದ್ದ, ನನ್ನನ್ನ ಬಳಸಿಕೊಂಡ.”

“ಅಂದ್ರೇ...ಅವನ ಜೊತೆ ಸಂಬಂಧ ಇಟ್ಕೊಂಡಿದ್ಯಾ?...”

“ಹುಂ, ಅದೊಂದು ಥರ ಆಕರ್ಷಣೆ. ಅದರ ಫಲವಾಗಿ ನಾನು ಪ್ರೆಗ್ನೆಂಟ್ ಆಗಿದ್ದೆ. ತಿಳಿದ ತಕ್ಷಣ ಅಬಾರ್ಷನ್ ಮಾಡಿಸ್ಕೊಂಡೆ..ಆ ಖರ್ಚನ್ನೂ ಕೊಡ್ಲಿಲ್ಲ ಪಾಪಿ...”

“ಪಾಪಿ ಕಣೇ ನೀನು...ಯಾರಾದ್ರೂ ಭ್ರೂಣ ಹತ್ಯೆ ಮಾಡ್ತಾರಾ?”

“ಮದುವೇನೇ ಆಗಿರ್‍ಲಿಲ್ಲ, ಮಗು ಹುಟ್ಟಿದರೆ, ಅಪವಾದ ಬರ್ತಿರ್‍ಲಿಲ್ವಾ? ಅದಕ್ಕೇ, ತೆಗೆಸಿ ಬಿಟ್ಟಿದ್ದೇ ಸರಿ. ನನಗೆ ಪಾಪ ಅಂತ ಅನ್ನಿಸ್ತಿಲ್ಲ.”

“ಮತ್ತೆ ಮುಂದೆ?...ಏನ್ಮಾಡ್ತೀಯ?”

“ನಿನಗಿಂತ ಕೆಟ್ಟ ಪಾಡು ನಂದು. ಅಮ್ಮ, ಮಾವನ ಮನೆಯಲ್ಲಿ ಕೆಲಸದವಳ ಥರ ಇದಾಳೆ. ಅಣ್ಣ ಅಲ್ಲಿ ಇಲ್ಲಿ ಸಂಪಾದನೆಗಿಂತ ಹೆಚ್ಚು ಖರ್ಚು ಮಾಡ್ಕೊಂಡಿದಾನೆ. ನನಗೆ ಕೆಲಸ ಇಲ್ಲ, ಮದುವೆ ಇಲ್ಲ, ಒಂಟಿ ಜೀವನ...ಶರತ್ ಮಾಡ್ತಿದ್ದ ಬಿಸಿನೆಸ್ ಗತಿ ಏನಾಯ್ತೋ.”

“ಏನಾದ್ರೂ ಆಗ್ಲಿ ನಂಗೇನು?...ನಂಗೆ ಯಾವ ಆಸಕ್ತಿಯೂ ಇಲ್ಲ”

“ಲಾಯರ್‍ರ ಹತ್ರ ಮಾತಾಡೋದು ಒಳ್ಳೆಯದು, ಅವರು ಸಲಹೆಯನ್ನು ಕೊಡ್ತಾರೆ. ನಿನ್ನ ಪಾತ್ರ ಏನೂ ಇಲ್ಲ ಅಂತ ಅವರು ಹೇಳಿದರೆ, ನಿನಗೂ ನೆಮ್ಮದಿ, ಏನಂತೀಯಾ?..”

“ಎಲ್ಲರೂ ಹೇಗೆ ಹೇಳ್ತೀರೋ ಹಾಗೆ.. ಒಟ್ನಲ್ಲಿ ಶರತ್ ನಂಗೆ ನಿಂಗೆ ಇಬ್ರಿಗೂ ಮೋಸ

ಮಾಡ್ಬಿಟ್ಟ. ಅವನು ಮೊದಲು ಹೀಗಿರ್ಲಿಲ್ಲ..ಹಣದ ಆಸೆಗೆ ಬಿದ್ದ ಅದೇ ಅನಾಹುತ ಆದದ್ದು"

"ಕಾರಣಾಂತರಗಳಿಂದ ಎಲ್ಲರೂ ಬದಲಾಗ್ತಾರೆ ಚೈತ್ರಾ...ಅದಕ್ಕೇ ಹೇಳಿದ್ದು ನೀನು ಹೀಗೆ ಅನಾಥೆಯಂತೆ ಎಲ್ಲೋ ಇರುವ ಬದಲು, ಭುಜಂಗನ ಪತ್ನಿಯಾಗಿ, ಸುಖವಾಗಿರು. ಹಿಂದಿನದನ್ನೆಲ್ಲ ಮರೆತು ಬಿಡು..." ಶ್ವೇತಾ ಸಲಹೆಯನ್ನು ಕೊಟ್ಟಳು.

"ಸುಲಭವಾಗಿ ನಂಗೆ ಹೇಳ್ತೀಯ...ನಿನ್ನ ಪಾಡು! ನಿನ್ನ ಬಗ್ಗೆ ಅಯ್ಯೋ ಅಂತ ಅನ್ಸುತ್ತೆ ಕಣೇ. "

"ನಾನೂ ಶರತ್‌ನ ಮರೆಯುಕ್ಕೆ ಪ್ರಯತ್ನ ಮಾಡ್ತಿದೀನಿ...ಆಮೇಲೆ ನೋಡೋಣ."

ಭುಜಂಗ, ಕಾಫಿಯ ಟ್ರೇಯನ್ನು ಹಿಡಿದು ಮಹಡಿ ಹತ್ತಿ ಬಂದ. ಇಬ್ಬರೂ ಮಾತನ್ನು ನಿಲ್ಲಿಸಿದರು. "ಮಾತಾಡಿದ್ದು ಮುಗೀತಾ?" ಭುಜಂಗ ಕೇಳಿದ. ತಾನೇ ಕಪ್‌ನ್ನೆತ್ತಿ ಇಬ್ಬರಿಗೂ ಕೊಟ್ಟ. ತಾನೊಂದು ಕಪ್‌ನೆತ್ತಿಕೊಂಡು ಮಂಚದ ಮೇಲೆ ಕುಳಿತ.

"ನಿಮ್ಮ ಸ್ನೇಹಿತೆಗೆ, ತಾನು ಮಾಡಿದ್ದು ತಪ್ಪು ಎನ್ನುವ ಭಾವನೆ ಬೆಳೆದಿದೆ. ಅದನ್ನು ತೆಗೆದು ಹಾಕಬೇಕಲ್ಲ..." ನಿಮ್ಮ ಹತ್ರ ಮಾತಾಡಿದ್ಮೇಲೆ ಮನಸ್ಸು ಹಗುರವಾಗಿರಬೇಕಲ್ವಾ"

"ಅವಳಿಗೆ, ಮೇಲೆ ಮೇಲೆ, ಮನಸ್ಸಿಗೆ ಘಾಸಿ ಆಗಿದೆ...ಯಾರ ಮೇಲೂ ನಂಬಿಕೆ ಇಲ್ಲವಾಗಿದೆ. ನಿಜವಾದ ಪ್ರೀತಿಯನ್ನು ತೋರುವವರ ಅವಶ್ಯಕತೆ ಇದೆ...ಏನ್ಮಾಡ್ತಾಳೋ?"

"ಇವರಿಗೆ, ಇನ್ನೂ ನನ್ನ ಮೇಲೆ ನಂಬಿಕೆ ಬಂದಿಲ್ಲ, ನೀವಾದ್ರೂ ಧೈರ್ಯ ತುಂಬಿ. ಕಾಫಿ ಬಿಸಿ ಬಿಸಿಯಾಗಿದೆ ಕುಡೀರಿ" ಎಂದ. ಮೂವರೂ ಕಾಫಿಯನ್ನು ಕುಡಿದರು. "ನೀವುಗಳು ಸ್ವಲ್ಪ ಹೊತ್ತು ರೆಸ್ಟ್ ತಗೊಳ್ಳಿ, ನಂಗೆ ಸ್ವಲ್ಪ ಕೆಲಸವಿದೆ" ಎಂದು ಹೇಳಿ ಕೆಳಗೆ ಇಳಿದು ಹೋದ. ಗೆಳತಿಯರಿಬ್ಬರೂ ಅದೂ ಇದೂ ಮಾತನ್ನಾಡುತ್ತಾ, ಸ್ವಲ್ಪ ಹೊತ್ತಿನಲ್ಲೇ ನಿದ್ದೆ ಹೋದರು.

ಆ ರಾತ್ರಿ ಶ್ವೇತಾ, ಪಲ್ಲವಿ, ಭುಜಂಗನ ಮನೆಯಲ್ಲೇ ಉಳಿದರು.

* * *

"ಎರಡು ದಿನಗಳ ನಂತರ ಶ್ವೇತಾ ಊರಿಗೆ ವಾಪಸ್ಸು ಹೊರಟುಬಿಟ್ಟಳು. ಪಲ್ಲವಿ ಶ್ವೇತಾಳ ಕೈ ಹಿಡಿದಳು." ನೀನು ಇದ್ದುದು ತುಂಬಾ ಚೆನ್ನಾಗಿತ್ತು ಕಣೇ. ಒಂಟಿಯಾಗ್ಬಿಟ್ಟಿದ್ದೆ, ನಾಲ್ಕಾರು ದಿನಗಳು ಇರಬಹುದಾಗಿತ್ತು ನೀನು."

"ಇಲ್ಲ, ಯಾವುದೋ ಕೆಲಸದ ಇಂಟರ್‌ವ್ಯೂಗೆ ಹೋಗ್ತಿದೀನಿ ಅಂತ ಅಣ್ಣಂಗೆ ಅಮ್ಮಂಗೆ ಸುಳ್ಳು ಹೇಳಿ ಬಂದಿದೀನಿ. ಹೋಗ್ಲೇ ಬೇಕು. ಬೇಕಾದ್ರೆ ನೀನೇ ನನ್ನ ಜೊತೆಯಲ್ಲಿ ಬಾ. ಅಲ್ಲೇ ನಮ್ಮ ಮನೇಲಿರಬಹುದು..."

"ಇಲ್ಲ ಕಣೇ...ಆ ಊರಿಗೆ ಬರಲು ಮನಸ್ಸೇ ಇಲ್ಲ, ಇಲ್ಲಿ ಸೇಫ್ ಆಗಿದೀನಿ. ನೀನೇ ಬಿಡುವು ಮಾಡ್ಕೊಂಡು ಬಾ..."

"ಇಲ್ಲಿ ನಿನ್ನ ಖರ್ಚಿಗೆ ಹಣ ಯಾರು ಕೊಡ್ತಾರೆ!"

"ಬರುವಾಗ ನಾನೇ ಸ್ವಲ್ಪ ತಂದಿದ್ದೆ. ಭುಜಂಗನ್ನ ಕೇಳಿದ್ರೆ ಕೊಟ್ಟಿರ್ತಾರೆ. ನಿನ್ನ ಹತ್ರ ಇದ್ದರೆ ಕೊಟ್ಟಿರೇ, ನಿಧಾನವಾಗಿ ತೀರಿಸ್ತೀನಿ..ಅಷ್ಟಕ್ಕೂ ನನಗೆ ಹೆಚ್ಚು ಖರ್ಚು ಇಲ್ಲ.

"ತುಂಬಾ ತಂದಿಲ್ಲ, ಇಷ್ಟನ್ನು ಇಟ್ಕೋ ಎಂದು ಹೇಳಿ ನೂರರ ಹತ್ತು ನೋಟುಗಳನ್ನು ಎಣಿಸಿಕೊಟ್ಟಳು...ಚಿದಾನಂದನ ಹತ್ರ ಮತ್ತಷ್ಟು ಕಳಿಸ್ತೀನಿ. ಎಲ್ಲಾ ಲೆಖ್ಖ ಇಟ್ಕೋ..."

"ಇಷ್ಟೊಂದೇನು ಬೇಡ. ನೂರೋ ಇನ್ನಾರೋ ಸಾಕು..." ಎನ್ನುತ್ತಾ ತೆಗೆದುಕೊಂಡಳು.

"ಇರಲಿ ಇಟ್ಕೊಂಡಿರು. ಎಲ್ಲವನ್ನೂ ವಸೂಲು ಮಾಡ್ತೀನಿ..." ಎಂದಳು ನಗುತ್ತಾ.

ಭುಜಂಗ, ಅವಳನ್ನು ಬಸ್‌ಗೆ ಹತ್ತಿಸಲೆಂದು ಹೊರಟ. ಅವನೊಂದಿಗೆ ಪಲ್ಲವಿಯೂ ಹೊರಟಳು. ಇಬ್ಬರೂ, ಶ್ವೇತಾಳನ್ನು ಬಸ್‌ಗೆ ಹತ್ತಿಸಿ, ನೇರವಾಗಿ ವೈದೇಹಿಯ ಮನೆಗೆ ಬಂದರು. ಮನೆಯಲ್ಲಿ ಗಾಢವಾದ ಮೌನ ತುಂಬಿಕೊಂಡಿತ್ತು. ಭುಜಂಗ ಅನುಮಾನಿಸುತ್ತಾ ಒಳಗೆ ಅಡಿ ಇಟ್ಟ. ನಡು ಮನೆಯ ಗೋಡೆಗೆ ಒರಗಿ ಕುಳಿತಿದ್ದ ವೈದೇಹಿ ಅಳುತ್ತಿರುವಳೆಂದು ಭಾಸವಾಗಿತ್ತು. ಅವಳನ್ನು ಸಮೀಪಿಸಿದ. ಪಲ್ಲವಿ ವೆರಾಂಡದಲ್ಲೇ ನಿಂತಿದ್ದಳು. ಅವನು ಆತಂಕದಿಂದ ಕೇಳಿದ.

"ಏನಾಯ್ತು ಅತ್ತೇ? ಯಾಕೆ ಅಳ್ತಿದೀರಿ! ಯಾರು ಏನಂದ್ರು?"

"ಯಾಕೋ ಭುಜೀ ಹೀಗೆ ಮಾಡ್ಬಿಟ್ಟೆ?.." ಅಳುತ್ತಾ ಪ್ರಶ್ನಿಸಿದಳು.

"ಏನು ಹೇಳ್ತಿದೀರಿ ಅತ್ತೆ? ನಾನೇನ್ಮಾಡ್ದೆ!" ಪಲ್ಲವಿಯ ಕಡೆ ನೋಡಿದ.

"ಹೇಮ, ನಿನ್ನನ್ನ ತಿರಸ್ಕರಿಸಿದ್ದನ್ನ ನೀನ್ಯಾಕೆ ನಂಗೆ ಹೇಳ್ಲಿಲ್ಲ?" ದಬಾಯಿಸಿದಳು. ಭುಜಂಗ, ಸ್ವಲ್ಪ ದೂರದಲ್ಲಿ ಕುಳಿತಿದ್ದ ಮಂದಾಕಿನಿಯ ಕಡೆ ನೋಡಿದ. ಅವಳು ತಲೆ ತಗ್ಗಿಸಿದ್ದಳು. ಅವಳ ಮುಖ ಕಪ್ಪಿಟ್ಟಿತ್ತು. "ಇಷ್ಟು ದೊಡ್ಡ ವಿಷಯವನ್ನು ನನ್ನಿಂದ ಯಾಕೆ ಮುಚ್ಚಿಟ್ಟೆ? ಈಗಲೇ ಹೋಗಿ ಅವಳನ್ನು ಎಳ್ಕೊಂಡು ಬಾ, ಅವಳು ಓದಿದ್ದು ಸಾಕು."

"ಅತ್ತೇ...ಯಾವ ವಿಷಯವೂ ದೊಡ್ಡದಲ್ಲ.. ಎಲ್ಲಾ ಸುಳ್ಳು.."

"ಏನು ಸುಳ್ಳು? ಅವಳು ನಿನ್ನ ಹತ್ರ ಹೇಳಿದ್ದು ಸುಳ್ಳಾ?.. ನೀನು ಚಿದಾನಂದನಿಗೆ ಹೇಳಿದ್ದು ಸುಳ್ಳಾ?.. ಅಥವಾ ಮಂದಾಕಿನಿ ಮಗ ಹೇಳಿದ್ದನ್ನು ನನ್ನೊಡನೆ ಹೇಳಿದ್ಲಲ್ಲ ಅದು ಸುಳ್ಳಾ?"...ಏನೇ ಮಂದಾ.. ನಿಜ ಏನೂಂತ ನಂಗೆ ಗೊತ್ತಾಗ್ಲೇ ಬೇಕು."

"ಇವರು ನಿಮ್ಮ ಹತ್ರ ಏನು ಹೇಳಿದಾರೋ ನಂಗೊತ್ತಿಲ್ಲ, ತಪ್ಪೆಲ್ಲಾ ನನ್ನದೇ. ಇದರಲ್ಲಿ ಹೇಮಾಳದ್ದು ಏನೂ ತಪ್ಪಿಲ್ಲ." ಭುಜಂಗ ವೈದೇಹಿಯ ಪಕ್ಕಕ್ಕೆ ಬಂದು ನಿಂತ.

"ನೋಡು, ಈಗಲೂ ಮುಚ್ಚು ಮರೆ ಮಾಡ್ಬೇಡ. ನಿಜ ಏನೂಂತ ನಿನ್ನ ಬಾಯಿಂದ್ಲೇ ಬರಲಿ...ನಾನು ನಿನ್ನ ಮಗ ಅಂತ್ಲೇ ಭಾವಿಸಿದೀನಿ...ನಿನ್ನನ್ನ ನಂಬ್ತೀನಿ."

"ಭುಜಂಗ ಹಿಂತಿರುಗಿ ಪಲ್ಲವಿಯ ಕಡೆ ನೋಡಿದ. ಅವಳು ಹೊರಬಾಗಿಲಲ್ಲಿ ನಿಂತಿದ್ದಳು..." ಅತ್ತೇ, ಹೇಮಾಳನ್ನು ನಿರಾಕರಿಸಿದವನು ನಾನೇ. ಅವಳು ಸಧ್ಯದಲ್ಲೇ ಡಾಕ್ಟರಾಗುವವಳು, ಅವಳೆಲ್ಲಿ? ನಾನೆಲ್ಲಿ? ನಾನು ಅವಳಿಗೆ ತಕ್ಕವನಲ್ಲ, ನಂಗೆ ಅಳುಕುತ್ತೆ."

“ಹಾಗಂತ ಯಾರು ಹೇಳಿದ್ರು? ನಾನು ನಿನ್ನ ಮಾತನ್ನು ನಂಬುಲ್ಲ. ನಿಜ ಹೇಳು.”

“ನನಗೂ ತಿಳುವಳಿಕೆ ಇದೆ. ನನಗೋಸ್ಕರ ಅವಳು ತನ್ನ ವೃತ್ತಿಯನ್ನು ಬಿಟ್ಟು ಈ ಊರಿನಲ್ಲಿ ಇರುವುದು ಯಾವ ನ್ಯಾಯ ನೀವೇ ಹೇಳಿ...? ಅವಳ ಆಸಕ್ತಿಯೇ ಬೇರೆ. ”

“ಅವಳು ಕ್ಲಿನಿಕ್ ಇಟ್ಟುಕೊಳ್ಳಲಿ, ಪ್ರಾಕ್ಟೀಸ್ ಪ್ರಾರಂಭಿಸಲಿ...ಅದಕ್ಕೇನು?”

“ಇಲ್ಲ ಅತ್ತೇ ಅದು ಈ ಊರಿನಲ್ಲಿ ಸಾಧ್ಯವಿಲ್ಲ. ಹೊಸದಾಗಿ ಕ್ಲಿನಿಕ್ ಇಟ್ಟುಕೊಂಡರೆ, ಯಾವ ಪ್ರಯೋಜನವೂ ಇಲ್ಲ. ಅದರ ಬದಲು, ನಾಲ್ಕಾರು ಜನ ಸೀನಿಯರ್ ಡಾಕ್ಟರ್ಸ್ ಜೊತೆಯಲ್ಲಿದ್ದು ಅನುಭವವನ್ನು ಪಡೆಯಲಿ, ಅದು ಅವಳಿಗೆ ಉಪಯೋಗವಾಗುತ್ತೆ.”

“ಇದು ನಿನ್ನ ಮಾತಲ್ಲ; ಅವಳ ಮಾತು, ನೀನು ಈಗಲೂ ಅವಳ ಪರವನ್ನು ವಹಿಸಿಕೊಂಡು ಮಾತನಾಡಬೇಕಾಗಿಲ್ಲ. ಅವಳ ತಪ್ಪುಗಳನ್ನು ಮುಚ್ಚಿಟ್ಟು ಬೈಯಿಸಿಕೊಳ್ಳಲು ನೀನು ಚಿಕ್ಕ ಹುಡುಗನಲ್ಲ. ಆ ಕಾಲ ಕಳೆದು ಹೋಗಿದೆ. ಈಗ ಅವಳಿಗೆ ಬಾ ಅಂತ ಫೋನು ಮಾಡಿ ಕರೆಸು...ಮುಂದೆ ಸಿಗುವ ಮುಹೂರ್ತದಲ್ಲೇ ನೀನು ತಾಳಿ ಕಟ್ಟಿಬಿಡು...ಏನಾದ್ರೂ ಆಗ್ಲಿ.”

“ಇಲ್ಲ ಅತ್ತೆ ನನಗೆ ಈ ಮದುವೆ ಇಷ್ಟವಿಲ್ಲ. ಬಲವಂತವಾಗಿ ಮದುವೆ ಮಾಡಿದರೆ ನಾವಿಬ್ಬರೂ ಸುಖವಾಗಿರುವುದಿಲ್ಲ” ಎತ್ತಲೋ ನೋಡುತ್ತಾ ನುಡಿದ.

“ಬೇಡ ಭುಜಂಗ, ಇಷ್ಟು ಒಳ್ಳೆಯ ಬುದ್ಧಿ ನಿನಗೆ ಒಳ್ಳೆಯದಲ್ಲ. ಅವಳ ತಪ್ಪನ್ನು ಯಾಕೆ ಒಪ್ಪ ಹಾಕ್ಕೋತಿದೀಯೋ?...ಅವಳು ಬರಲಿ.. ಮುಂದೆ ನೋಡ್ತಿರು.”

“ಅಕ್ಕಾ ಸಮಾಧಾನ ಮಾಡ್ಕೋ ಭುಜಂಗ ಹೇಳೋದು ಸರಿ. ಬಲವಂತದ ಮದುವೆಯಿಂದ ಅವರಿಬ್ಬರೂ ಸುಖವಾಗಿರದೇ ಹೋದರೆ, ನಿನಗೆ ಕೊರಗಾಗದೇ ಇರುತ್ತಾ?”

“ನೀನು ಸುಮ್ನಿರು. ನೀನು ನಿನ್ನ ಮಗಳನ್ನು ಕರೆ ತಂದೆ. ಭುಜಂಗ ಅವಳ ಜೊತೆ ಸುತ್ತಾಡಿದ, ಅದನ್ನು ತಿಳಿದು ಅವಳ ಮನ ಕೆಟ್ಟಿದೆ.. ಅದೇ ಆಗಿರೋದು.”

“ಇಲ್ಲ ಅತ್ತೆ.. ಹಾಗೇನಿಲ್ಲ. ಹೇಮಾ ಈ ಬಗ್ಗೆ ಎಂದೂ ತಲೆ ಕೆಡಿಸಿಕೊಂಡಿಲ್ಲ. ನಾನು ಪಲ್ಲವಿ ಬರುವುದಕ್ಕೆ ಮೊದಲೇ, ಈ ನಿರ್ಧಾರವನ್ನು ತಗೊಂಡಿದ್ದೆ”

“ಈ ವಿಷಯಾನ ನನಗೆ ನೀನು ಮೊದಲೇ ಯಾಕೆ ಹೇಳ್ಲಿಲ್ಲ!..ಅವಳನ್ನು ಹೊತ್ತು ಹೆತ್ತು ಮುದ್ದಾಗಿ ಸಾಕಿ ಸಲಹಿದ್ದಕ್ಕೆ ಸಾರ್ಥಕವಾಯ್ತು. ಅವಳು ಅಲ್ಲೇ ಬಿದ್ದಿರಲಿ. ಅವಳೆಂದೂ ಈ ದಿಕ್ಕಿಗೆ ಬರುವುದೇ ಬೇಡ.” ವೈದೇಹಿ ರೋಷದಿಂದ ಅರಚಿದಳು.

“ಇಷ್ಟು ಕೋಪ ಮಾಡ್ಕೋ ಬೇಡಿ ಅತ್ತೇ..ನಿಮ್ಮ ಆರೋಗ್ಯ ಕೆಡುತ್ತೆ.”

“ಕೆಟ್ಟರೆ ಕೆಡಲಿ, ಇನ್ನು ನನಗೆ ಏನಾಗಬೇಕಾಗಿದೆ? ನೀವಿಬ್ರೂ ನಂಗೆ ಮೋಸ ಮಾಡ್ತಿದೀರಿ.”

“ಏನೇ ಅದು ವೈದೇಹಿ...ಯಾಕೆ ಹಾಗೆ ಅರಚ್ಕೋತಿದೀಯ?” ಅವಳ ಗಂಡ ಎದುಸಿರು ಬಿಡುತ್ತಾ ಕೇಳಿದ. ಭುಜಂಗ ರೂಮಿನ ಬಾಗಿಲ ಬಳಿಗೆ ಸರಿದ.

“ಎಲ್ಲಾ ನಿಮ್ಮಿಂದ್ಲೇ...ನಿಮ್ಮ ಆರೋಗ್ಯ ಸರಿಯಾಗಿದ್ದಿದ್ರೆ, ಹೇಮಾ, ಮೆಡಿಕಲ್ ಕಾಲೇಜ್ಗೆ

ಹೋಗ್ತಿರ್ಲಿಲ್ಲ, ಈ ಬುದ್ಧಿ ಬರ್ತಿರಲಿಲ್ಲ. ಮನೆ ಯಜಮಾನನಿಗೇ ಹೀಗಾದ್ರೆ ಇನ್ನೇನು!..ಎಲ್ಲಾ ತಲೆಕೆಳಗಾಯ್ತು. ಇದಕ್ಕೆ ನೀವೇ ಕಾರಣ'' ಬೊಟ್ಟು ತೋರಿದಳು.

''ಅತ್ತೇ ಮಾವನ್ನ ಅನ್ಬೇಡಿ...ಅವರದ್ದೇನು ತಪ್ಪು..?

''ಮಾವನ ತಪ್ಪಿಲ್ಲ, ಹೇಮನ ತಪ್ಪಿಲ್ಲ, ಯಾರದ್ದೂ ತಪ್ಪಿಲ್ಲ, ಎಲ್ಲಾ ತಪ್ಪು ನನ್ನದೇ. ಯಾರೂ ನನಗೆ ಏನೂ ಹೇಳ್ಬೇಡಿ. ನಿಮ್ಮ ನಿಮ್ಮ ಪಾಡಿಗೆ ನೀವು ಹೋಗಿ'' ಅರಚಿದಳು.

''ಹೀಗೆಲ್ಲಾ ನೀವು ಮಾತಾಡಿದ್ರೆ ಇನ್ಮುಂದೆ ನಾನು ನಿಮ್ಮ ಮನೆಗೆ ಬರೋದೇ ಇಲ್ಲ''

''ಹೋಗೋ ಹೋಗು. ಬರ್ಲೇ ಬೇಡ. ಯಾತಕ್ಕೋಸ್ಕರ ಬರ್ತೀಯ! ಮಗಳನ್ನು ಕೊಡ್ತೀನಿ. ಅಳಿಯನಾಗ್ಬೇಡ, ಮಗನಂತೆ ಇರು ಅಂತ ಕೇಳ್ಕೊಂಡಿದ್ದೆ. ಮಗಳೇ ಕೈ ಕೊಟ್ಟ ಮೇಲೆ ಇಲ್ಲಿ ನಿಂಗೇನು ಕೆಲಸ!'' ಅವಳು ಗದ್ಗದ ಧ್ವನಿಯಲ್ಲಿ ನುಡಿದಾಗ ಭುಜಂಗ ವ್ಯಥೆಗೊಂಡ. ಅತ್ತೆಯ ಸಮೀಪಕ್ಕೆ ಹೋಗಿ, ಬಲವಂತವಾಗಿ ಅವಳನ್ನು ಕೂರಿಸಿ ತಾನೂ ಅವಳ ಪಕ್ಕದಲ್ಲಿ ಕುಳಿತ. ಅತ್ತೆಯ ಕೈಗಳನ್ನು ಹಿಡಿದ.

''ಹಾಗೆನ್ಬೇಡಿ ಅತ್ತೆ. ನಾನು ಯಾವತ್ತೂ ನಿಮಗೆ ಮಗನಂತೆಯೇ ಇರ್ತೀನಿ. ನನಗೆ ನೀವು ಬೇಕು. ನಿಮಗೆ ನಾನು ಬೇಕು..'' ಅವನ ದನಿಯೂ ಕಟ್ಟಿತ್ತು.

''ಹೋಗೋ ಮುಂಡೇದೇ, ಅವಳು ನನ್ನ ಹೊಟ್ಟೆ ಉರಿಸ್ಲಿ, ನೀನು ಮುಲಾಮು ಹಚ್ಚು'' ಎನ್ನುತ್ತಾ ಅವನ ತಲೆಯನ್ನು ತನ್ನೆದೆಗೆ ಒರಗಿಸಿಕೊಂಡಳು. ಕಣ್ಣೀರು ಧಾರಾಳವಾಗಿ ಹರಿದಿತ್ತು. ಭುಜಂಗನೂ ಭಾವುಕನಾಗಿದ್ದ. ಕಣ್ಣುಗಳು ತುಂಬಿಕೊಂಡವು. ಒಳಗೆ ರೂಮಿನ ಬಾಗಿಲಲ್ಲಿ ನಿಂತಿದ್ದ ಮಂದಾಕಿನಿ, ಹೊರಬಾಗಿಲಲ್ಲಿ ನಿಂತಿದ್ದ ಪಲ್ಲವಿ ಮೂಕರಂತಾಗಿದ್ದರು. ಸ್ವಲ್ಪ ಸಮಯದ ನಂತರ ವೈದೇಹಿ ಕಣ್ಣುಗಳನ್ನೊರಸಿಕೊಂಡು, ಭುಜಂಗನನ್ನು ಸರಿಸಿದಳು.

''ನೀನು ನನ್ನ ಮಗನಂತೆ ಅಂತ ಹೇಳಿದೀಯ.. ಇನ್ನು ಮುಂದೆ ನನ್ನ ಮಗಳು ನನ್ನ ಪಾಲಿಗಿಲ್ಲ, ನೀನಾದರೂ ನಾನು ಹೇಳಿದಂತೆ ಕೇಳ್ತೀಯ ಅಂತ ಅಂದ್ಕೊಂಡಿದೀನಿ.''

''ಹೀಗೆಲ್ಲ ಮಾತಾಡಿ ಬಿಟ್ರೆ, ಸಂಬಂಧ ಹೋಗಿ ಬಿಡುವುದಿಲ್ಲ...ಸುಮ್ಮನಿರು ಅಕ್ಕಾ.''

''ನೀನು ಮಧ್ಯೆ ತಲೆ ಹಾಕ್ಬೇಡ, ಸುಮ್ನಿರು ಮಂದಾ...ಹೋಗು ಈಗಲೇ ಹೋಗಿ ಅಣ್ಣಯ್ಯನ್ನ ಅತ್ತಿಗೆಮ್ಮನ್ನ ಕರ್ಕೊಂಡು ಬಾ...ಒಂದು ಇತ್ಯರ್ಥವಾಗ್ಲೇ ಬೇಕು.''

''ಅತ್ತೇ ಈಗ ಈ ಹಗರಣವೆಲ್ಲಾ ಯಾಕೆ?..ನಿಧಾನವಾಗಿ ಮಾತನಾಡೋಣ..''

''ನೀನು ಸುಮ್ನಿರು ಭುಜೀ ನಿಂಗೆ ಅರ್ಥವಾಗುಲ್ಲ, ಹೋಗೇ ಮಂದಾ.. ಈಗ್ಲೇ ಇಬ್ರನ್ನೂ ಕರ್ಕೊಂಡು ಬಾ.'' ಮಂದಾಕಿನಿ ಬಾಗಿಲನ್ನು ದಾಟಿದಳು.

''ಅತ್ತೇ.. ನೀವು ಹೇಳಿದ್ಹಾಗೇ ಕೇಳ್ತೀನಿ ಅಂತ ಅಂದ್ನಲ್ಲಾ, ಅವರೆಲ್ಲಾ ಯಾಕೆ?..''

''ನನ್ನ ಮನಸ್ಸು ಬದಲಾಯ್ತಿ ಹೋಗೋ ಮೊದ್ಲು ಒಂದು ನಿರ್ಧಾರ ತಗೊಳ್ಳಲೇ ಬೇಕು.. ಪಲ್ಲವೀ ಬಾಮ್ಮ ಇಲ್ಲಿ..'' ಪಲ್ಲವಿಯನ್ನು ಕೈ ಬೀಸಿ ಕರೆದಳು. ಅವಳು ಹೆದರುತ್ತಾ ವೈದೇಹಿಯ

ಬಳಿಗೆ ಬಂದಳು. ಅವಳ ಕೈ ಹಿಡಿದು, ಭುಜಂಗನ ಪಕ್ಕದಲ್ಲಿ ನಿಲ್ಲಿಸಿದಳು. "ನೀನು ಈ ಹುಡುಗಿಯನ್ನು ಮದುವೆಯಾಗ್ಬೇಕು" ಪಲ್ಲವಿ ಅವಕ್ಕಾಗಿ ಅವನ ಕಡೆ ನೋಡಿದಳು. ಅವನಿಗೆ ಒಳಗೊಳಗೇ ಸಂತೋಷವಾಗಿತ್ತು. ಆದರೂ ಅದನ್ನ ಹೊರಗೆಡವಲಿಲ್ಲ

"ಅತ್ತೇ...ಈಗ ನನ್ನ ಮದುವೆಯ ಮಾತೇಕೆ?" ನಾಲಿಗೆಯ ತುದಿ ನುಡಿಯಿತು.

"ಈಗ, ನಿನ್ನ ಮದುವೆಯ ವಿಷಯವನ್ನೇ ಹೇಳ್ತಿರೋದು...ಇವಳು ನಿನಗೆ ಒಪ್ಪಿಗೆ ಅಂತ ಅಂದ್ಕೊಂಡಿದೀನಿ. ಏನಮ್ಮಾ ನೀನೇನು ಹೇಳ್ತೀಯಾ?" ಪಲ್ಲವಿಯನ್ನು ಕೇಳಿದಳು.

"ಅತ್ತೇ...ಈಗ ನಂಗೆ ಮದುವೆಗೆ ಯಾವ ಅವಸರವಿಲ್ಲ.. ಸುಮ್ಮನಿರಿ."

"ನನಗಿದೆ. ಈ ಹುಡುಗಿಗೆ ಮದುವೆಯ ವಯಸ್ಸಾಗಿದೆ. ಮಂದಾ ಗಂಡುಗಳನ್ನು ಇನ್ನು ನೋಡಿಲ್ಲ, ನೀನು ಈ ಹುಡುಗಿಯ ಜೊತೆ ಓಡಾಡಿ ಮಾತನಾಡಿದೀಯ.. ಗುಣವನ್ನು ತಿಳಿದುಕೊಂಡಿದೀಯ. ಇವಳು ನನ್ನ ಮಗಳಿಗಿಂತ ಒಳ್ಳೆಯವಳು. ಒಮ್ಮೆ ಮಂದಾ ಇವಳನ್ನು ಇಲ್ಲಿಂದ ಕರ್‍ಕೊಂಡು ಹೊರಟು ಹೋದ್ರೆ, ಇವಳು ಮತ್ತೆ ಇಲ್ಲಿಗೆ ಬರುವುದಿಲ್ಲ. ಈ ಗಳಿಗೆಯಲ್ಲಿ ನಿಮ್ಮಿಬ್ಬರ ಮದುವೆ ನಿಶ್ಚಯವಾಗಲಿ..ನೀನು ಎರಡು ಮಾತಾಡ್ದೇ ಒಪ್ಕೋ.."

"ಅತ್ತೇ.. ನೀವು ಯಾಕೆ ಅವಸರ ಪಡ್ತಿದೀರೋ ನಂಗೊತ್ತಿಲ್ಲ, ಪಲ್ಲವಿಯ ತಾಯಿ, ಅಣ್ಣ ಇಬ್ಬರೂ ಏನಂತಾರೋ..?" ಭುಜಂಗ ಅಸಹನೆಯ ಮುಖವನ್ನು ಮಾಡಿದ.

"ಏನಂತಾರೆ?...ಏನು ಆಸ್ತಿಯೇ ಅಂತಸ್ತೇ? ಏನಿದೆ ಅವರಿಗೆ..? ನಿನ್ನಂಥ ಗಂಡು, ಸುಲಭವಾಗಿ ಎಲ್ಲಿ ಸಿಗ್ತಾರೆ? ಮಾತಿಲ್ಲದೇ ಒಪ್ಕೋತಾರೆ. ನಿನಗೆ ವರೋಪಚಾರಕ್ಕೆ ಏನು ಬೇಕು ಕೇಳು, ವರದಕ್ಷಿಣೆ ಎಷ್ಟು ಬೇಕು ಕೇಳು, ನಾನು ಖರ್ಚು ಮಾಡಿ ನಿಮ್ಮಬ್ಬರಿಗೆ ಮದುವೆ ಮಾಡಿಸ್ತೀನಿ.. ಈ ಆಸ್ತಿಗೆಲ್ಲಾ ನೀನೇ ಹಕ್ಕುದಾರ.. ಮುಂದೆ ಎಲ್ಲಾ ನಿನ್ನ ಮಕ್ಕಳಿಗೇ ವೈದೇಹಿ ಒಂದೇ ಸಮನೆ ಮಾತನಾಡಿ ಆಯಾಸಗೊಂಡಳು. ಸೀರೆಯ ಸೆರಗಿನ ತುದಿಯಿಂದ ಬೆವರನ್ನು ಒರೆಸಿಕೊಂಡಳು. ಭುಜಂಗ, ಅತ್ತೆಯ ಮನಸ್ಸಿಗೆ ಆಘಾತವಾಗಿದೆ. ಏನೇನೋ ಮಾತಾಡ್ತಿದಾಳೆ, ಇನ್ನು ಅಪ್ಪಯ್ಯ ಬಂದು ಏನು ಗಲಾಟೆ ಮಾಡಿ ಬಿಡುವರೋ ಎಂದು ಆತಂಕವಾಗಿತ್ತು.

"ಪಲ್ಲವೀ...ಹೋಗಿ ಅತ್ತೆಗೆ ಒಂದ್ಲೋಟ ನೀರನ್ನು ತಂದು ಕುಡಿಸಿ" ಎಂದ.

"ಅದೇನೋ ಹೆಂಡ್ತಿಯಾಗೋಳನ್ನು ಬನ್ನಿ ಹೋಗಿ ಅಂತ, ಅತಿರೇಕವಾಗಿ ಕಾಣುತ್ತೆ. ಲಕ್ಷಣವಾಗಿ, ಎಲ್ಲ ಗಂಡಸರ ಹಾಗೆ ಏಕವಚನದಲ್ಲಿ ಮಾತನಾಡ್ಸು" ಎಂದಳು. ತುಂಟತನದಿಂದ ಅತ್ತ ನೋಡಿದ. ಪಲ್ಲವಿ ಮುಗುಳ್ನಕ್ಕು ಅವನ ಕಡೆ ನೋಡಿದಳು. ಅವನು ಕಣ್ಣು ಹೊಡೆದು ತನ್ನ ಸಂತಸವನ್ನು ವ್ಯಕ್ತ ಪಡಿಸಿದ. ಅವಳು ನೀರನ್ನು ತಂದು ಲೋಟಕ್ಕೆ ಬಗ್ಗಿಸಿ ವೈದೇಹಿಗೆ ಕುಡಿಯಲು ಕೊಟ್ಟಳು. ಅತ್ತೆಗೆ ಕಾಣದಂತೆ, ಪಲ್ಲವಿಯ ತೋಳನ್ನು ಚಿವುಟಿದ. ಪಲ್ಲವಿ ಅವನಿಂದ ಸರಿದು ನಿಂತಳು. ಮಂದಾಕಿನಿಯೊಡನೆ, ಸಾವಿತ್ರಿ ಒಬ್ಬಳೇ ಬಂದಳು. "ಅತ್ತಿಗೇ ಬಂದ್ರಾ..ಬನ್ನಿ ಅಣ್ಣಯ್ಯ ಬರ್‍ಲಿಲ್ವಾ?" ಕೇಳಿದಳು.

"ಮಲಗಿದ್ರು..ಬೇಗ ಬನ್ನಿ ಅಂತ ಹೇಳಿ ಕಳ್ಸಿದ್ಯಲ್ಲಾ.. ಹುಷಾರಾಗಿದೀಯ ತಾನೇ..? ನಿನ್ನ

ಗಂಡ ಹೇಗಿದಾರೆ..?'' ಏನಾಯ್ತೋ ಅಂತ ಹೆದರಿದೆ. ತಕ್ಷಣವೇ ಬಿಟ್ಟಿದ್ದು ಬಿಟ್ಟು ಬಂದ್ಬಿಟ್ಟೆ''

``ಇಬ್ರೂ ಕಲ್ಲು ಗುಂಡು ಇದ್ದ ಹಾಗಿದೀವಿ. ನನಗೆ ಹೃದಯವೇ ಇಲ್ಲ, ಇನ್ನು ಆಘಾತ ಹೇಗಾಗುತ್ತೆ!...ಏನಾದ್ರೂ ಆದ್ರೂ ಕೇಳೋರು ಬೇಕಲ್ಲ..ಅದಕ್ಕೇ ಕರೆಸ್ದೆ''

``ಯಾಕೇ ವೈದೇಹಿ! ಏನೇನೋ ಮಾತಾಡ್ತಿದೀಯ. ಭುಜಂಗ ಏನಾದ್ರೂ ತಪ್ಪು ಮಾಡಿದ್ನಾ?''

``ಅವನು ಅಪರಂಜಿ ಅತ್ತಿಗೇ.. ಅವನನ್ನು ಮದುವೆಯಾಗಲು, ಹೆಣ್ಣುಗಳಿಗೇನು ಕೊರತೆ? ನಾನು ಅವನಿಗೆ ಒಂದು ಹೆಣ್ಣನ್ನು ನೋಡಿಟ್ಟಿದೀನಿ. ಆದಷ್ಟು ಬೇಗ ಮದುವೆಯಾಗ್ಬೇಕು.. ಆ ವಿಷಯ ಹೇಳೋಣಾಂತಲೇ ಕರೆಸಿದ್ದು''

``ಮಾಡಿದ್ರಾಯ್ತು.. ಹೇಮ ಬರ್ಲಿ.. ನೀನು ಸುಮ್ನೆ ಆಯಾಸ ಮಾಡ್ಕೋಬೇಡ.. ಬಿ.ಪಿ. ಹೆಚ್ಚಾಗಿದೆಯೋ ಏನೋ..ಮುಖ ಧುಮು ಧುಮು ಅಂತಿದೆ.''

``ಅದೆಲ್ಲಾ ಏನೂ ಇಲ್ಲ, ಆ ಮಾತು ಬಿಡಿ. ಹೇಮಾ ಇವನಿಗೆ ತಕ್ಕವಳಲ್ಲ.'' ಎಂದು ಹೇಳುತ್ತಾ ಗಂಟಲುಬ್ಬಿ ಬಂತು. ಮಾತನ್ನು ನಿಲ್ಲಿಸಿದಳು. ಸಾವಿತ್ರಿ ಅವಳ ಮುಖವನ್ನು ತನ್ನ ಎದೆಯಲ್ಲಿ ಹುದುಗಿಸಿಕೊಂಡಳು. ವೈದೇಹಿ ಬಿಕ್ಕಿ ಬಿಕ್ಕಿ ಅತ್ತು ಸಮಾಧಾನಗೊಂಡು, ಮುಖವನ್ನು ಒರೆಸಿಕೊಳ್ಳುತ್ತಾ ನುಡಿದಳು. ``ಅತ್ತಿಗೇ, ಹೇಮಾ ನಮಗೆಲ್ಲಾ ದ್ರೋಹ ಮಾಡಿಬಿಟ್ಳು.. ಭುಜಂಗಂಗೆ ಅವಮಾನ ಮಾಡಿಬಿಟ್ಳು.. ನಾನೇನ್ಮಾಡ್ಲೀ...ನಾನೇನ್ಮಾಡ್ಲೀ..? ತಲೆ ಚಚ್ಚಿಕೊಂಡಳು.

``ಸಮಾಧಾನ ಮಾಡ್ಕೋ ವೈದೇಹಿ.. ಎಲ್ರೂ ಕೂತು ಏನು ವಿಷಯ ಅಂತ ನಿಧಾನವಾಗಿ ಮಾತನಾಡಿದ್ರಾಯ್ತು.. ಅವಳು ತಮಾಷೆ ಮಾಡಿರಬಹುದು..ನಿಂಗ್ಯಾಕೆ ದ್ರೋಹ ಮಾಡ್ತಾಳೆ?'' ನೀನು ಏನೇನೋ ಅಂದ್ಕೋಬೇಡ.

``ಇಲ್ಲ ಅತ್ಗೇ.. ಇದು ತಮಾಷೆ ಮಾತಲ್ಲ, ತಮಾಷೆ ಮಾತಾಗಿದ್ರೆ, ನನಗೆ ಇದುವರೆಗೂ ತಿಳೀದೇ ಇರ್ತಿತ್ತಾ?.. ಭುಜಂಗ ಮುಚ್ಚಿಟ್ಟಿದಾನೆ ಅಂತಂದ್ರೆ ಖಂಡಿತಾ ತಮಾಷೆ ಅಲ್ಲ, ಅವಳು ತಪ್ಪು ಮಾಡಿದಾಳೆ. ಅವಳಿಗೆ ಕ್ಷಮೆಯೇ ಇಲ್ಲ, ಅವಳು ನನ್ನ ಕಣ್ಮುಂದೆ ಬರೋದೇ ಬೇಡ.''

``ಹೀಗೆಲ್ಲಾ ಮಾತಾಡ್ಬೇಡ ನೀನು. ಮಕ್ಕಳು ತಪ್ಪು ಮಾಡಿದಾಗ, ವಿಚಾರಿಸದೇ ಸುಮ್ಮನಿರೋಕೆ ಆಗುತ್ತಾ? ಏನೂಂತ ಗೊತ್ತಾಗೇ ಆಗುತ್ತೆ...ವಿಚಾರಿಸಿದ್ರಾಯ್ತು.''

``ಈಗ ಗೊತ್ತಾಯ್ತಲ್ಲ, ಇಷ್ಟೇ ವಿಷಯ. ತಲೆ ಎತ್ತಿ ತಿರುಗಾಡದಂತೆ ಮಾಡಿಬಿಟ್ಳು, ಊರಿಗೆಲ್ಲಾ ಇವರಿಬ್ರೇ ಗಂಡ ಹೆಂಡತಿ ಅಂತ ಹೇಳಿದ್ದೆವಲ್ಲ ಅತ್ತಿಗೇ....ಈಗೇನಾಯ್ತು ನೋಡಿ.''

``ಒಂದು ವೇಳೆ ಈ ವಿಷಯ ನಿಜವೇ ಆಗಿದ್ರೂ, ಏನೂ ಪ್ರಮಾದವಾಗಿಲ್ಲ, ತಲೆ ಎತ್ತಿ ತಿರುಗಾಡುಕ್ಕೆ ಆಗದಂಥದ್ದು ಏನಾಗಿದೆ? ಭುಜಿ ಕೆಟ್ಟೋನು ಅಂತ ಜನ ಅಂದ್ಕೊಂಡ್ರೂ ಪರವಾಗಿಲ್ಲ, ಇವನೇ ಏನೋ ಆಡಿರಬಹುದು. ಇವನಲ್ಲೇ ಏನೋ ದೋಷ ಇರಬಹುದು. ಬಿಟ್ಟು ಬಿಡು.''

"ಇಲ್ಲ, ಅತ್ಗೇ ಭುಜೀದೂ ಯಾವ ತಪ್ಪೂ ಕಾಣ್ತಿಲ್ಲ ನಂಗೆ."

"ಇವನ ಅತಿ ಆಸೆ ತಪ್ಪಲ್ವಾ! ಇವನ ವಿದ್ಯೆಗೆ, ಶ್ರೀಮಂತಿಕೆಗೆ ಡಾಕ್ಟರಾದವಳು ಬೇಕಾ? ನಂಗೂ ಅಷ್ಟೇ.. ನಂಗೂ ಸಹಾಯಕಳಾಗಿ, ಮನೆ ಕೆಲಸ ಮಾಡುವ ಸೊಸೆ ಬೇಕು. ಅದು ಬಿಟ್ಟು ಹಗಲು ಅಂತಿಲ್ಲ ರಾತ್ರಿ ಅಂತಿಲ್ಲ ಕ್ಲಿನಿಕ್ಕು ಪೇಶೆಂಟ್ಸು ಇಂಜೆಕ್ಷನ್ನು ಅಂತ ರೋಗಿಗಳ ಕೈ ಹಿಡಿದು, ಚೀಟಿ ಬರೆದು ಕೊಟ್ಟು ಹಣ ಸಂಪಾದಿಸುವಂಥ ಸೊಸೆಯಿಂದ ನನಗೇನು ಪ್ರಯೋಜನ? ಭುಜಂಗ ತಾಯಿಯನ್ನೇ ಬೆರಗಾಗಿ ನೋಡಿದ.." ಈ ಅಮ್ಮ ನನ್ನನ್ನು ಮೆಚ್ಚಿಸಲು ಇಷ್ಟೆಲ್ಲಾ ಮಾತನ್ನಾಡುತ್ತಿರುವಳೇ? ಅಥವಾ, ಅವಳ ಮನಸ್ನಲ್ಲೂ ಹೇಮಳ ಬಗ್ಗೆ ಇದೇ ಅಭಿಪ್ರಾಯವಿರಬಹುದೇ?..ತಲೆದೂಗಿದ.

"ಪರವಾಗಿಲ್ಲ, ತಾಯಿ ಮಗ ಇಬ್ರೂ ಸೇರಿ ಚೆನ್ನಾಗಿ ನಾಟಕ ಆಡ್ತಿದೀರಿ. ಈ ನಾಟಕಕ್ಕೆ ಆದಷ್ಟು ಬೇಗ ಪರದೆ ಎಳೆಯಲೇ ಬೇಕು. ಮಂದಾಕಿನಿಯೂ ಇಲ್ಲೇ ಇದಾಳೆ. ಚಿದಾನಂದನೂ ಬರ್ತಾನೆ ನಾನೇ ಮುಂದೆ ನಿಂತು ಇವರಿಬ್ಬರ ಮದುವೇನ ನೆರವೇರಿಸ್ತೀನಿ. ನಿಮಗೆ ಪಲ್ಲವಿ ಒಪ್ಗೆ ಅಂತ ಒಂದ್ಮಾತು ಹೇಳ್ಬಿಡಿ ಸಾಕು." ಅತ್ತಿಗೆಯ ಕೈ ಹಿಡಿದಳು.

"ಎಂಥಾ ಇಕ್ಕಟ್ಟಿಗೆ ಸಿಕ್ಕಿಸ್ತೀಯಲ್ಲೇ ವೈದೇಹಿ. ಯೋಚಿಸ್ಬೇಡ್ವೇನೆ, ನಿಮ್ಮಣ್ಣನ್ನು ಕೇಳ್ಬೇಕು. ನಾಳೆ ಮಾತನಾಡೋಣ...ಈಗ ಸುಮ್ಮನಾಗು."

"ನಾಳೆ? ನಾಳೆ ಎಂದ ಕೆಲಸ ಹಾಳು. ಒಂದು ರಾತ್ರೀಲಿ ಏನು ಬೇಕಾದ್ರೂ ಬದಲಾಗುತ್ತೆ. 'ಶುಭಸ್ಯ ಶೀಘ್ರಂ' ಅಂತ ಹಿರಿಯೋರು ಹೇಳ್ತಾರೆ. ಪಾಯಸದ ಅಡಿಗೆ ಮಾಡಿ ಬಡಿಸ್ತೀನಿ. ಅಣ್ಣನ್ನೂ ಇಲ್ಲಿಗೇ ಊಟಕ್ಕೆ ಕರೀತೀನಿ."

"ಸರಿ, ದೈವ ನಿಯಾಮಕ ಏನಿದೆಯೋ ಹಾಗೆ ಆಗುತ್ತೆ. ಆದರೆ ನೀನು ಅವರ ಎದುರಿಗೆ ಹೇಮನ್ನ ದೂಷಿಸಬಾರದು..ಅವರಿಗೆ ತಟ್ಟುತ್ತೆ."

"ಯಾಕತ್ತಿಗೆ, ಇನ್ನೂ ಮುಚ್ಚು ಮರೆ?...ಭುಜಿ ನಿಮಗೆ ಎಲ್ಲವನ್ನು ಹೇಳಿದಾನೆ ಅಲ್ವಾ! ಅವಳ ಪರ ವಹಿಸಿ ಯಾಕೆ ಮಾತಾಡ್ತೀರಿ..? ಅವಳು ತಪ್ಪು ಮಾಡಿದಾಳೆ, ಒಪ್ಕೊಳ್ಳಿ."

"ಅವಳು ನಮ್ಮ ಕಣ್ಣು ಮುಂದೆ ಹುಟ್ಟಿ ಬೆಳೆದು ದೊಡ್ಡವಳಾದ ಹುಡುಗಿ. ಅವಳೂ ನನಗೆ ಮಗಳಿದ್ದಹಾಗೆ. ನಮ್ಮ ನಮ್ಮ ಮಕ್ಕಳನ್ನು ನಾವು ಒಪ್ಪ ಹಾಕಿಕೊಳ್ಳಬೇಕು. ದೂಷಿಸಬಾರದು. ಆಗಲೇ ನಮಗೆ ಒಂದು ಬೆಲೆ. ನಮ್ಮ ಮಕ್ಕಳನ್ನು ನಾವೇ ದೂರ ಮಾಡಿದರೆ, ಅವರಿಗೆ ಬೇರೆ ಯಾರಿದಾರೆ? ಈಗ ನಿನಗೆ ಅವಳ ಮೇಲೆ ಕೋಪ.. ನಾಲ್ಕು ದಿನ ಕಳೀಲಿ ತಂತಾನೇ ಎಲ್ಲವೂ ಸರಿ ಹೋಗುತ್ತೆ. ಇವರಿಗೂ ಅವಳ ಮೇಲೆ ಅಕ್ಕರೆ."

"ಎಲ್ರೂ ಯಾಕೆ ಇಷ್ಟು ಜೋರಾಗಿ ಮಾತ್ನಾಡ್ತಿದೀರಿ? ಬೀದಿಗೆ ಕೇಳುವ ಹಾಗೇ" ಎನ್ನುತ್ತಾ ಕೃಷ್ಣಪ್ಪ ಒಳಕ್ಕೆ ಕಾಲಿಟ್ಟಾಗ, ಎಲ್ಲರೂ ಅತ್ತ ತಿರುಗಿದರು. "ನೀನೂ ಮನೇಲಿಲ್ಲ, ಯಾರೋ ಬಂದು ಹೇಳಿದ್ರು ಇಲ್ಲಿ ಏನೋ ಗಲಾಟೆ ನಡೀತಿದೆ. ಯಾರೋ ಅಳ್ತಿದ್ರು ಅಂತ. ನಿನ್ನ ತಮ್ಮ ಹುಶಾರಾಗಿದಾನೆ ತಾನೇ?" ವೈದೇಹಿ ಸರಿಯಾಗಿ ಕುಳಿತಳು.

"ನೀವು ಬಂದದ್ದು ಒಳ್ಳೇದೇ ಆಯ್ತಣ್ಣ ನಾನೇ ಬಂದು ಕರೆಯೋಣ ಅಂತಿದ್ದೆ ಅದೇನಾಯ್ತು

ಅಂತಂದ್ರೆ.."

"ಏನಾಯ್ತು? ಭುಜಿ ಏನಾದ್ರೂ ತಪ್ಪು ಮಾಡಿದ್ನಾ?" ಅವನ ಕಡೆ ನೋಟ ಹೊರಳಿತು.

"ಅದೇನು? ಎಲ್ರಿಗೂ ಅವನ್ಮೇಲೆ ಗುಮಾನಿ?.. ಅವಳಿಗೆ ಅಹಂಕಾರ ಬಂದ್ಬಿಟ್ಟಿದೆ. ನಿಮ್ಮ ಮುದ್ದು ಹೆಚ್ಚಾಯ್ತು.. ಡಾಕ್ಟರಾಗ್ತಿದೀನಿ ಅಂತ ಕೊಬ್ಬು.."

"ಹೇಮನ ಬಗ್ಗೆ ಹೇಳ್ತಿದೀಯಾ! ಅದು ಸಹಜವೇ. ಡಾಕ್ಟಾರಾಗ್ತಾಳೆ, ಹೆಸರು ಮಾಡ್ತಾಳೇ. ಅದು ಸರಿಯೇ. ನಾವುಗಳೂ ಹೆಮ್ಮೆ ಪಡುವ ವಿಷಯ ಅಲ್ವಾ ವೈದೇಹಿ?"

"ಇಲ್ಲ ಅಣ್ಣ ನಿಮಗೆ ಏನೂ ತಿಳಿಯದು. ಅವಳು ನಮ್ಮನ್ನೆಲ್ಲಾ ದೂರ ಮಾಡ್ತಿದಾಳೆ. ನಮ್ಮ ಮಾತಿಗೆ ಗೌರವ ಕೊಡ್ತಿಲ್ಲ, ನಿಮ್ಮ ಮಗನನ್ನು ತಿರಸ್ಕರಿಸಿದ್ದಾಳೆ. ನಿಮ್ಮ ಮನೆಗೆ ಸೊಸೆಯಾಗಿ ಬರುವುದನ್ನು ಧಿಕ್ಕರಿಸಿದ್ದಾಳೆ. ಇದು ಹೆಮ್ಮೆ ಪಡುವ ವಿಷಯಾನಾ?.."

"ಇದೂ ಸಹಜವೇ...ನೀನೂ ಯೋಚಿಸು ವೈದೇಹಿ. ಭುಜಂಗ ಯಾವ ದೊಡ್ಡ ಮನುಷ್ಯ ಅಂತ ಇವನನ್ನು ಅವಳು ವರಿಸ್ತಾಳೆ.. ಅವಳಿಗೆ ಈಗ ತಿಳುವಳಿಕೆ ಬಂದಿದೆ. ಅವಳ ಮನಸ್ಸಿಗೆ ಅನ್ನಸಿದ್ದನ್ನ ಹೇಳಿದಾಳೆ.. ಅದೇನು ದೊಡ್ಡ ವಿಷಯ?"

"ನೀವುಗಳೆಲ್ಲ ಯಾಕೆ ಹೀಗೆ ಮಾತಾಡ್ತಿದೀರೋ ನಂಗೆ ಅರ್ಥವಾಗ್ತಿಲ್ಲ.. ಹಾಗಾದ್ರೆ ನಿಮಗ್ಯಾರಿಗೂ ನಮ್ಮ ಸಂಬಂಧ ಬೇಡ್ವಾ?..ಈ ದಿನಕ್ಕಾಗಿ ಎದುರು ನೋಡ್ತಿದ್ರಾ?" ಬಿರುಸಾಗಿ ಕೇಳಿದಳು.

"ಇಲ್ಲ ವೈದೇಹಿ. ನಮ್ಮ ನಿಮ್ಮ ಸಂಬಂಧಕ್ಕೆ ಯಾವ ರೀತಿಯಿಂದಲೂ ಅಡ್ಡಿ ಬರುಲ್ಲ, ಈಗ ಹೇಗೆ ಪ್ರೀತಿ ವಿಶ್ವಾಸದಿಂದ ಇದೀವೋ ಹಾಗೇ ಮುಂದುವರೆಯುತ್ತೆ. ಹೇಮಾ ನಮ್ಮ ಮನೆಗೆ ಸೊಸೆಯಾಗಿ ಬರದಿದ್ರೇನಾಯ್ತು? ಅವಳು ನಮ್ಮ ಮನೆಯ ಮಗಳು. ಅವಳಿಗೆ ತಕ್ಕನಾದ ವರನನ್ನು ಹುಡುಕಿ ಮದುವೆ ಮಾಡೋಣ.. ಅವಳ ಇಷ್ಟದಂತೇ ಆಗಲಿ."

"ಇದ್ದಕ್ಕಿದ್ದ ಹಾಗೆ ನಿಮಗೆಲ್ಲಾ ಏನಾಯ್ತು! ಎಲ್ರೂ ಒಂದೇ ಥರ ಮಾತಾಡ್ತಿದೀರಲ್ಲ.. ಅಂಥಾ ಕಾರಣ ಏನು?... ನನಗೆ ಒಬ್ಬರೂ ಸುಳಿವನ್ನೇ ಕೊಡ್ಲಿಲ್ಲ

"ಕಾರಣ ಇದೇಯ ಅಂತ ಹೇಗೆ ಹೇಳೋದು?.. ಪರಸ್ಪರ ಇವರಿಬ್ಬರಲ್ಲಿ ಭಿನ್ನಾಭಿಪ್ರಾಯ ಬಂದಿರುಕ್ಕೆ ಅವರವರ ರಾಶಿಗ್ರಹಗಳೇ ಕಾರಣ. ಇಬ್ಬರ ಜಾತಕಗಳಲ್ಲೂ ಹೊಂದಾಣಿಕೆಯೂ ಇಲ್ಲ, ಮುಖ್ಯವಾಗಿ ಗ್ರಹ ಮೈತ್ರಿ ಕೂಟವೇ ಆಗಿ ಬರುಲ್ಲ, ಬಲವಂತವಾಗಿ ಮದುವೆ ಮಾಡಿದ್ದರೂ ಸಂಬಂಧ ಮುರಿದು ಬೀಳುವ ಸಾಧ್ಯತೆ ಇದೆ ಅಂತ ಶಾಸ್ತ್ರಿಗಳು ಹೇಳಿದ್ದರು. ಹೇಗೆ ಹೇಳೋದು ಅಂತ ಯೋಚಿಸ್ತಿದ್ದೆ, ತಾನಾಗಿಯೇ ಸಮಯ ಒದಗಿತು."

"ಸೋದರಿಕೆ ಸಂಬಂಧಗಳಲ್ಲಿ, ನಕ್ಷತ್ರ, ರಾಶಿ ಯಾವುದೇ ಕೂಟ ಯಾವುದನ್ನು ನೋಡಬೇಕಾಗಿಲ್ಲ ಅಂತ ನೀವುಗಳೇ ಒಪ್ಪಿಕೊಂಡಿದ್ರಲ್ಲ, ಈಗ ಇದೇನು ಹೊಸದಾಗಿ..? ನೀವೆಲ್ಲಾ ಒಂದಾಗಿ ಹೇಮಳ ಅಹಂಕಾರವನ್ನು ಮುಚ್ಚಿಡ್ತಿದೀರಿ...ಯಾಕೆ ಅಂತ..?" ಎಲ್ಲರ ಕಡೆ ನೋಡಿದಳು.

"ಎಷ್ಟು ಆಡಿದರೂ ಅಷ್ಟೇ ವೈದೇಹಿ. ಈ ಸಂಬಂಧ ಆಗಿ ಬರುವುದಿಲ್ಲ. ಈ ಬಗ್ಗೆ ಸುಮ್ಮನಿರುವುದೇ ಒಳ್ಳೆಯದು. ಸಾತು ಎಷ್ಟು ಚರ್ಚೆ ಮಾಡಿದರೂ ಇಷ್ಟೇ. ನಡೀ ಮನೆಗೆ ಹೋಗೋಣ. ಭುಜಂಗ ನಿನ್ನ ಹತ್ರ ಸ್ವಲ್ಪ ಮುಖ್ಯವಾದ ವಿಷಯವನ್ನು ಮಾತಾಡ್ಬೇಕು ನನ್ನ ಜೊತೇಲಿ ಬಾ.." ಭುಜಂಗ ತನ್ನ ತಂದೆಯೊಡನೆ ಹೊರಟುಹೋದ.

"ಅತ್ತಿಗೇ, ನನ್ನ ಮಾತಿಗೆ ಬೆಲೆಯೇ ಇಲ್ವಾ?.." ಎಲ್ಲರೂ ಹೊರಟು ಬಿಟ್ರಲ್ಲಾ.

"ವೈದೇಹಿ, ಏನಾಗಿದೆ ನಿನಗೆ?..ಸರಿಯಾಗಿ ಯೋಚಿಸಿ ಮಾತಾಡು.. ಹೇಮಾ ಭುಜಂಗನ್ನ ತಿರಸ್ಕರಿಸಿರೋದು ನಿಜ. ಹಾಗೇ ಇಬ್ಬರಲ್ಲೂ ಪರಸ್ಪರ ಅಭಿಪ್ರಾಯಗಳು ಬದಲಾಗಿವೆ.. ನೀನು ಕೊರಗ್ಬೇಡ. ಭುಜಂಗ ನಿಮ್ಮಿಂದ ದೂರ ಆಗುಲ್ಲ. ಮುಂಚಿನಂತೆಯೇ ಬಂದೂ ಹೋಗಿ ಮಾಡ್ತಾನೆ. ನಿಶ್ಚಿಂತೆಯಿಂದ ಇರು.." ಸಾವಿತ್ರಿಯೂ ಬಾಗಿಲನ್ನು ದಾಟಿದಳು.

"ನಿಶ್ಚಿಂತೆಯಿಂದ ಹೇಗೆ ಇರೋಕೆ ಆಗುತ್ತೆ ಅತ್ಗೇ.. ಮಂದಾಕಿನಿ ಈ ವಿಷಯವನ್ನು ತಿಳಿಸ್ದಾಗ್ಲಿಂದ ಎದೆ ಕಲಕಿ ಹೋಗಿದೆ. ವಿವೇಚನೆಯೇ ಹೋಗಿ ಬಿಟ್ಟಿದೆ. ನಿಮ್ಮನ್ನೆಲ್ಲ ಕರೆಸಿ ಮಾತನಾಡಿದರೂ ಏನೂ ಬಗೆಹರಿಯಲಿಲ್ಲವಲ್ಲ." ಕುಳಿತಲ್ಲೇ ಚಡಪಡಿಸಿದಳು.

* * *

"ಭುಜೀ, ಇವತ್ತಿನ ಈ ಮಾತುಕತೆಗಳಿಗೆ ನೀನೇ ಕಾರಣ. ಮಂದಾಕಿನಿಯ ಮಗಳು ಇಲ್ಲಿಗೆ ಬಂದಾಗಿನಿಂದ ನಿನ್ನ ಮನಸ್ಸು ಅವಳತ್ತ ತಿರುಗಿದೆ. ಅವತ್ತು ಕರೆದು ಕೇಳಿದಾಗ, ಏನೂ ಇಲ್ಲ ಎನ್ನುವಂತೆ ಮಾತಾಡಿದೆ. ವಯಸ್ಸಿಗೆ ಬಂದು ಹುಡುಗ. ಇದು ವಯೋಧರ್ಮ ಅಂತ ಅಂದ್ಕೊಂಡು ಕಂಡರೂ ಕಾಣದಂತೆ ಸುಮ್ಮನಿದ್ದೆ. ಈಗ ನೋಡು ಏನಾಯ್ತು! ವೈದೇಹಿಗೆ ಮಾತನಾಡುಕ್ಕೆ ಅವಕಾಶ ಮಾಡಿಕೊಟ್ಟಂತಾಯಿತು.. ಛೇ..."

"ನೀವು ತಪ್ಪು ತಿಳ್ಕೊಂಡಿದೀರಿ ಅಪ್ಪಯ್ಯ.. ಹಾಗೇನಿಲ್ಲ." ನೋಟವನ್ನು ತಪ್ಪಿಸಿದ.

"ಹಾಗಾದ್ರೆ, ನೀನು ಆ ಪಲ್ಲವಿ ಅನ್ನೋ ಹುಡುಗಿಯ ಜೊತೆ ಸುತ್ತಾಡಿದ್ದು ಸುಳ್ಳೆ? ಅದನ್ನ ಹೇಮ ಕಂಡಿದಾಳೆ. ಅವಳ ಮನಸ್ಸು ಬದಲಾಗಲು ನೀನೇ ಕಾರಣ."

"ಇಲ್ಲ ಅಪ್ಪಯ್ಯ.. ಹೇಮಾ ತುಂಬಾ ಹಿಂದೆಯೇ ಈ ವಿಷಯವನ್ನು ನನ್ನ ಹತ್ರ ಹೇಳಿದ್ಲು. ನಾನು ಅಮ್ಮನ ಹತ್ರ ಹೇಳಿದ್ದೆ..."

"ಹೇಮಾ ನಿರಾಕರಿಸಿದ್ಲು ಅಂತ ನೀನು ಈ ಹುಡುಗಿಯ ಜೊತೆ ಸುತ್ತಾಡಿದೆ.. ಈಗ ವೈದೇಹಿ, ಹೇಮಳ ಮೇಲಿನ ಕೋಪಕ್ಕೇ ಏನೇನೋ ಮಾತಾಡ್ತಾಳೆ. ಹಾಗಾದ್ರೆ ಯಾರದ್ದು ತಪ್ಪು?"

"ಯಾವುದೂ ಸುಳ್ಳಲ್ಲ ಅಪ್ಪಯ್ಯ.. ಹೇಮಂಗೆ ನಾನು ಬೇಡವಾದ ಮೇಲೆ, ನನಗೂ ಅವಳು ಬೇಡ. ನಾನು ಅವಳನ್ನು ಪ್ರೀತಿಸುಲ್ಲ.. ಅಷ್ಟೇ.."

"ಸರಿ.. ಈ ಹುಡುಗೀನ ಪ್ರೀತಿಸ್ತೀಯಾ?..ಅಥವಾ..."

"ನಿಮಗೆಲ್ಲಾ ಒಪ್ಪಿಗೆ ಇದ್ದರೆ, ನಾನು ಈ ಹುಡುಗೀನ ಮದುವೆಯಾಗ್ತೀನಿ.."

"ನನ್ನ ಮಗನೇ.. ಅಂತೂ ನಿಜ ಬಾಯಿಂದ ಹೊರಬಿತ್ತು. ನಿಮ್ಮಮ್ಮ ಅವತ್ತೇ ಹೇಳಿದ್ಲು. ನಾನು ಹೇಮಳ ಹತ್ರ ಫೋನಿನಲ್ಲಿ ಮಾತಾಡಿದೆ. ಚೆನ್ನಾಗಿ ಬೈದೆ.. ಅವಳು ಬೇರೆ ಯಾರೋ ಒಬ್ಬ ಹುಡುಗನ್ನ ಇಷ್ಟ ಪಟ್ಟಿದಾಳಂತೆ. ನಾಚಿಕೆ ಇಲ್ಲದೇ ನನ್ನ ಬಳಿ ಹೇಳಿದಳು. ಈ ನಿಮ್ಮ ಅತ್ತೆ... ಒಂದು ಪೆದ್ದು. ಅದಕ್ಕೇ ಏನೂ ಗೊತ್ತಿಲ್ಲ. ತಲೆ ಕೆಟ್ಟವಳ ಥರ ಮಾತಾಡ್ತಾಳೆ. ಅವಳಿಗೆ

ಮಗಳ ಮೇಲೆ ಕೋಪ. ಕೋಪದಿಂದ ಮನೆಗೆ ಸೇರಿಸದೇ ಇದ್ದರೂ, ಆಶ್ಚರ್ಯ ಪಡ್ಬೇಕಾಗಿಲ್ಲ. ಅದಕ್ಕೇ ಎಲ್ಲರ ಎದುರಿಗೆ ನಿನ್ನನ್ನ ಕೆಟ್ಟವನನ್ನಾಗಿ ಮಾತಾಡಿದೆವು. ಬೇಜಾರು ಮಾಡ್ಕೋ ಬೇಡ್ವೋ...ನೀನು ತಪ್ಪು ಮಾಡೋನಲ್ಲ ಅಂಥ ನಂಗೆ ಗೊತ್ತು.."

"ಆದರೆ ಇಷ್ಟೆಲ್ಲಾ ನಾಟಕ ಆಡುವ ಅಗತ್ಯವಿತ್ತಾ ಅಪ್ಪಯ್ಯ..."

"ಇರಲಿಲ್ಲ, ಆದರೆ ನೇರವಾಗಿ ಹೇಳೋದೂ ಸಾಧ್ಯವಿರಲಿಲ್ಲ. ಆ ಗಂಡ ಹೆಂಡತಿಗೆ ಹೇಮಾ ಒಬ್ಬಳೇ ಮಗಳು. ನಿನ್ನ ಮಾವಂಗೆ ಉಬ್ಬಸದ ರೋಗ.. ಮಗಳನ್ನು ದೂರ ಮಾಡಿ ಹೇಗಿರ್ತಾರೆ?.. ಅಮ್ಮಂಗೆ ಈಗ್ಲೇ ಹೇಳ್ಬೇಡಿ ಅಂತ ಹೇಮ ಕೇಳ್ಕೊಂಡಿದ್ಲು.."

"ಆದರೆ, ಅತ್ತೆಗೆ ಈ ವಿಷಯಾನ ತಿಳಿಸ್ಲೇ ಬೇಕು ಅಲ್ವಾ!.. ಎಷ್ಟು ದಿನ ಅಂತ ಮುಚ್ಚಿಡೋಕೆ ಸಾಧ್ಯ?.."

"ನಿನ್ನ ಪಲ್ಲವಿಯ ಮದುವೆ ನಿಶ್ಚಯವಾಗಲಿ. ಮದುವೆಗೆ ಹೇಮಾ ಬರ್ತಾಳೆ. ಆಗ ತಾಯಿ ಮಗಳು ಮುಖಾಮುಖಿಯಾಗಿ ಮಾತಾಡಲಿ.." ಚಿದಾನಂದನಿಗೆ ಬರುವಂತೆ ಹೇಳು. ಬೇಗ ಮದುವೆ ಶಾಸ್ತ್ರವನ್ನು ಮುಗಿಸಿಬಿಡೋಣ.. ಏನಂತೀಯಾ?" ಹುಬ್ಬುಗಳನ್ನು ಹಾರಿಸಿ ನಕ್ಕರು.

"ನಂಗೆ ಮದುವೆಗೆ ಏನೂ ಅವಸರವಿಲ್ಲ ಅಪ್ಪಯ್ಯ.." ಕೈ ಕೈ ಉಜ್ಜಿಕೊಂಡ.

"ಕೈ ಕೈ ಹಿಡಿದು ತಿರುಗಾಡ್ತೀರಿ. ತೊರೆಯ ಬಳಿ ಕುಳಿತು ಸಲ್ಲಾಪ ಮಾಡ್ತೀರಿ. ಇದನ್ನೆಲ್ಲ ಕಂಡವರು ಇದಾರೆ. ನನ್ನ ತನಕ ದೂರೂ ಬಂದಿದೆ. ಇನ್ನು ಈ ಹುಡುಗಾಟ ಸಾಕು. ಮನೆಗೆ ಮಡದಿಯಾಗಿ ಬರಲಿ. ಸರಸ ಸಲ್ಲಾಪವೆಲ್ಲಾ ಮನೇಲೇ ನಡೀಲಿ..ಆಂ.."

"ಅಪ್ಪಯ್ಯ ಏನೇನೋ ಮಾತನಾಡ್ತಿದೀರಿ ನೀವು" ಭುಜಂಗ ನಾಚಿದ.

"ಸರಿಯಾಗೇ ಮಾತನಾಡ್ತಿದೀನಿ. ನಾನೂ, ನಿನ್ನ ಅಮ್ಮನನ್ನು ಮೆಚ್ಚಿಸಿದೀನಿ. ಆ ಕಾಲದಲ್ಲಿ ಹೊರಗೆ ತಿರುಗುವ ಧೈರ್ಯವಿರಲಿಲ್ಲ, ಈಗ ನಿನಗೆ ಭಯವಿಲ್ಲ, ಎಲ್ಲಾ ಮುಂದುವರೆಯಲಿ"

"ಅತ್ತೇ ಹೇಳಿದ್ದಕ್ಕೇ ನಾನು ಕರೆದುಕೊಂಡು ಹೋದದ್ದು.. ಇಲ್ದಿದ್ರೆ ನಂಗ್ಯಾಕೆ?"

"ಅವಳಿಗಾದ್ರೂ ತಿಳುವಳಿಕೆ ಬೇಡ್ವಾ! ಹೋಗಲಿ ಬಿಡು ಆದದ್ದು ಒಳ್ಳೇದಕ್ಕೇ. ಆ ಹುಡುಗೀನ ಮನೆಗೆ ಕರ್ಕೊಂಡು ಬಾ.. ನಾನೂ ಸರಿಯಾಗಿ ನೋಡ್ತೀನಿ. ಮಾತಾಡ್ತೀನಿ.." ತಂದೆ ಮಗನ ಭುಜದ ಮೇಲೆ ಕೈ ಇಟ್ಟು ಹಾಸ್ಯವಾಗಿ ಮಾತಾಡಿದರು. ಭುಜಂಗ ಕಳ್ಳ ನಗೆಯನ್ನು ನಕ್ಕ.

"ಹಾಗಾದ್ರೆ, ನಿಜಕ್ಕೂ ನಿಮಗೇನೂ ಬೇಸರವೇನಿಲ್ಲವೇನಪ್ಪಯ್ಯಾ?"

"ಬೇಸರ, ಸ್ವಲ್ಪ ಮಟ್ಟಿಗೆ ಇದೆ. ಆದರೆ ಹಾಗಂತ, ಇಬ್ಬರಿಗೂ ಬಲವಂತ ಮಾಡುಕ್ಕೆ ಆಗುಲ್ಲ. ಹೇಮಳ ಹತ್ರ ಮಾತಾಡಿದ್ಮೇಲೆ ಇನ್ನೇನು ಉಳಿದಿದೆ! ನಿಂಗೆ ಬೇಸರವಿಲ್ಲದಿದ್ರೆ ಸರಿ. ಅದಕ್ಕೋಸ್ಕರ, ಇಲ್ಲಿ ನಾವುಗಳು ಕಿತ್ತಾಡಿಕೊಂಡ್ರೆ, ಸಮಾಧಾನ ಏನು ಸಿಗುತ್ತೆ?.. ನೀನು ನನ್ನ ಹತ್ರಾನೇ ಹೇಳಬಹುದಾಗಿತ್ತು. ಯಾಕೆ ಹೇಳ್ಲಿಲ್ಲ?."

"ನೀವು ಕೋಪ ಮಾಡ್ಕೊಂಡು ಕೂಗಾಡ್ತೀರೇನೋ ಅಂತ ಅನ್ನಿಸ್ತು.. ಅಷ್ಟೇ ಅಪ್ಪಯ್ಯ..."

"ಅಷ್ಟೇ ತಾನೇ? ಪಲ್ಲವಿ ಹೇಗೆ? ಅವಳೂ ಪಟ್ಟಣದಲ್ಲಿ ಬೆಳೆದೋಳು. ಈ ಊರು ಇಷ್ಟವಾಗದೇ ವಾಪಸ್ಸು ಬೆಂಗಳೂರಿಗೇ ಹೋಗ್ತೀನಿ ಅಂತ ಹಠ ಮಾಡಿದ್ರೆ!"

"ಇಲ್ಲ ಅಪ್ಪಯ್ಯಾ, ಅವಳಿಗೆ ಈಗ ಅಲ್ಲಿ ಅವಳವರು ಅಂತ ಯಾರೂ ಇಲ್ಲ. ಇವಳನ್ನು ಸಾಕಿ ಬೆಳೆಸಿದ ತಂದೆ ತಾಯಿ ಇಲ್ಲ, ಅಣ್ಣನಂತೆ ಇದ್ದ ಅವರ ಮಗನಿಗೆ ಇವಳು ಬೇಕಿಲ್ಲ. ಇವಳಿಗೆ, ಮಂದಾಕಿನಿ ಅತ್ತೆ ಹಾಗೂ ಚಿದಾನಂದನ ಬಗ್ಗೆ ವ್ಯಾಮೋಹ ಇಲ್ಲ"

"ಅದ್ಹೇಗೆ ಬರುತ್ತೇ ಹೇಳು..? ಅದು ಸಹಜವೇ.. ನೀನು ಚೆನ್ನಾಗಿ ನೋಡ್ಕೋಬೇಕು. ಆ ಹುಡುಗಿಗೆ ಯಾವ ಚಿಂತೆಯೂ ಇರಬಾರದು.. ಅಷ್ಟು ಮುಚ್ಚಟೆ ಮಾಡ್ಬೇಕು."

"ಯಾರ ಮಾತನ್ನಾಡ್ತಿದೀಯೋ ಕಿಟ್ಟಾ?.. ಅದೇನು ವಿಷಯ ನಂಗೂ ಹೇಳು.." ಮಲಗಿದ್ದ ಅಜ್ಜಿ ಎದ್ದು ಕುಳಿತು ಕೇಳಿದಾಗ ಇಬ್ಬರೂ ಮಾತನ್ನು ನಿಲ್ಲಿಸಿದರು. ತಮಗೆ ಕೇಳಿಸಲಿಲ್ಲವೆಂಬಂತೆ ಇಬ್ಬರೂ ಆಚೆ ನಡೆದರು.. ಅಜ್ಜಿ ಗೊಣಗುತ್ತಾ ಮತ್ತೆ ಮಲಗಿತು.

* * *

ಎರಡು ದಿನಗಳ ನಂತರ ಚಿದಾನಂದ ವಾಪಸ್ಸಾಗಿದ್ದ. ಅವನ ಮುಖದ ಕಳೆ ಕುಂದಿತ್ತು. ಪಲ್ಲವಿ ಅಲ್ಲಿಯ ವಿಷಯಗಳು ಏನೆಂದು ವಿಚಾರಿಸದೇ ಇದ್ದಾಗ ಅವನಿಗೆ ಅಚ್ಚರಿಯಾಗಿತ್ತು. ಕೆಳದನಿಯಲ್ಲಿ ತಾಯಿಯೊಡನೆ ಮಾತಾಡಿದ. ನಂತರ. ಭುಜಂಗನೊಡನೆ ಮಾತನಾಡಲೆಂದು ತೋಟದ ಕಡೆಗೆ ನಡೆದ. ಇಬ್ಬರೂ ಒಂದೆಡೆ ಕುಳಿತರು..

"ಅಮ್ಮಾ ಹೇಳಿದ್ಲು, ನಿಮ್ಮ ಚೈತ್ರಳ ಮದುವೆ ನಿಶ್ಚಯ ಆಯ್ತಂತೆ. ಒಳ್ಳೇದೇ ಆಯ್ತು.. ಅಲ್ಲಿಯ ವಿಷಯಗಳನ್ನು ಅವಳಿಗೆ ಹೇಳದಿರುವುದೇ ಒಳ್ಳೆಯದು."

"ಅಂದ್ರೇ.. ಅಲ್ಲಿ ಏನು ನಡಿದಿದೆ? ಮುಂದೆ ಏನೂ ತೊಂದರೆ ಆಗುಲ್ಲ ತಾನೇ.."

"ಹಾಗೇನೂ ಆಗುಲ್ಲ ಅಂತ ಲಾಯರ್ರು ಹೇಳಿದ್ರು. ಯಾವ ಸಾಕ್ಷ್ಯಗಳೂ ಇಲ್ಲ, ಯಾರೂ ಚೈತ್ರಳ ಹೆಸರನ್ನೇ ಎತ್ತಿಲ್ಲ .... ಅಲ್ಲದೇ, ಇಲ್ಲಿಗೆ ಬಂದು ವಿಚಾರಿಸುವವರೂ ಯಾರಿಲ್ಲ, ಪೋಲಿಸರು ತನಿಖೆಯನ್ನು ಮುಂದುವರೆಸಿಲ್ಲ, ಶರತ್ ಜೈಲಿನಲ್ಲಿದಾನೆ. ರಾಜೀವ ಬದುಕಿಲ್ಲ, ಅವನ ತಂದೆ ತಾಯಿಗೆ ಯಾವ ಆಸಕ್ತಿಯೂ ಉಳಿದಿಲ್ಲ, ಶರತ್ ಮನೆಯನ್ನು ಮಾರಿ ಬಿಟ್ಟಿದಾನೆ. ತಂದೆಯನ್ನು 'ಸ್ಪೆಷಲ್ ಹೋಂ' ಗೆ ಸೇರಿಸಿದಾನೆ, ಅಂತ ತಿಳಿದಿತ್ತಲ್ಲ, ಅವರನ್ನು ನೋಡಿ ಬರೋಣ ಅಂತ ವಿಚಾರಿಸಿಕೊಂಡು ಹೋದೆ. ಆದರೆ ಕೆಲವೇ ದಿನಗಳ ಹಿಂದೆ ಆತನೂ ತೀರಿಕೊಂಡಿದಾರೆ. ಅವರಿಗೆ ಶರತ್‌ನ ಹೊರತು ಬೇರೆ ಯಾರೂ ಇರಲಿಲ್ಲ ಅಂತ, ಅವರುಗಳೇ ಅಂತ್ಯಕ್ರಿಯೆಯನ್ನು ಮಾಡಿ ಮುಗಿಸಿಬಿಟ್ಟರಂತೆ.. ಈಗ ಎಲ್ಲಾ ಮುಗಿದ ಕಥೆ. ಎಲ್ಲರೂ ಇವಳನ್ನು ಮರೆತಿದ್ದಾರೆ."

"ಹೌದಾ! ಇಷ್ಟುಬೇಗ ಈ ವಿಷಯ ಪಲ್ಲವಿಗೆ ತಿಳಿಯದಿರುವುದೇ ಒಳ್ಳೆಯದು.. ಅಲ್ಲಿ ಅವಳಿಗಾಗಿ ಯಾರೂ ಇಲ್ಲ, ಏನೂ ಉಳಿದಿಲ್ಲ ಅಂತ ಅನ್ನಿಸುತ್ತೇ ಅಲ್ವಾ?.. ಹೀಗಾಗಬಾರದಾಗಿತ್ತು."

"ಹೌದು. ಆದರೆ ಲಾಯರ್ರು ಒಂದು ಬಾರಿ, ಪಲ್ಲವಿ ಹತ್ತಿರ ಮಾತಾಡ್ಬೇಕು.. ಅಂತ ಹೇಳಿದ್ರು.. ಅವರನ್ನೇ ಇಲ್ಲಿಗೆ ಕರೆಸೋಣ್ವಾ? ಅಥವಾ ಇವಳನ್ನೇ ಕರ್ಕೊಂಡು ಹೋಗೋಣ್ವಾ?.."

"ಅವರು ಇಲ್ಲಿಗೆ ಬರೋದು ಬೇಡ. ಎಷ್ಟೋ ವಿಚಾರಗಳನ್ನು ನಾನು ನನ್ನ ತಂದೆ ತಾಯಿಯರಿಗೆ ಹೇಳಿಲ್ಲ, ನಿಧಾನವಾಗಿ ತಿಳಿಸಿದ್ರಾಯ್ತು.. ನಾನೇ ಪಲ್ಲವಿಯನ್ನು ಬೆಂಗಳೂರಿಗೆ ಕರ್‍ಕೊಂಡು ಹೋಗ್ತೀನಿ.. ಮೊದಲು ಲಗ್ನ ಪತ್ರಿಕೆ ಶಾಸ್ತ್ರ ಆಗಲಿ.. ಹೇಗೂ ನೀವು ಬಂದೀರಲ್ಲ ಅಪ್ಪಯ್ಯನ ಹತ್ರ ಮಾತಾಡಿ.. ನಿಧಾನ ಮಾಡೋದು ಬೇಡ.."

"ಹಾಗಾದ್ರೆ ಈ ಮದುವೆಗೆ ಹೇಮಾಳ, ಅತ್ತೆಯ ಅಭ್ಯಂತರ ಏನೂ ಇಲ್ಲ ಅಲ್ವಾ?"

"ಏನೂ ಇಲ್ಲ, ಅವರಿಬ್ಬರ ಒಪ್ಪಿಗೆಯನ್ನು ಅವರುಗಳೇ ಹೇಳಿಬಿಟ್ಟಿದ್ದಾರೆ.."

"ಹೇಮಾ ಹೀಗೆ ಮಾಡ್ಬಾರ್ದಾಗಿತ್ತು.."

"ಬಿಡಿ, ಚಿದಾನಂದ್, ಮತ್ತೆ ಮತ್ತೆ ಅದೇ ಮಾತು ಯಾಕೆ ಈಗ?.. ಅವಳಿಗೆ ನಾನು ಬೇಕಾಗಿಲ್ಲ, ಅದನ್ನು ಅವಳು ಹೇಳಾಯ್ತು.. ಪಲ್ಲವಿ ನಂಗೆ ಬೇಕು ಅಂತ ಅನ್ನಿಸಿದಳು. ಅದನ್ನು ನಾನು ಹೇಳಿದ್ದಾಯ್ತು. ಆದರೆ ಇನ್ನು ಪಲ್ಲವಿಯ ಒಪ್ಪಿಗೆ ಸರಿಯಾಗಿ ಸಿಕ್ಕಿಲ್ಲ, ಅವಳ ಮನಸ್ನಲ್ಲಿ ಏನಿದೆ ಅಂತ ತಿಳಿಯೋಕೇ ಆಗಿಲ್ಲ, ಲಗ್ನಪತ್ರಿಕೆಗಿಂತ ಮುಂಚೆ ಅವಳು ತನ್ನ ಒಪ್ಪಿಗೆಯನ್ನು ತಿಳಿಸಬೇಕು.. ನೀವು ಮಾತಾಡ್ತೀರಾ ಅವಳ ಹತ್ರ...?

"ಈಗ ನಮ್ಮೆಲ್ಲರಿಗಿಂತ, ನೀವುಗಳೇ ಹತ್ರವಾಗಿದೀರಿ ಅವಳಿಗೆ.. ನೀವು ನಿಮ್ಮ ತಾಯಿ ಕುಳಿತು ಅವಳೊಡನೆ ಮಾತನಾಡಿದ್ರೆ ಹೇಗೆ?"

"ಅಮ್ಮ ಬೇಡ. ಅವಳಿಗೆ ಎಷ್ಟೋ ವಿಷಯ ಗೊತ್ತಿಲ್ಲ, ನಾನೇ ಮಾತಾಡ್ತೀನಿ. ಅವಳ ಸ್ನೇಹಿತೆ ಶ್ವೇತಾಳನ್ನು ಕಂಡಿದ್ರಾ? ಅವಳ ಹತ್ರ ಮಾತಾಡಿದ್ರಾ?.."

"ಇಲ್ಲ, ಅವರು ಇಲ್ಲಿಂದ ಬಂದ್ಮೇಲೆ ನನ್ನ ಹತ್ರ ಮಾತಾಡ್ಲಿಲ್ಲ, ಅವರು ಇಲ್ಲೇ ಇದಾರೆ ಅಂತ ಅಂದ್ಕೊಂಡಿದ್ದೆ.." ಅಮ್ಮ ದುಡುಕಿ ಬಿಟ್ಳು ಅಂತ ಅನ್ನಿಸುತ್ತೆ. ದೊಡ್ಡಮ್ಮನಿಗೆ ನಾನು ಹೇಳಿದ್ದನ್ನೆಲ್ಲಾ ಹೇಳ್ಬಾರ್ದಾಗಿತ್ತು.."

"ಪರವಾಗಿಲ್ಲ ಬಿಡಿ ಚಿದಾನಂದ್.. ಅವರಿಬ್ಬರೂ ಅಕ್ಕ ತಂಗಿಯರು, ಆಡಿ ಬಿಟ್ಟಿದ್ದಾರೆ. ಒಳ್ಳೇದೇ ಆಯ್ತು. ಇಲ್ದಿದ್ರೆ ದಿನಗಳು ಹಾಗೇ ತಳ್ಳಿ ಹೋಗ್ತಿದ್ವು. ಮಾತುಗಳ ಚಕಮಕಿ ನಡೆಯಿತು. ಆದರೂ ಒಂದು ಇತ್ಯರ್ಥ ಆಯ್ತು. "ಎಲ್ಲಾ ಒಳ್ಳೇದಕ್ಕೇ ಅಂತ ಅಂದ್ಕೊಂಡ್ರಾಯ್ತು."

"ಈಗ ಚೈತ್ರ ನನ್ನ ತಂಗಿ ಅಂತ ಎಲ್ರಿಗೂ ಗೊತ್ತಾಗಿದೆ. ಆದರೆ ಮದುವೆ ಮಾಡಿಕೊಡುವ ಯಾವ ಅನುಕೂಲವೂ ನನಗಿಲ್ಲ.. ನಮ್ಮ ಸ್ಥಿತಿಗತಿ ನಿಮಗೆ ಗೊತ್ತೇ ಇದೆ.."

"ನೀವು ಚಿಂತಿಸ್ಬೇಡಿ ಚಿದಾನಂದ್...ಮದುವೆ ಸರಳವಾಗಿರಲಿ. ಖರ್ಚು ವೆಚ್ಚ ಬೇಡ."

"ಹಾಗಂದ್ರೆ ಹೇಗೆ? ನಿಮ್ಮ ತಂದೆ ತಾಯಿಯರಿಗೆ ಆಸೆ ಇರುಲ್ವಾ?.. ನಿಮ್ಮ ನೆಂಟರಿಷ್ಟರು ಆಡಿಕೊಳ್ಳುಲ್ವಾ?"

"ಅದೆಲ್ಲಾ ಹೇಗೋ ನಡೆಯುತ್ತೆ. ನಾನು ಅದಕ್ಕೆ ವ್ಯವಸ್ಥೆ ಮಾಡ್ತೀನಿ. ಅತ್ತೆಗೂ ಎಲ್ಲಾ ಗೊತ್ತಿದೆ. ನಮ್ಮ ತಂದೆ ತಾಯಿಯ ಹತ್ರ ನಾನು ಮಾತಾಡ್ತೀನಿ. ಖರ್ಚೆಲ್ಲಾ ನಮ್ಮದೇ ಇರಲಿ. ನಾವೂ ತಕ್ಕ ಮಟ್ಟಿಗೆ ಅನುಕೂಲವಾಗಿದೀವಿ. ನನ್ನ ಮದುವೆಗೆ ನಾನೇ ಖರ್ಚು ಮಾಡ್ತೀನಿ."

“ನಿಮ್ಮ ಉಪಕಾರಕ್ಕೇ ಏನು ಹೇಳ್ಬೇಕೋ ನಂಗೆ ಗೊತ್ತಾಗ್ತಿಲ್ಲ.”

“ಇದರಲ್ಲಿ ನನ್ನ ಉಪಕಾರ ಏನ್ಬಂತು? ಇದು ನಮ್ಮ ಮನೆಯ ಮಂಗಳ ಕಾರ್ಯ. ನಾವು ಏರ್ಪಾಟು ಮಾಡ್ತಿವಿ. ನೀವು ಹೀನಾಯ ಪಟ್ಕೊಳ್ಳುವ ಅಗತ್ಯವಿಲ್ಲ” ಚಿದಾನಂದನಿಗೆ ಭುಜಂಗ ಸಮಾಧಾನ ಹೇಳಿದ.

* * *

“ನೀವು ಬೆಂಗಳೂರಿಗೆ ಒಂದ್ಸಲ ಹೋಗಿ ಬರ್ಬೇಕು ಅಂತ ಮನಸ್ಸಿದ್ರೆ ಹೇಳಿ ನಾನು ಕರ್ಕೊಂಡು ಹೋಗ್ತೀನಿ” ಭುಜಂಗ ಹೇಳಿದ. ಪಲ್ಲವಿ ಒಂದು ಗಳಿಗೆ ತಡೆದಳು.

“ಈಗ ಅಲ್ಲಿಗೆ ಹೋಗಿ ಏನ್ಮಾಡ್ಲಿ? ಅಲ್ಲಿನಂಗೋಸ್ಕರ ಯಾರು ಕಾಯ್ತಿದಾರೆ?” ವ್ಯಥೆಯಿಂದ ಹೇಳಿದಳು.

“ಚಿದಾನಂದ ಹೇಳ್ದ, ಒಬ್ಬರು ಲಾಯರ್ರು ಹತ್ರ ಮಾತಾಡಿದಾನಂತೆ. ಅವರು ನಿಮ್ಮ ಹತ್ರ ಮಾತಾಡ್ಬೇಕು ಅಂತ ಅಂದ್ರಂತೆ. ಅವರನ್ನ ಇಲ್ಲಿಗೇ ಬರಹೇಳೋಣ್ವಾ..”

“ಲಾಯರ್ರಾ? ಏನ್ಮಾತಾಡ್ಬೇಕಂತೆ? ನಂಗೆ ಯಾವ ಮಾತೂ ಇಲ್ಲ”

“ಶರತ್ ಬಗ್ಗೆ, ರಾಜೀವನ ಬಗ್ಗೆ ವಿವರಗಳನ್ನು ಕೇಳ್ಬಹುದು..”

“ಶರತ್ ಜೈಲಿನಲ್ಲಿದಾನೆ. ರಾಜೀವ ಬದುಕಿಲ್ಲ, ನಾನೇನು ಹೇಳ್ಲಿ..? ಅವರಿಗೆ ಕೊಡುಕ್ಕೆ ನನ್ನ ಹತ್ರ ಹಣ ಎಲ್ಲಿದೆ?..ಅಲ್ಲದೇ ಯಾವ ಸಂಬಂಧವೂ ಇಲ್ಲವಲ್ಲ.”

“ಅದನ್ನೆಲ್ಲನಾನು ನೋಡ್ಕೋತೀನಿ. ಹಾಗೇ ರಾಜೀವನ ತಂದೆ ತಾಯಿಯ ಹತ್ರ ಏನಾದ್ರೂ ಮಾತಾಡೋದು ಇದೆಯಾ!?”

“ಏನಿರುತ್ತೇ?... ರಾಜೀವನೇ ಇಲ್ಲವಲ್ಲ, ಯಾಕೆ ಏನಾದ್ರೂ ಭಯಾನಾ?..”

“ಭಯ ಏನಿಲ್ಲ, ನಿಮ್ಮ ತಪ್ಪು ಏನೂ ಇಲ್ಲ ಅಂತ ತಿಳಿದಿರೋರು ಒಬ್ಬರು ಬೇಕಲ್ಲ.. ಸಾಕ್ಷಿಗೆ ಅಂತ ಕರೆದ್ರೆ ಹೋಗ್ಲೇ ಬೇಕಾಗುತ್ತೆ..”

“ಕಟ ಕಟೇಲಿ ನಿಂತ್ರೆ, ಎಲ್ಲಾ ನಿಜವನ್ನು ಹೇಳಿ ಬಿಡ್ತೀನಿ ಭುಜಂಗ್..”

“ನಿಜವನ್ನು ಹೇಳುವ ಅಗತ್ಯ ಏನಿದೆ? ಈಗ ಯಾರನ್ನು ಉಳಿಸ್ಬೇಕು? ಶರತ್ ತಾನೇ ಅಪರಾಧವನ್ನು ಒಪ್ಕೊಂಡಿದಾನೆ. ಅವನಿಗೆ ಶಿಕ್ಷೆ ಆಗೇ ಆಗುತ್ತೆ. ಅವನಿಗೆ ದ್ರೋಹ ಮಾಡಿದ ರಾಜೀವನ್ನ ಶರತ್ ಮುಗಿಸಿಯೇ ಬಿಟ್ಟಿದಾನೆ... ಲಾಯರ್ರಿಗೆ ಎಲ್ಲಾ ಹೇಳಿದ್ರಾಯ್ತು.”

“ಅಂಥಾ ರಾಜೀವ, ಕೊಟ್ಟಿರುವ ಜೀವನಾಂಶದ ಹಣ ನನಗೆ ಬೇಡ. ಅವನ ತಾಯಿಗೇ ವಾಪಸ್ಸು ಕೊಟ್ಟು ಬಿಡ್ತೀನಿ... ಯಾವ ಮುಲಾಜೂ ಬೇಡ. ”

“ಯಾಕೆ? ಆ ಹಣದ ಮೇಲೆ ನಿನಗೆ ಅಧಿಕಾರವಿದೆ. ನೀವು ನಿಮ್ಮ ತಂದೆಯ ಆಸ್ತಿಯಲ್ಲಿ ಸಮಪಾಲು ಉಳ್ಳವರಾದ್ರೂ, ಈಗ ನಿಮಗೆ ಏನೂ ಸಿಗದಂತೆ ಶರತ್ ಮಾಡಿದಾನಂತೆ, ಈ

ಹಣವನ್ನು ಬೇಡ ಅಂತ ಯಾಕಂತೀರಿ!.. ಇರಲಿ ಬಿಡಿ.."

"ರಾಜೀವನ ತಂದೆ ತಾಯಿಯರಿಗೆ ಆ ಹಣದ ಅಗತ್ಯ ಇರುತ್ತೆ.. ರಾಜೀವನೂ ಇಲ್ಲ, ಅವರಿಗೆ ಕಷ್ಟವಾಗುತ್ತಿರಬಹುದು ಅಲ್ವಾ!"

"ಅದೇನೋ ನಂಗೊತ್ತಿಲ್ಲ, ಅವರಿಗೆ ಹಣ ಕೊಡ್ಬೇಕು ಅಂತ ಅನ್ನಿಸಿದ್ರೆ ಹಾಗೇ ಮಾಡಿ. ನನ್ನನ್ನು ಕೇಳುವ ಅಗತ್ಯವಿಲ್ಲ, ಆದರೆ, ಲಗ್ನ ಪತ್ರಿಕೆ ಶಾಸ್ತ್ರ ಒಂದು ಆಗಿ ಹೋಗಲಿ. ಆಮೇಲೆ ನಾನೇ ನಿಮ್ಮನ್ನು ಅವರ ಮನೆಗೆ ಕರ್ಕೊಂಡು ಹೋಗ್ತೀನಿ."

"ಲಗ್ನ ಪತ್ರಿಕೆಗೆ ನಿಮಗೆ ಅವಸರವಿರುವ ಹಾಗೆ ತೋರ್ತಿದೆ."

"ಹೂಂ, ಮದುವೆಯ ವಿಷಯದಲ್ಲಿ ಇನ್ನೂ ಅವಸರವಿದೆ. ಆದರೆ ನೀವ್ಯಾಕೋ ಇನ್ನೂ ಮನಸಾರೆ ಒಪ್ಪಿದೀರಿ ಅಂತ ಅನ್ನಿಸುತ್ತಿಲ್ಲ. ನನ್ನಂತೆ ಬಾಯಿಬಿಟ್ಟು ಮಾತನ್ನಾಡಿಲ್ಲ ನೀವು.."

"ಏನೋ ಗೊತ್ತಿಲ್ಲ, ಈಗಾಗ್ಲೇ ಒಂದು ಬಾರಿ, ಮದುವೆಗೆ ಒಪ್ಪಿ ತಪ್ಪು ಮಾಡಿದೀನಿ ಅಂತ ಅನ್ನಿಸ್ತಿದೆ. ಅದ್ನೆಲ್ಲಾ ಮರೆಯೋಕೇ ಆಗ್ತಿಲ್ಲ"

"ಮರೀಬೇಕ್ರೀ.. ಬೇಗ ನಮ್ಮ ಮನೆಗೆ ಬಂದು ಬಿಡಿ. ಒಂದೇ ರಾತ್ರೀಲಿ ಎಲ್ಲವನ್ನೂ ಮರೆತು ಬಿಡುವ ಹಾಗೆ ಮಾಡ್ತೀವಿ." ತುಂಟತನದಿಂದ ಹೇಳಿದ. ಅವಳು ನಾಚಿದಳು. "ಬಾಯ್ತುಂಬಾ ಒಮ್ಮೆ, ನಾನು ನಿಮಗೆ ಒಪ್ಪಿಗೆ ಅಂತ ಹೇಳ್ಬಿಡಿ. ಮನಸ್ಸು ಕುಣಿಯುತ್ತೆ." ಅವಳ ಕೈ ಹಿಡಿದ.

"ಹೇಳ್ಲೇಬೇಕಾ ಭುಜಂಗ್..? ಸರಿ. ನೀವು ನನಗೆ ಒಪ್ಪಿಗೆ " ಎಂದಳು ಕಣ್ಣು ಮುಚ್ಚಿ, ಅವನು ಅತ್ತಿತ್ತ ನೋಡಿ ಮೆಲ್ಲನೆ ಅವಳ ಕೆನ್ನೆಗೆ ತನ್ನ ತುಟಿಗಳನ್ನು ತಗುಲಿಸಿದ. ಅವಳು ಕಣ್ಣುಗಳನ್ನು ತೆರೆದಳು. ಅವನು ಅವಳ ತುಟಿಗಳ ಮೇಲೆ ತನ್ನ ಬೆರಳನ್ನಾಡಿಸಿ, ತನ್ನ ತುಟಿಗಳಿಗೆ ತಗುಲಿಸಿಕೊಂಡ. ಅವಳು ಹಿಂದಕ್ಕೆ ಸರಿದಳು." ನಡೀರಿ ಮನೆಗೆ ಹೋಗೋಣ. ನೀವು ಹೇಗೆ ಹೇಗೋ ಬಿಹೇವ್ ಮಾಡ್ತಿದೀರಿ ಎಂದಳು. ರಾಗ ರಂಜಿತಗೊಂಡ ಕೆನ್ನೆಗಳು ಬಿಸಿಯಾಗಿದ್ದವು.

"ಅಯ್ಯೋ ನಾನೇನ್ಮಾಡ್ದೆ? ಬೆಂಗಳೂರಿನಲ್ಲಿ ಹುಡುಗ ಹುಡುಗೀರು ಕೈ ಕೈ ಹಿಡಿದ್ಕೊಂಡು ಪಾರ್ಕಿನಲ್ಲಿ ಸುತ್ತಾರೆ. ಸಿನಿಮಾಗಳಿಗೆ ಹೋಟೆಲ್ಲುಗಳಿಗೆ ಹೋಗ್ತಾರೆ.. ಅಂತೆಲ್ಲಾ ಕೇಳಿದೀನಿ."

"ಅದೆಲ್ಲಾ ಸುಳ್ಳಲ್ಲ, ಆದರೆ ನಾನು ಅಂಥ ಹುಡುಗಿಯಲ್ಲ, ಮದುವೆಗೆ ಮುಂಚೆ ನನಗೆ ಇದೆಲ್ಲಾ ಇಷ್ಟವಿಲ್ಲ" ಎಂದಳು. ಅವನು ಮುನಿಸಿಕೊಂಡು, ಬಿರಬಿರನೆ ಮುಂದೆ ಮುಂದೆ ಹೆಜ್ಜೆ ಹಾಕಿದ. ಅವಳೂ ವೇಗವಾಗಿ ಹೆಜ್ಜೆ ಹಾಕಿ ಅವನ ಪಕ್ಕಕ್ಕೆ ಬಂದಳು.

"ನೀವು ಹೀಗೆ ವರ್ತಿಸಿದರೆ, ನಾನು ನಿಮ್ಮನ್ನ ಹೇಗೆ ನಂಬಲಿ?" ಕೇಳಿದಳು.

ಅವನು ನಿಂತು, ಅವಳ ಕಡೆ ತಿರುಗಿದ. ಅವಳು ಮುಗುಳ್ನಕ್ಕಳು. ಅವನು ತನ್ನ ನಸುನಗೆಯನ್ನು ಸೇರಿಸಿದ. ಇಬ್ಬರೂ ಒಟ್ಟಾಗಿ ಹೆಜ್ಜೆ ಹಾಕುತ್ತಾ ಮನೆಗೆ ಬಂದರು.

* * *

ಲಗ್ನ ಪತ್ರಿಕೆಯ ಶಾಸ್ತ್ರ ಸರಳವಾಗಿ ನೆರವೇರಿತ್ತು. ಎರಡು ದಿನಗಳ ನಂತರ ಭುಜಂಗ, ಪಲ್ಲವಿಯೊಡನೆ ಬೆಂಗಳೂರಿಗೆ ಹೋಗಿ ಬರುತ್ತಿರುವುದಾಗಿ ಹೇಳಿದಾಗ, ತಾಯಿ ಹುಬ್ಬೇರಿಸಿದಳು. ಅವಳ ಪ್ರಶ್ನೆಯನ್ನು ಓದಿಕೊಂಡವನಂತೆ ಹೇಳಿದ.

"ಪಲ್ಲವಿ ಓದಿದ್ದು ಬೆಂಗಳೂರಿನಲ್ಲೇ ಅಲ್ವಾ?.. ಅವಳ ಕಾಲೇಜಿಗೆ ಹೋಗಿ ಲೆಕ್ಚರರ್ಸ್‌ನ ಮಾತನಾಡಿಸ್ಬೇಕಂತೆ. ಹಾಗೇ ಕೆಲವು ಸ್ನೇಹಿತೆಯರನ್ನ ನೋಡ್ಬೇಕು ಅಂತ ಆಸೆ ಪಡ್ತಿದಾಳೆ. ನಾಲ್ಕು ತಿಂಗಳಿಂದ ಇಲ್ಲೇ ಇದಾಳೆ. ಬೇಸರವಾಗಿದೆಯಂತೆ.

"ನಾನೇ ಕೇಳೋಣಾಂತ ಇದ್ದೆ.. ಇವಳು ಯಾರದ್ದೋ ಮನೆಯಲ್ಲಿ ಬೆಳೆದಳಲ್ಲ, ಅವರಿಗೆ ನಿಮ್ಮಿಬ್ಬರ ವಿಚಾರಾನ ತಿಳಿಸ್ಬೇಕು.. ಮದುವೆಗೆ ಕರೆದು ಬರ್ಬೇಕು.."

"ಆ ಮನೇಲಿ ಈಗ ಯಾರೂ ಇಲ್ಲ. ತಾಯಿ ಮೊದಲೇ ತೀರಿಕೊಂಡಿದ್ರು. ತಂದೆ ಇತ್ತೀಚೆಗೆ ತೀರಿಕೊಂಡಿದಾರೆ. ಅಣ್ಣ ಅಂತ ಅನ್ನಿಸ್ಕೊಂಡವನು ಮನೆ ಮಠ ಎಲ್ಲವನ್ನೂ ಮಾರಿ ಬಿಟ್ಟಿದಾನೆ. ಅವನು ಸ್ವಂತ ಅಣ್ಣನಲ್ಲವಲ್ಲ, ಇವಳೊಡನೆ ಯಾವ ಸಂಪರ್ಕವನ್ನು ಇಟ್ಟುಕೊಂಡಿಲ್ಲ. ಈ ವಿಷಯಗಳನ್ನೆಲ್ಲಾ ಮರೆಯಬೇಕು ಅಂತ್ಲೇ ಪಲ್ಲವೀನ ಇಲ್ಲಿಗೆ ಕರೆತಂದು ಬಿಟ್ಟಿದ್ದು" ತಾಯಿ ನಂಬುವಂತೆ ನಾಜೂಕಾಗಿ ಹೇಳಿದ್ದ

"ಏನೋಪ್ಪ.ಮಂದಾಕಿನಿ ಯಾಕೆ ಹಾಗೆ ಕಂಡೋರ ಮನೇಲಿ ಬಿಟ್ಟಿದ್ಲೋ.. ವೈದೇಹಿ ಹೇಳಿದ್ಲು, ಯಾರೋ ಬೆದರಿಕೆ ಹಾಕಿದಾರೆ.. ಅದಕ್ಕೇ ಇಲ್ಲಿ ಅವಿತಿಟ್ಟುಕೊಂಡಿದಾಳೆ ಅಂತ.. ಸರಿಯಾಗಿ ವಿಚಾರಿಸದ್ಯಾ! ಏನು ಕತೆಯೋ ಏನೋ? ಮುಂದೆ ಫಜೀತಿಯಾಗ್ಬಾರ್ದು."

"ಇದುವರೆಗೂ ಯಾರೂ ವಿಚಾರಿಸ್ಕೊಂಡು ಬಂದಿಲ್ಲ. ಮದುವೆ ಆದ್ಮೇಲೆ ಯಾವ ಭಯವೂ ಇರುಲ್ಲ, ಅವಳನ್ನು ಸರಿಯಾಗಿ ನೋಡ್ಕೊಳ್ಳೋದು ನನ್ನ ಕರ್ತವ್ಯ."

"ಹೌದು ಭುಜೀ.. ಹೆಣ್ಣುಮಕ್ಕಳನ್ನು ಯಾವುದೇ ರೀತಿಯಲ್ಲಿ ನೋಯಿಸಬಾರದು. ಏನೂ ತೊಂದರೆ ಬರದಂತೆ ನೋಡ್ಕೋಬೇಕು. ನೋಡಿದ್ರೆ ಹೇಮಳಂತೆ ದಿಟ್ಟಹೆಣ್ಣು ಅಂತ ಅನ್ನಿಸುವುದಿಲ್ಲ. ಹಾಗೇ ಹೇಮನ್ನ ನೋಡಿ ಮಾತನಾಡಿಸ್ಕೊಂಡು, ಮದುವೆಗೆ ಕರೆದು ಬಾ.. ಎರಡು ದಿನ ಮುಂಚಿತವಾಗಿಯೇ ಬರಲಿ." ತಾಯಿಯನ್ನು ಮೆಚ್ಚುಗೆಯಿಂದ ನೋಡಿದ.

"ಆಯ್ತಮ್ಮ.. ಎರಡು ಮೂರು ದಿನಗಳಲ್ಲಿ ಬಂದು ಬಿಡ್ತೀನಿ. ಚಿದಾನಂದ ಇಲ್ಲಿಯೇ ಇರ್ತಾನೆ. ಅತ್ತೆಗೂ ಹೇಳಿದೀನಿ. ನಾನೂ ಫೋನು ಮಾಡಿ ವಿಚಾರಿಸ್ತಿರ್ತೀನಿ" ಎಂದ.

ಅದೇ ರಾತ್ರಿಯ ಬಸ್ಸಿಗೆ, ಭುಜಂಗ ಪಲ್ಲವಿಯೊಡನೆ ಬೆಂಗಳೂರಿಗೆ ಹೊರಟ. ಚಿದಾನಂದನಿಗೆ ಎಲ್ಲಾ ಜವಾಬ್ದಾರಿಯನ್ನು ವಹಿಸಿದ್ದ.. ಮತ್ತೊಮ್ಮೆ ಎಲ್ಲರಿಗೂ ಹೇಳಿ ಬಸ್‌ಸ್ಟ್ಯಾಂಡ್‌ಗೆ ಹೊರಟರು. ಕಿಟಕಿಯ ಬಳಿ ಕುಳಿತಿದ್ದ ಪಲ್ಲವಿ, ಹೊರಗಿನ ಕತ್ತಲೆಯನ್ನು ವೀಕ್ಷಿಸಿದಳು. ಬಸ್ಸು ವೇಗವಾಗಿ ಚಲಿಸುತ್ತಿತ್ತು. ಚಳಿ ಎಂದೆನಿಸಿತ್ತು. ಕಿವಿಗಳು ಮುಚ್ಚುವಂತೆ ದುಪ್ಪಟ್ಟಾವನ್ನು ಬಿಗಿಯಾಗಿ ಹೊದ್ದು ಭುಜಂಗನಿಗೆ ಒರಗಿಕೊಂಡಳು. ಅವನು ಅವಳ ಭುಜದ ಸುತ್ತ ಕೈಯನ್ನು ಬಳಸಿದ. ಅವಳಿಗೆ ನಿದ್ದೆ ಹತ್ತಿತ್ತು. ಜೊತೆಗೆ ಸುಂದರ ಕನಸುಗಳು. ಪ್ರಯಾಣ ಹೀಗೆ ಸಾಗುತ್ತಿರಲಿ, ಎನಿಸಿತ್ತು. ಬೆಳಗ್ಗೆ ಬೆಂಗಳೂರನ್ನು ತಲುಪಿದಾಗ, ಇನ್ನೂ ಚೆನ್ನಾಗಿ ಬೆಳಕು ಹರಿದಿರಲಿಲ್ಲ, ಪಲ್ಲವಿಯನ್ನು ಎಬ್ಬಿಸಿದ.

ಇಬ್ಬರೂ ಬಸ್ಸಿನಿಂದ ಇಳಿದು ಆಟೋ ಹಿಡಿದು ಒಂದು ಹೋಟೆಲ್ಲಿನಲ್ಲಿ ರೂಮನ್ನು ಗೊತ್ತು ಮಾಡಿಕೊಂಡರು. ಸ್ನಾನ ಮುಗಿಸಿ, ತಿಂಡಿ ತಿಂದು ಇಬ್ಬರೂ ಶ್ವೇತಾಳ ಮನೆಗೆ ಬಂದರು. ಶ್ವೇತಾ ಅವರಿಬ್ಬರನ್ನು ನಿರೀಕ್ಷಿಸಿರಲಿಲ್ಲವಾದರೂ, ಸಂತಸಗೊಂಡಳು. ಸ್ವಲ್ಪ ಹೊತ್ತಿನ ನಂತರ ಭುಜಂಗ ಎದ್ದ.

"ನೀವಿಬ್ರೂ ಮಾತಾಡ್ತಾ ಇರಿ. ನಾನು ಹೇಮಾಳನ್ನು ಕಂಡು ಮಾತಾಡ್ಸಿಕೊಂಡು ಬರ್ತೀನಿ ಎಂದು ಹೇಳಿ ಹೊರಟ. ಭುಜಂಗ ಅತ್ತ ಹೊರಟ ಕೂಡಲೇ ಶ್ವೇತಾ ಮಾತಿಗೆ ಪ್ರಾರಂಭಿಸಿದಳು.

"ಈ ಊರಿಗೆ ಬರೋದೇ ಇಲ್ಲ ಅಂತ ಹೇಳಿದ್ಯಲ್ಲೇ.. ಅದೂ ಭುಜಂಗನ ಜೊತೇಲಿ ಬಂದೀದೀಯಲ್ಲ, ನಿನ್ನನ್ನ ಇಲ್ಲಿಯೇ ಬಿಟ್ಟು ಹೋಗುವ ಪ್ಲ್ಯಾನ್ ಏನಿಲ್ಲ ತಾನೇ.. ಮದುವೆ ವಿಷಯ ಏನಾಯ್ತು?"

"ಇಲ್ಲ ಶ್ವೇತಾ...ನಮ್ಮಿಬ್ಬರ ಎಂಗೇಜ್‌ಮೆಂಟ್ ಕೆಲವು ದಿನಗಳ ಹಿಂದೆ ನಡೀತು. ಅದ್ಯಾರೋ ಲಾಯರ್ ನನ್ನ ಹತ್ರ ಮಾತಾಡ್ಬೇಕು ಅಂತ ಅಂದ್ರಂತೆ.. ಹಾಗೇ ಇನ್ನು ಒಂದು ಮುಖ್ಯವಾದ ಕೆಲಸ ಒಂದಿದೆ. ನಾನು ರಾಜೀವನ ತಂದೆ ತಾಯಿಯರನ್ನು ನೋಡ್ಬೇಕು.. ಅದಕ್ಕೇ ಬಂದೆ.."

"ನಿನಗೇನಾದ್ರೂ ಬುದ್ಧಿ ಗಿದ್ದಿ ಇದೆಯಾ! ಅವರು ಇಲ್ಲದ್ದನ್ನೆಲ್ಲ ಭುಜಂಗನಿಗೆ ಹೇಳಿ ನಿನ್ನ ಮದುವೇನ ನಿಲ್ಲಿಸ್ತಾರೆ ಅಷ್ಟೇ."

"ಮದುವೇನ ನಿಲ್ಲಿಸೋಕೆ ಅವರಿಗೆ ಯಾವ ಅಧಿಕಾರವೂ ಇಲ್ಲ, ಡೈವೋರ್ಸ್ ಕೊಡ್ತೀನಿ ಅಂತ ರಾಜೀವ ಹೇಳಿದ್ದ. ಈಗ ಅವನೇ ಇಲ್ಲ"

"ಆದ್ರೂ ನೀನು ಹುಶಾರಾಗಿರು. ಆಕೆಗೆ ಏನಾದ್ರೂ ಕೋಪ ಇದ್ದರೆ, ಇದೇ ಸಮಯ ಅಂತ ತೀರಿಸ್ಕೊಳ್ದೇ ಇರ್ತಾರಾ? ನಿನ್ನ ಮೇಲೆ ಕೇಸು ಹಾಕಬಹುದು."

"ಯಾವ ಅಪರಾಧದ ಮೇಲೆ ಕೇಸನ್ನು ಹಾಕ್ತಾರೆ ! ಯಾವ ಸಾಕ್ಷಿ ಇದೆ ! ರಾಜೀವ ನನಗೆ ಕೊಟ್ಟ ಹಣವನ್ನು ಅವರಿಗೇ ವಾಪಸ್ಸು ಕೊಟ್ಟು ಬಿಡ್ತೀನಿ. ಅವನ ದುಡ್ಡು ನಂಗ್ಯಾಕೆ?"

"ಏಯ್ ಪೆದ್ದೀ.. ಖಂಡಿತಾ ನಿನ್ನ ತಲೆ ಸರಿ ಇಲ್ಲ, ಆ ಹಣ ನಿನಗೆ ಸೇರಬೇಕಾದ್ದೇ.. ಶರತ್‌ಗೆ ಮೋಸ ಮಾಡಿ ಕೂಡಿಟ್ಟಿದ್ದ ಹಣ.. ಅದೂ ನಿನ್ನದೇ...ಈ ಶರತ್ ಕೂಡ ನಿನಗೆ ದ್ರೋಹ ಮಾಡಿದಾನೆ. ನಿನ್ನ ತಂದೆಯ ಕಡೆಯಿಂದ ನಿಂಗೇನು ಸಿಕ್ಕಿದೆ?" ಸುಮ್ನೇ ಇಟ್ಕೋ.

"ಈಗ ನಂಗೆ ಏನೂ ಬೇಡ ಶ್ವೇತಾ.. ಹೊಸದಾಗಿ ಜೀವನವನ್ನು ಪ್ರಾರಂಭಿಸ್ತೀನಿ."

"ಹಾಗಾದ್ರೆ ನಂಗೆ ಕೊಡು. ನಂಗೆ ಹಣದ ಅಗತ್ಯವಿದೆ." ಆಗಲೇ ನಿನ್ನನ್ನ ಕೇಳಿದ್ದೆ.

"ನಿಂಗೆ ಕೊಟ್ರೆ, ನೀನೂ ನಿನ್ನ ಅಣ್ಣ ಇಬ್ರೂ ಸೇರಿ ಕೆಲವೇ ದಿನಗಳಲ್ಲಿ ಮುಗಿಸಿ ಬಿಡ್ತೀರಿ ಅಷ್ಟೇ... ಯೋಚಿಸ್ಬೇಕು."

"ಹೂಂ, ಅಷ್ಟು ದಾರಿಗಳಿವೆ ಖರ್ಚಿಗೆ.. ಸುಮ್ನೇ ನಿನ್ನ ಹತ್ರಾನೇ ಇಟ್ಕೋ. ಒಂದಿಷ್ಟು ಒಡವೆಗಳನ್ನು ಮಾಡಿಸ್ಕೋ.. ಅಂದ್ಹಾಗೇ ಈಗ ನೆನಪಾಯ್ತು ನೋಡು. ಶರತ್, ಎರಡು ಸೂಟ್‌ಕೇಸ್‌ಗಳಲ್ಲಿ ಸೀರೆಗಳನ್ನು, ಡ್ರೆಸ್‌ಗಳನ್ನು ಒಂದು ಸಣ್ಣ ಪೆಟ್ಟಿಗೆಯಲ್ಲಿ ಒಡವೆಗಳನ್ನು ಇಟ್ಟು

ತಂದು ಇಲ್ಲಿ ಇಟ್ಟಿದಾನೆ.'' ಸಧ್ಯಕ್ಕೆ ಇಲ್ಲಿರಲಿ ಅಂತ ಹೇಳಿದ್ದೆ

''ನಿಂಗೆ ಅಂತ ಕೊಟ್ನಾ? ಕೆಲವೆಲ್ಲಾ ಅಮ್ಮನ ಒಡವೆಗಳು..''

''ಇರಬಹುದು. ನಾನು ತೆಗೆದಿಲ್ಲ.. ಅಣ್ಣನ ಕಣ್ಣಿಗೆ ಬಿದ್ದರೆ, ಒಡವೆಗಳನ್ನು ಮಾರಿಕೊಂಡಾನು ಅಂತ ಮುಚ್ಚಿಟ್ಟಿದ್ದೆ. ಈಗ ನೀನು ತಗೊಂಡ್ಹೋಗು.''

''ಈಗ ನಂಗ್ಯಾಕೆ! ನೀನೇ ಇಟ್ಕೋ.. ಅವನ ನೆನಪಿನಲ್ಲಿ..''

''ಅವನನ್ನು ನೆನಪಿಸಿಕೊಳ್ತಾ ಕೂತ್ರೆ ಏನು ಪ್ರಯೋಜನ?.. ಅವನ ಮಗೂನೇ ಬೇಡ ಅಂತ ತೆಗೆಸಿಬಿಟ್ಟೆ.. ಇನ್ನು ಅವನು ಬಿಡುಗಡೆಯಾಗಿ ಬಂದ್ರೂ ನಂಗೆ ಅವನ ಸಹವಾಸ ಬೇಡ..''

''ಆ ಕೆಲಸ ಮಾಡ್ಬಾರ್ದಾಗಿತ್ತು ನೀನು. ಆ ಮಗೂ ಏನು ತಪ್ಪು ಮಾಡಿತ್ತು? ಅದು ನಿನ್ನ ಮಗುವೂ ಹೌದು ತಾನೇ..''

''ಹೌದೇ ಚೈತ್ರಾ. ಈಗ ಹಾಗೆನ್ನಿಸ್ತಿದೆ. ನನ್ನ ಒಂಟಿತನವನ್ನು ದೂರ ಮಾಡುಕ್ಕೆ ಆ ಮಗುನಾದ್ರೂ ಇರ್ತಿತ್ತು. ಮದುವೆ ಇಲ್ಲ, ಆದಾಯವಿಲ್ಲ ಅಂತ ಹೆದರಿಬಿಟ್ಟೆ

''ಒಂಟಿಯಾಗಿ ಯಾಕೆ ಇರ್ತೀಯ? ಎಲ್ಲವನ್ನು ಮರೆತು ಮದುವೆಯಾಗು.''

''ನನ್ನನ್ನ ಯಾರೇ ಮದುವೆಯಾಗ್ತಾರೆ?.. ಶರತ್ ಜೊತೆ ಸಂಬಂಧವಿತ್ತು ಅಂತ ತಿಳಿದ್ರೆ ಯಾರೂ ಒಪ್ಕೊಳ್ಳೋಲ್ಲ.''

''ಒಪ್ಕೊಳ್ಳೋರು ಸಿಕ್ಕಿದ್ರೆ ನಿರಾಕರಿಸ್ಬೇಡ..''

''ಎಲ್ರೂ ಭುಜಂಗನಷ್ಟೇ ದೊಡ್ಡ ಹೃದಯದವರಾಗಿರ್ತಾರಾ? ನೀನು ಲಕ್ಕಿ ಕಣೇ.. ನಿನಗೆ ಒಳ್ಳೆಯ ಗಂಡ ಸಿಗ್ತಿದಾನೆ. ನಂಗೆ ಅಸೂಯೆಯಾಗ್ತಿದೆ. ಅಂಥೋರು ಯಾರಾದ್ರೂ ಇದ್ರೆ ಹೇಳು ಕಣ್ಮುಚ್ಚಿ ಮದುವೆಯಾಗ್ತೀನಿ.''

''ಇಷ್ಟೇನಾ ನಿನ್ನ ಪ್ರೀತಿ?.. ಶರತ್‌ನ ಅಷ್ಟು ಬೇಗ ಮರೆತು ಬಿಟ್ಯಾ?'' ಕೆಣಕಿದಳು.

''ಅವನು ನನ್ನನ್ನು ಆಳವಾಗಿ ಪ್ರೀತಿಸಿದ್ನೋ ಇಲ್ವೋ ಗೊತ್ತಿಲ್ಲ, ಅವನು ನನ್ನ ಸಂಗ ಸುಖವನ್ನು ಬಯಸಿದ. ನಾನು ಒಪ್ಪಿಬಿಟ್ಟೆ. ನಿನಗೂ ಭುಜಂಗನಿಗೂ ಅಂಥಾ ಸಂಬಂಧ ಏನಾದ್ರು ಇದೆಯಾ?..'' ಪಿಸುದನಿಯಲ್ಲಿ ಕುತೂಹಲದಿಂದ ಕೇಳಿದಳು.

''ನಾನು ಅಂಥೋಳಲ್ಲ ಅಂತ ನಿಂಗೆ ಗೊತ್ತು.. ರಾಜೀವ ನನ್ನ ಮೈ ಮುಟ್ಟದಂತೆ ಎಚ್ಚರಿಕೆಯಿಂದ ಇದ್ದೆ ಗೊತ್ತಾ?''

''ಆದಕ್ಕೆ ಬೇರೆ ಕಾರಣವೂ ಇತ್ತಲ್ಲ.. ಈಗ ಹೇಗೂ ಲಗ್ನಪತ್ರಿಕೆ ಆಗಿದೆ. ಇಬ್ಬರೇ ಜೊತೇಲಿ ಬಂದಿದೀರಿ.. ನಿಂಗೆ ಆಸೆ ಇದ್ದರೆ ಹೇಳು. ನಮ್ಮ ಮನೇಲಿ ಇನ್ನೂ ಒಂದು ರೂಮಿದೆ.''

''ಶ್ವೇತಾ, ನೀನು ಹೀಗೆಲ್ಲಾ ಮಾತಾಡೋದಾದ್ರೆ, ನಾನು ನಿನ್ನ ಮನೆಗೇ ಬರುಲ್ಲ..''

''ಸರಿ ಬಿಡು. ಬಹಳ ಮಡಿ ನೀನು. ನಿನ್ನ ಜಾಗದಲ್ಲಿ ನಾನೇನಾದ್ರೂ ಇದ್ದಿದ್ರೆ, ಭುಜಂಗನ

ಆಸೆಗಳನ್ನು ಕೆರಳಿಸಿ ಬಿಡ್ತಿದ್ದೆ. ಶರತ್ ಎಷ್ಟೇ ಕೆಟ್ಟವನಾಗಿರಲಿ, ಬಹಳ ರಸಿಕನಾಗಿದ್ದ. ಆ ಸಮಯಗಳನ್ನು ನೆನೆಸಿಕೊಂಡ್ರೆ...ಆಸೆಗಳು ಹುಟ್ಟುತ್ವೆ."

"ನೀನು ಬೇಗ ಮದುವೆಯಾಗೋದೇ ವಾಸಿ, ಇಲ್ದಿದ್ರೆ ಕೆಟ್ಟು ಹೋಗ್ತೀಯ..."

"ನಿನ್ನ ಭುಜಂಗನ ಮೇಲೆ ಕಣ್ಣು ಹಾಕ್ದೆ ಅಂತ ಹೆದರಿ ಬಿಟ್ಯಾ!.. ಒಂದು ವೇಳೆ ಭುಜಂಗನೇನಾದ್ರೂ ನನ್ನನ್ನು ಬಯಸಿದ್ರೆ, ನಾನು ರೆಡಿ.. ನೀನು ಸ್ನೇಹಿತೆ ಅನ್ನೋದನ್ನಾ ಮರೆತುಬಿಡ್ತೀನಿ." ಕಿಲಕಿಲ ನಕ್ಕಳು.

"ಥೂ ಹಲ್ಕಾ ಹೀಗೆಲ್ಲಾ ಮಾತಾಡ್ತೀಯಲ್ಲ, ನಾಚಿಕೆ ಆಗುಲ್ವಾ!.. ಭುಜಂಗ ಅಂಥೋರಲ್ಲ."

"ಗುಡ್‌ಲಕ್. ನಿನ್ನ ನಂಬಿಕೆ ಶಾಶ್ವತವಾಗಿರಲಿ...ಮಾತಾಡಿ ಮಾತಾಡಿ ಬಾಯಿ ಒಣಗಿದೆ. ಕಾಫಿ ಮಾಡ್ಕೊಂಡು ಬರ್ತೀನಿ. ಅಡಿಗೆ ಏನ್ಮಾಡ್ಲೀ?" ಶ್ವೇತಾ ಎದ್ದಳು.

"ನಿಂಗೆ ಅಡಿಗೆ ಮಾಡೋಕೆ ಬರುತ್ತೇನೆ? ಯಾವಾಗ ಕಲಿತೆ?"

"ಚೆನ್ನಾಗಿ ಕಲಿತಿಲ್ಲ, ಅನ್ನ ಮಾಡೋಕೆ ಬರುತ್ತೆ ಅಷ್ಟೇ.. ಭುಜಂಗ ಬೇಗ ಬಂದ್ರೆ ಎಲ್ರೂ ಹೋಟೆಲ್ಲಿಗೆ ಊಟಕ್ಕೆ ಹೋಗೋಣ..."

"ನೋಡೋಣ.. ಹೇಮಾನ್ನ ನೋಡೋಕೆ ಅಂತ ಹೋಗಿದಾರಲ್ಲ, ಬೇಗ ಬರ್ತಾರೋ ಇಲ್ವೋ?"

"ನೀನೂ ಹೋಗ್ಬೇಕಾಗಿತ್ತು. ಏನು ಮಾತಾಡಿದ್ರು ಅಂತ ತಿಳೀತಿತ್ತು."

"ನಂಗೆ ಆ ಆಸಕ್ತಿ ಇಲ್ಲ ಬಿಡು."

"ಹಾಗಂದ್ರೆ ಹೇಗೇ? ಅವರಿಬ್ಬರೂ ಒಟ್ಟಿಗೇ ಬೆಳೆದವರು. ಭುಜಂಗ ಅವಳು ಹೇಳಿದ ಹಾಗೇ ಕೇಳ್ತಾನೆ. ನಿನ್ನ ವಿರೋಧ ಏನಾದ್ರೂ ಹೇಳಿಕೊಟ್ಟರೆ ಏನು ಮಾಡ್ತೀಯ?"

"ಭುಜಂಗ ಅವಳ ಮಾತನ್ನು ಕೇಳುಲ್ಲ ಅನ್ನುವ ನಂಬಿಕೆ ನನಗಿದೆ. ಅವಳ ಮೇಲೆ ಪ್ರೀತಿ ಇಲ್ಲ.. ಹಾಗಂತ ಹೇಳಿದಾರೆ."

"ಪ್ರೀತಿ ಇಲ್ಲದಿದ್ದರೇನಾಯ್ತು? ದ್ವೇಷಿಸುಲ್ಲವಲ್ಲ....ಕ್ರಮೇಣ ನಿನ್ನ ಮೇಲಿನ ಪ್ರೀತಿ ಕಡಿಮೆ ಆದರೆ? ಆಗೇನೇ ಮಾಡ್ತೀಯಾ?"

"ಹಾಗೇನೂ ಆಗುಲ್ಲ, ನೀನು ಏನೇನೋ ಹೇಳಿ ಹೆದರಿಸ್ಬೇಡ.." ಬಾಯಿ ಮುಚ್ಚಿಸಿದಳು.

* * *

ಹಾಸ್ಟೆಲ್ಲಿನಲ್ಲಿ ಹೇಮಾಳಿಗಾಗಿ ಹೇಳಿ ಕಳಿಸಿ, ವಿಸಿಟರ್ಸ್ ರೂಮಿನಲ್ಲಿ ಭುಜಂಗ ಕಾಯುತ್ತಾ ಕುಳಿತಿದ್ದ. ಎಷ್ಟೋ ಹೊತ್ತಾದ ನಂತರ ಹೇಮಾ ಬಂದಳು. ಅವಳು ಅವನನ್ನು ಕಂಡು ಸಂತಸವನ್ನೇನೂ ಪ್ರಕಟಗೊಳಿಸಲಿಲ್ಲ, ಗಂಭೀರವನ್ನು ನಟಿಸಿದಳು. ಭುಜಂಗ ತಾನೇ ಮಾತನಾಡಿಸಿದ.

"ಹೇಗಿದೀಯಾ ಹೇಮಾ?"

"ನೀನ್ಯಾಕೆ ಬಂದೆ! ಏನಾದ್ರೂ ವಿಷಯ ಇದ್ದಿದ್ದರೆ, ಫೋನು ಮಾಡ್ಬಹುದಾಗಿತ್ತು." ಸಿಡುಕುತ್ತಾ ನುಡಿದಳು.

"ನಿನ್ನನ್ನು ಸ್ವತಃ ಕಂಡು ಮಾತನಾಡಿಸ್ಬೇಕು ಅಂತ ಅನ್ನಿಸ್ತು. ಬಂದೆ. ಯಾಕೇ? ನನ್ನ ಮುಖವನ್ನು ನೋಡೋಕೂ ನಿಂಗೆ ಇಷ್ಟವಿಲ್ವಾ!"

"ಹಾಗೆಲ್ಲಿ ಅಂದೆ ನಾನು?... ಯಾಕೋ ಮನಸ್ಸೇ ಸರಿಯಿಲ್ಲ"

"ಡಾಕ್ಟರಾಗೋಳು ನೀನು. ನೀನೇ ಮನಸ್ಸನ್ನು ಕೆಡಿಸ್ಕೊಂಡ್ರೆ ಹೇಗೆ? ಎಲ್ಲರೂ ಹೇಗಿದಾರೆ ಅಂತ ವಿಚಾರಿಸೋಲ್ವಾ?"

"ನೀನೇ ಹೇಳ್ಬಿಡು. ತಿಳ್ಕೋತೀನಿ.."

"ಹೀಗ್ಯಾಕೇ ಮಾತಾಡ್ತೀಯ.. ಎಲ್ರೂ ನಿನ್ನನ್ನ ಪ್ರೀತಿಸ್ತಾರೆ ಕಣೇ."

"ಸುಳ್ಳು ಹೇಳ್ಬೇಡ. ಎಲ್ರಿಗೂ ನನ್ಮೇಲೆ ಕೋಪ ಅಂತ ನಂಗೊತ್ತು. ಹೌದು ತಾನೇ?"

"ಹೂಂ, ಸ್ವಲ್ಪ ಕೋಪ, ಸ್ವಲ್ಪ ಬೇಸರ.. ಅದೆಲ್ಲಾ ಏನು ದೊಡ್ಡ ವಿಷಯ?"

"ಅಮ್ಮಂಗೆ ನನ್ಮೇಲೆ ಕೋಪ, ಅಪ್ಪನ ತಿರಸ್ಕಾರದ ಮಾತು.. ಅತ್ತೆಯ ಬೇಸರ, ಮಾವನ ತೆಗಳಿಕೆ.. ನೀನು ಹೇಳ್ದಿದ್ರೂ ನಂಗೆ ತಿಳಿಯುತ್ತೆ ಭುಜೀ.."

"ಹಾಗೇನಿಲ್ಲ ಅತ್ತೆ ಬೇಸರ ಪಟ್ಕೊಂಡು ಏನೇನೋ ಮಾತಾಡಿದ್ದು ನಿಜ.. ನಾನಂತೂ ಏನನ್ನೂ ಹೇಳಿರ್ಲಿಲ್ಲ, ಮಂದಾಕಿನಿ ಅತ್ತೆ ಹೇಳ್ಬಿಟ್ರು. ಅತ್ತೆ ಮನಸ್ಸನ್ನು ಕೆಡಿಸ್ಕೊಂಡು ಬಾಯಿಗೆ ಬಂದ ಹಾಗೆ ಮಾತಾಡಿದ್ರು. ಈಗ ಸಮಾಧಾನ ಮಾಡ್ಕೊಂಡಿದಾರೆ.."

"ಅಮ್ಮಂಗೆ ನೀನೇ ಹೇಳ್ಬೇಕು ಅಂತ ಹೇಳಿದ್ನಲ್ಲಾ..ನೀನೇ ಹೇಳ್ಬಹುದಾಗಿತ್ತು."

"ಯಾಕೋ ನಿನ್ನನ್ನ ಕೆಟ್ಟೋಳನ್ನಾಗಿ ಮಾಡೋಕೆ ಇಷ್ಟವಾಗ್ಲಿಲ್ಲ.. ಅತ್ತೇ ನಿನ್ನನ್ನ ಬಾಯಿಗೆ ಬಂದ ಹಾಗೆ ಬೈದಾಗ ನನಗೆ ವ್ಯಥೆಯಾಯ್ತು ಹೇಮಾ..."

"ಅಷ್ಟೊಂದು ಹಚ್ಕೋಬೇಡ ಭುಜೀ.. ನಾನು ನಿನ್ನವಳಾಗಲು ಸಾಧ್ಯವೇ ಇಲ್ಲ, ನಾನು ಬೇರೊಬ್ಬನ್ನ ಪ್ರೀತಿಸ್ತಿದೀನಿ ಅಂತ ನಿನಗೇ ಹೇಳಿದೀನಲ್ಲ, ನೀನು ಆದಷ್ಟು ಬೇಗ ಬೇರೆ ಹುಡುಗಿಯನ್ನು ನೋಡಿ ಮದುವೆ ಮಾಡ್ಕೋ...ಆ ಪಲ್ಲವಿ ಹೇಗೆ?..ನಿನಗೆ ಇಷ್ಟವಾಗಿರಬಹುದು ಅಲ್ವಾ? ಜೊತೇಲಿ ಸುತ್ತಾಡಿದೀಯ.... ಮೆಚ್ಚಿಕೊಂಡಿದೀಯ.."

"ಅದೇ ವಿಷಯಾನ ಹೇಳೋಣ ಅಂತ ಬಂದೆ. ಪಲ್ಲವಿಯೊಂದಿಗೆ ನನ್ನ ಮದುವೆ ಗೊತ್ತಾಗಿದೆ." ತಕ್ಷಣ ಹೇಮಾಳ ಮುಖದ ಬಣ್ಣ ಬದಲಾಗಿತ್ತು. ಭುಜಂಗನ ಮೇಲೆ ಕೋಪ ಬಂದಿತ್ತು. ಪಲ್ಲವಿಯ ಮೇಲೆ ಅಸೂಯೆ ಹುಟ್ಟಿತು. ಅವನು ತಲೆ ಎತ್ತಿ ಅವಳ ಕಡೆ ನೋಡಿ ಮುಗುಳ್ನಗುವಿನಲ್ಲಿ ನಾಚಿಕೆಯನ್ನು ಸೇರಿಸಿದ. ಅವಳು ಬಹಳ ಕಷ್ಟದಿಂದ "ಕಂಗ್ರಾಟ್ಸ್" ಎಂದಳು. "ಪಲ್ಲವೀನೂ ಕರ್ಕೊಂಡು ಬಂದಿದೀನಿ. ಅವಳು ಅವಳ ಸ್ನೇಹಿತೆಯ ಮನೇಲಿದಾಳೆ.. ಯಾಕೇ

ಹೇಮಾ? ಏನು ಮಾತಾಡ್ತಾನೇ ಇಲ್ಲ..'' ಹೇಮಾ ಬಲವಂತದ ನಗೆಯನ್ನು ನಕ್ಕಳು.

``ಒಂದು ಗಳಿಗೆ ಮನಸ್ಸು ತಟಸ್ಥವಾಯಿತು. ಡೋಂಟ್ ವರಿ. ಐ ಆಮ್ ಆಲ್‌ರೈಟ್. ಪಲ್ಲವೀನ ನೀನು ಮೆಚ್ಚಿದೀಯ ಅಂತ ನಂಗೆ ಅವತ್ತೇ ಗೊತ್ತಾಯ್ತು.''

``ಹಾಗೇನಿಲ್ಲ, ಸ್ನೇಹಿತರ ಥರ ಇದ್ದೆವು. ಆದರೆ ಅತ್ತೆ ಗಲಾಟೆ ಮಾಡಿ, ನಿನ್ನ ಮೇಲಿನ ಸಿಟ್ಟಿಗೆ ಆತುರದಲ್ಲಿ ಮದುವೆಯನ್ನು ಗೊತ್ತು ಮಾಡಿದರು. ನನಗೆ ಇಲ್ಲ ಅನ್ನಕ್ಕೆ ಆಗ್ಲಿಲ್ಲ..'' ಒಪ್ಕೊಂಡ್ಬಿಟ್ಟೆ

``ಪರವಾಗಿಲ್ಲ ಬಿಡು ಭುಜೀ. ಒಂಟಿಯಾಗಿ ಎಷ್ಟು ದಿನಾಂತ ಇರ್ತೀಯ..'' ಅವಳು ಹಾಗೆ ಹೇಳಿದರೂ, ಏನನ್ನೋ ಕಳೆದುಕೊಂಡ ಅನುಭವವಾಗಿತ್ತು. ``ಹೆಂಡತಿ, ಸಿಕ್ಕಿದ್ಲು ಅಂತ ನನ್ನನ್ನು ಮರೆತು ಬಿಡ್ಬೇಡ ಭುಜೀ..'' ಧ್ವನಿ ದಪ್ಪಗಾಗಿತ್ತು.

``ಏನು ಮಾತೂಂತ ಆಡ್ತೀಯ.. ನಿನ್ನನ್ನ ಮರೆಯೋಕೆ ಆಗುತ್ತಾ...ನೀನು ಬಾಲ್ಯದ ಗೆಳತಿ.. ಸದಾ ಕಾಲ ನಾವು ಸ್ನೇಹಿತರಂತೆ ಇರೋಣ...'' ಅವನಿಗೂ ಕಸಿವಿಸಿ ಆಗಿತ್ತು.

``ಒಂದ್ಮಾತನ್ನು ತಮಾಷೆ ಅಂತ ಕೇಳ್ತೀನಿ. ನನ್ನನ್ನ ನೀನು ಪ್ರೀತಿಸ್ಲೇ ಇಲ್ಲ ಅಲ್ವಾ?''

``ಏನೋ ಗೊತ್ತಿಲ್ಲ, ನೀನು ಆಸ್ಪದಾನೇ ಕೊಡ್ಲಿಲ್ಲ, ಮೆಡಿಕಲ್ ಕೋರ್ಸ್‌ಗೆ ಸೇರ್ಕೊಂಡ್ಮೇಲೆ ನೀನು ಬಹಳ ಬದಲಾಗಿಬಿಟ್ಟೆ. ಔಷಧಿ, ಮಾತ್ರೆ, ಇಂಜೆಕ್ಷನ್ನು, ಟೆಸ್ಟ್ ಅಂತ ನೀನು ಮಾತಾಡ್ತಿದ್ರೆ ನಂಗೆ ಭಯ ಆಗ್ತಿತ್ತು. ನಮ್ಮಿಬ್ಬರ ನಡುವೆ ಅಂತರ ಬೆಳೀತಾ ಹೋಯ್ತು. ನೀನು ಸ್ವಾರ್ಥಿ ಆಗ್ಬಿಟ್ಟೆ. ನನ್ನ ಬಗ್ಗೆ ನೀನು ಯೋಚಿಸ್ಲೇ ಇಲ್ಲ'' ಆಕ್ಷೇಪಿಸಿದ.

``ಹೌದೂಂತ ಕಾಣಿಸುತ್ತೆ.'' ತಗ್ಗಿದ ಧ್ವನಿಯಲ್ಲಿನುಡಿದಳು. ``ನನ್ನ ಆಲೋಚನೆ ಅಭಿಲಾಷೆಗಳೇ ಬೇರೆಯಾಗಿದ್ದವು. ಅದನ್ನು ಅರ್ಥ ಮಾಡಿಕೊಳ್ಳುವ ಸಂಗಾತಿ ಬೇಕು ಅಂತ ಅನ್ನಿಸಿತು. ಆ ಸಮಯದಲ್ಲೇ ಡಾ॥ ಗಿರೀಶ ನನಗೆ ಹತ್ತಿರವಾದದ್ದು.''

``ಡಾ॥ ಗಿರೀಶನ್ನ ನನಗೆ ಯಾವಾಗ ಪರಿಚಯ ಮಾಡಿಸಿಕೊಡ್ತೀಯ?''

``ಈಗ ಅವರು ಸೆಮಿನಾರ್‌ಗೆ ಅಂತ ಡೆಲ್ಲಿಗೆ ಹೋಗಿದಾರೆ.. ಇನ್ಯಾವಾಗ್ಲಾದ್ರೂ ಪರಿಚಯ ಮಾಡಿಸಿಕೊಡ್ತೀನಿ. ನಿನಗೆ ತೋರಿಸದೇ ಅವರನ್ನು ಮದುವೆಯಾಗ್ತೀನಾ?..''

``ಅಂದ್ರೇ.. ಮದುವೆಯಾಗೋದು ಅಂತ ತೀರ್ಮಾನಿಸಿಬಿಟ್ಟಿದೀಯಾ?..''

``ಹೂಂ. ಬೇರೆ ದಾರೀನೇ ಇಲ್ಲ, ಆದರೆ ಅಮ್ಮಂಗೆ, ಅಪ್ಪಂಗೆ ಹೇಗೆ ಹೇಳೋದು ಅಂತ ಯೋಚ್ನೇ. ನೀನೇ ಅಮ್ಮನ್ನ ಒಪ್ಪಿಸ್ಬೇಕು.''

``ಮುಂದಿನ ತಿಂಗಳಲ್ಲೇ ನನ್ನ ಮದುವೆ, ಮದುವೆ ಕಾರ್ಡನ್ನು ಕಳಿಸ್ತೀನಿ. ಅವರನ್ನು ಕರ್ಕೊಂಡು ಬಾ...ಆಗಲೇ ಅತ್ತೆಯ ಹತ್ರ ಮಾತಾಡ್ಬಹುದು..''

``ನಂಗೆ ಅಮ್ಮನ್ನ ಫೇಸ್ ಮಾಡುಕ್ಕೆ ಹೆದರಿಕೆ ಆಗುತ್ತೆ ಕಣೋ...''

``ಒಂದಲ್ಲ ಒಂದು ದಿನ ತಿಳಿಸ್ಲೇ ಬೇಕಲ್ವಾ! ನಾನಿದೀನಿ. ಹೆದರಬೇಡ..'' ಅವನು

ವಿಶ್ವಾಸವನ್ನು ಪ್ರಕಟಿಸಿ ಅವಳ ಕೈಗಳನ್ನು ಒತ್ತಿದ. ಅವನಿಗೆ ಕಾಣಿಸದಂತೆ, ತೊಟ್ಟಿಕ್ಕಿದ ಕಣ್ಣೀರಿನ ಹನಿಯನ್ನು ಒರೆಸಿಕೊಂಡಳು.

ಅವನು ಅಲ್ಲಿಂದ ಹೊರಟ. ಹೇಮಾ ಅವನೊಂದಿಗೆ, ಗೇಟಿನ ತನಕ ಬಂದಳು. ಅವನು ಕೈಯಾಡಿಸಿ, ರಸ್ತೆಗೆ ಇಳಿದ.. ಪಕ್ಕದ ತಿರುವಿನಲ್ಲಿ ಅವನು ತಿರುಗುವವರೆಗೂ ಅವನ ಬೆನ್ನನ್ನೇ ನೋಡುತ್ತಿದ್ದಳು. ಇನ್ನು ಮುಂದೆ ಭುಜೀ ಪಲ್ಲವಿಯ ಸ್ವತ್ತು.. ಮುಂಚಿನಂತೆ ಅವನೊಡನೆ ಸಲುಗೆಯಿಂದರಲು ಆಗುವುದಿಲ್ಲ, ಅಂತಂದುಕೊಂಡಾಗ, ಮನಸ್ಸಿಗೆ ಹಿತವಾಗಲಿಲ್ಲ.

* * *

ಮದುವೆಯ ಸಿದ್ಧತೆಗಳು ಸಾಗಿದ್ದವು. ಭುಜಂಗ ಪಲ್ಲವಿಗೆ ಹೇಳಿದ. "ನೀವು ಅಮ್ಮನೊಡನೆ ಹೋಗಿ, ನಿಮಗೆ ಎಂಥಾ ಸೀರೆಗಳು ಬೇಕೋ, ಯಾವ ಯಾವ ಒಡವೆಗಳು ಬೇಕೋ ಎಲ್ಲವನ್ನು ತೆಗೆದುಕೊಳ್ಳಿ" ಎಂದಿದ್ದ.

"ನನಗೆ ಏನೂ ಬೇಡ. ನನ್ನ ಹತ್ರ ಇರುವಷ್ಟೇ ಸಾಕು. ಹೇಳೋದನ್ನ ಮರೆತಿದ್ದೆ, ನನ್ನ ತಾಯಿಯ ಒಡವೆಗಳನ್ನು ಶರತ್, ಶ್ವೇತಾಳಿಗೆ ಕೊಟ್ಟಿದ್ನಂತೆ. ಅವುಗಳೆಲ್ಲಾ ಅಲ್ಲೇ ಇವೆ. ಶ್ವೇತಾ ಪಾಲಿಷ್ ಹಾಕಿಸ್ತಾಳೆ. ನಾನು ಕೆಲವು ಸೀರೆಗಳನ್ನು ಬಟ್ಟೆಗಳನ್ನು ತಂದಿದೀನಿ."

"ಇರಲಿ ಬಿಡಿ, ಅವು ನಿಮ್ಮ ತಾಯಿಯ ಕಡೆಯದು. ನಮ್ಮಮ್ಮನಿಗೂ ಒಡವೆಗಳನ್ನು ಮಾಡಿಸ್ಬೇಕು ಅಂತ ಆಸೆ.. ಈಗಲ್ಲದೇ ಇನ್ನ್ಯಾವಾಗ ಮಾಡಿಸ್ತಾಳೆ?"

"ಸರಿ, ನೋಡೋಣ. ಸುಮ್ಮನೇ ಈಗ ಯಾಕೆ ಖರ್ಚು ಮಾಡ್ಬೇಕು ಅಂತಾ?"

"ಸುಮ್ಮನೇ ಏನು ಬಂತ್ರೀ...ನಮ್ಮ ಮದುವೆ.. ನನ್ನ ಹೆಂಡತಿಯಾಗೋಳು ಭರ್ಜರಿಯಾಗಿ ಅಲಂಕರಿಸ್ಕೊಳ್ಬೇಕು ಅಂತ ನಂಗೆ ಆಸೆ ಇಲ್ವಾ?" ಸಶಬ್ಧವಾಗಿ ನಕ್ಕ.

"ನಾನು ಎಷ್ಟೇ ಅಲಂಕರಿಸ್ಕೊಂಡ್ರೂ ನನ್ನ ರೂಪ ಇಷ್ಟೇ.."ನಕ್ಕಳು.

"ನಂಗೊತ್ತು ನೀವು ನಿರಾಭರಣ ಸುಂದರಿ ಅಂತ. ಆದರೆ ಅಮ್ಮನ ಆಸೆಗೂ ಬೆಲೆ ಕೊಡ್ಬೇಕು. ನೀವು ಯಾಕೆ ಇಷ್ಟು ನಿರುತ್ಸಾಹಿಗಳಾಗಿದೀರಿ? ಏನು ಸಮಸ್ಯೆ!"

"ರಾಜೀವನ ತಂದೆ ತಾಯಿ ಊರು ಬಿಟ್ಟು ಬೇರೆಲ್ಲೋ ಹೋಗಿದಾರಂತೆ.. ಅವರ ಋಣವನ್ನು ತೀರಿಸುಕ್ಕೆ ಆಗ್ಲಿಲ್ಲವಲ್ಲ ಅಂತ ಬೇಸರ...ಈ ಮುಂಚೇನೇ ಬರ್ಬೇಕಾಗಿತ್ತು."

"ಅವರು ವಾಪಸ್ಸು ಖಂಡಿತಾ ಬಂದೇ ಬರ್ತಾರೆ. ಆಗ ಕೊಟ್ಟರಾಯ್ತು.. ನನಗೂ ಆ ವಿಷಯ ನೆನಪಿನಲ್ಲಿದೆ.. ಯಾವ ಊರಿಗೆ ಹೋಗಿದಾರೆ ಅಂತ ಗೊತ್ತಾದ್ರೆ ಅಲ್ಲಿಗೇ ಹೋಗಿ ಬರಬಹುದು.. ಶ್ವೇತಾಳ ಹತ್ರ ಮಾತಾಡ್ತೀನಿ. ಅವರು ಯಾವಾಗ ಬರ್ತಾರೆ?"

"ಒಂದು ವಾರ ಮುಂಚೇನೇ ಬಾ ಅಂತ ಹೇಳಿದೀನಿ. ಹೇಮಾ ಬರ್ತಾರಾ?"

"ಬಾ, ಬರದೇ ಇರ್ಬೇಡ ಅಂತ ಹೇಳಿದೀನಿ. ಬರಬಹುದು."

"ಅವರು ಯಾವಾಗ ಮದುವೆಯಾಗ್ತಾರೆ?"

"ಪರೀಕ್ಷೆ ಮುಗಿದ್ಮೇಲೆ, ಆದರೆ ಅತ್ತೆಗೆ ಹೇಗೆ ತಿಳಿಸೋದು ಅಂತ ಚಿಂತೆ.."

"ಇದಾರಲ್ಲ ನಿಮ್ಮ ಅತ್ತೆಯ ತಂಗಿ.. ಅವರಿಗೆ ಹೇಳಿ.. ಖಂಡಿತಾ ತಿಳಿಸ್ತಾರೆ.." ಧ್ವನಿಯಲ್ಲಿ ವ್ಯಂಗ್ಯ ಅಡಗಿತ್ತು. ತಟ್ಟನೆ ಅವನು ಅವಳ ಕಡೆ ನೋಡಿದ.

"ಈಗ್ಲೂ ನಿಮಗೆ ನಿಮ್ಮ ತಾಯಿಯ ಮೇಲೆ ಕೋಪಾನಾ?.."

"ಕೋಪಕ್ಕಿಂತ ಹೆಚ್ಚಾಗಿ ಒಂಥರಾ ಜಿಗುಪ್ಸೆ.. ಅವರು ನನ್ನ "ಬಾಡಿಗೆ ತಾಯಿ" ಅನ್ನುವ ಪದವೇ ನನ್ನನ್ನ ಕರಳಿಸುತ್ತೆ.. ಈ ತರಹದಲ್ಲಿಯಾದರೂ ನಾನ್ಯಾಕೆ ಹುಟ್ಟಬೇಕಾಗಿತ್ತು?"

"ನಂಗೋಸ್ಕರ ನೀವು ಹುಟ್ಟದೇ ಇದ್ದಿದ್ದರೆ, ನಾನು ಬ್ರಹ್ಮಚಾರಿಯಾಗಿರ್ಬೇಕಾಗಿತ್ತು.?"

"ಏನಿಲ್ಲ, ನೀವು ಬೇರೆಯಾರನ್ನಾದ್ರೂ ಮದುವೆಯಾಗಿರ್ತಿದ್ರಿ.."

"ಹಾಗೆ ಹೇಳ್ಬೇಡಿ, ಬ್ರಹ್ಮ, ನಂಗೆ ನಿಮಗೆ ಗಂಟು ಹಾಕಿದಾನೆ. ಇಲ್ದಿದ್ರೆ ನೀವು ಈ ಊರಿಗೆ ಬರ್ತಿದ್ರಾ?.. ನನಗಾಗಿ ಬಂದ ಚೈತ್ರ ನೀವು.." ಚೈತ್ರಾ ಅನ್ನೋ ಹೆಸರು ಚೆನ್ನಾಗಿದೆ."

"ಈಗ ನನಗೆ ಪಲ್ಲವಿ ಅನ್ನೋ ಹೆಸರೇ ಇಷ್ಟವಾಗಿದೆ. ನಾನು ನನ್ನ ಹೆಸರನ್ನು ಸಬ್‌ರಿಜಿಸ್ಟ್ರಾರರ ಆಫೀಸ್ನಲ್ಲಿ ಬದಲಾಯಿಸಿಕೊಳ್ತೀನಿ."

"ಆಗ್ಲಿ.. ಮದುವೆ ಆದ್ಮೇಲೆ, ಪಲ್ಲವಿ ಭುಜಂಗ್ ಅಂತ ಹೆಸರನ್ನು ಬದಲಾಯಿಸ್ಕೊಂಡ್ರಾಯ್ತು.. ನಾನು ಮುದ್ದಿಗೆ ನಿಮ್ಮನ್ನ ಪಲ್ಲೂ ಅಂತ ಕರೀಲಾ?"

"ನಾನು ನಿಮ್ಮನ್ನು "ಭುಜೀ" ಅಂತ ಕರೀಲಾ?" ಕಿಲಕಿಲನೆ ನಕ್ಕಳು.

"ಅಮ್ಮ ಅಜ್ಜಿಯ ಎದುರಿಗೆ ಬೇಡ.. ನಾವಿಬ್ಬರೇ ಇರುವಾಗ ಏನು ಬೇಕಾದ್ರೂ ಕರೀರಿ.. ಬಾರೋ.. ಹೋಗೋ.. ಅಂತ ಬೇಕಾದ್ರೂ ಅನ್ನಿ.." ಇಬ್ಬರೂ ಪಕಪಕನೆ ನಕ್ಕರು.

* * *

ಮದುವೆಯ ದಿನ ಸಮೀಪಿಸಿತ್ತು. ಆಹ್ವಾನಿತ ನೆಂಟರಿಷ್ಟರು ಕೆಲವರು ಬಂದು ಸೇರಿದ್ದರು. ಭುಜಂಗನ ಮನೆಯ ಮುಂದೆ ಭಾರಿ ಚಪ್ಪರವನ್ನೇ ಹಾಕಿಸಲಾಗಿತ್ತು. ಚಪ್ಪರದ ಪೂಜೆ, ದೇವರ ಸಮಾರಾಧನೆಯ ಕಲಾಪಗಳನ್ನು ಶಾಸ್ತ್ರಿಗಳು ಬಂದು ನೆರವೇರಿಸಿದ್ದರು. ಅಡಿಗೆ ಭಟ್ಟರು, ಘಮಘಮಿಸುವ ಪಕ್ವಾನ್ನಗಳನ್ನು ಮಾಡಿದ್ದರು. ಬಿಸಿ ಬಿಸಿ ಹೂರಣದ ಒಬ್ಬಟ್ಟು ಸಿದ್ಧವಾಗಿತ್ತು.

ವೈದೇಹಿಯ ಮನೆಯ ಮುಂದೆಯೂ ಚಪ್ಪರವನ್ನು ಹಾಕಿ ಸಿಂಗರಿಸಿದ್ದರು. ಎಲ್ಲರೂ ಒಂದೇ ಮನೆಯವರಾದುದರಿಂದ, ಎಲ್ಲರೂ ಒಟ್ಟಿಗೇ ಕುಳಿತು ಊಟ ಮಾಡುವುದೆಂದು ಮೊದಲೇ ನಿರ್ಧರಿಸಿದ್ದರು. ವೈದೇಹಿಯನ್ನು ಬಿಟ್ಟು ಬೇರೆ ಯಾರೂ ನೆಂಟರು ಮಂದಾಕಿನಿಗೆ ಇರಲಿಲ್ಲ. ಶ್ವೇತಾ ಎರಡು ದಿನಗಳ ಹಿಂದೆ ಬಂದಿದ್ದಳು.

ಭುಜಂಗ ಸಡಗರದಿಂದ ಎರಡೂ ಮನೆಗಳಿಗೆ ಓಡಾಡುತ್ತಿದ್ದ. ಅತ್ತೆಯನ್ನು ಆಗಾಗ್ಗೆ ವಿಚಾರಿಸುತ್ತಿದ್ದ, ಅವಳ ಮುಖದಲ್ಲಿ ನೋವಿನ ಗೆರೆಗಳಿದ್ದವು. ಅವಳು ಹೇಮಾಳನ್ನು ನಿರೀಕ್ಷಿಸುತ್ತಿರುವಳೆಂದು ಮುಖ ಹೇಳಿತ್ತು. ಅವನಿಗೂ ಮುಜುಗರವಾಗಿತ್ತು. ಪಲ್ಲವಿಯೊಡನೆ

ಮಾತನಾಡಬೇಕೆಂದುಕೊಂಡರೂ, ಮನಸ್ಸು ಅಳುಕಿತ್ತು. ಮನೆಗೆ ವಾಪಸ್ಸಾಗಿದ್ದ

"ಹೇಮಾ ಇಷ್ಟು ನಿಷ್ಕರುಣಿ ಅಂತ ನಾನಂದ್ಕೊಂಡಿರ್ಲಿಲ್ಲ.. ಬರ್ಲೇ ಇಲ್ಲನೋಡು. ಅತ್ತೆಯಂತು ಕೆಟ್ಟ ಮುಖ ಹಾಕ್ಕೊಂಡಿದಾರೆ.." ಭುಜಂಗ ತಾಯಿಗೆ ಹೇಳಿದ್ದ

"ಅವಳು ಬಂದರೆ, ಒಂದು ಹಗರಣವಾಗುವುದಂತೂ ನಿಜ. ನೆಂಟರೆಲ್ಲಾ ನೂರೆಂಟು ಮಾತಾಡ್ತಾರೆ. ಅವಳು ಬರಲಿ ಅಂತ ನೀನ್ಯಾಕೆ ಅಪೇಕ್ಷೆ ಪಡ್ತೀಯೋ ನಂಗೊತ್ತಿಲ್ಲ"

"ಅವಳು ತಪ್ಪು ಮಾಡಿದಾಳೆ. ಅವಳು ಈಗ ಬಂದರೆ, ಅತ್ತೆ ಅವಳನ್ನು ಕ್ಷಮಿಸಬಹುದು. ಇಲ್ದಿದ್ರೆ ಮುಂದೆಂದೂ ಈ ಅವಕಾಶ ಸಿಗುವುದಿಲ್ಲ"

"ಇನ್ನು, ಹೇಮಳ ಬಗ್ಗೆ ಚಿಂತೆ ಮಾಡುವುದನ್ನು ಬಿಡು. ಪಲ್ಲವಿ ಏನಂದ್ಕೊಳ್ತಾಳೆ? ತಾಯಿ ಅತ್ತ ಹೊರಟು ಹೋಗಿದ್ದಳು. ಊಟಕ್ಕೆ ಎಲೆ ಹಾಕುವ ಸಮಯವಾಗಿತ್ತು. ಅವನು ಬಾಗಿಲಿಗೆ ಬೆನ್ನು ಮಾಡಿ, ಕಂಭಕ್ಕೆ ಒರಗಿನಿಂತಿದ್ದ ಯಾರೋ ತನ್ನ ಹಿಂದೆ ಬಂದು ನಿಂತ ಭಾಸವಾಯಿತು. ಬಟ್ಟೆಗೆ ಹಾಕಿದ್ದ ಸೆಂಟಿನ ವಾಸನೆ ಮೂಗಿಗೆ ಬಡಿಯಿತು. ಸರ್ರನೆ ತಿರುಗಿದ. "ಹೇಮಾ!..ಉದ್ಗಾರ ಹೊರಟಿತ್ತು. ಸಂತಸ ತುಳುಕಿತ್ತು. ನಿರಾಳವಾದ ಉಸಿರು ಹೊರಬಿತ್ತು.

"ಅಮ್ಮಾ.. ಹೇಮ ಬಂದ್ಲು.." ತಾಯಿಯನ್ನು ಕರೆದು ಹೇಳಿದ..

"ಹೇಮಾ ಯಾವಾಗ ಬಂದ್ಯೆ? ಅಮ್ಮನ್ನ ಮಾತನಾಡ್ಸಿದ್ಯಾ!" ಕಾತುರದಿಂದ ಕೇಳಿದ.

"ಇಲ್ಲ ಕಣೋ.. ಸೀದಾ ಇಲ್ಲಿಗೇ ಬಂದೆ.. ಹೇಗೇ ಮಾತಾಡ್ಲೋ?"

"ಊಟದ ಸಮಯವಾಗಿದೆ. ಎಲ್ಲರೂ ಇಲ್ಲಿಗೇ ಬರ್ತಾರೆ. ನೀನೂ ಕೈಕಾಲು ತೊಳ್ಕೊಂಡು ಬಾ.. ನಾನು ಅತ್ತೇನ ಕರೆದು ಬರ್ತೀನಿ." ಉಟ್ಟಿದ್ದ ಬಿಳಿ ಪಂಚೆಯನ್ನು ಎತ್ತಿ ಕಟ್ಟಿದ.. ಹೇಮಾ ಅವನನ್ನೇ ಮೆಚ್ಚುಗೆಯಿಂದ ನೋಡಿದಳು. ತಲೆಗೆ ಎಣ್ಣೆ ಸ್ನಾನ ಮಾಡಿದ್ದುದರಿಂದ ತಲೆಗೂದಲು ಅಸ್ತವ್ಯಸ್ತವಾಗಿ ಹಾರಾಡುತ್ತಿದ್ದವು. ಹುಬ್ಬುಗಳ ನಡುವೆ ಇರಿಸಿದ್ದ ಕುಂಕುಮದ ಬೊಟ್ಟು ಮುಖಕ್ಕೆ ಶೋಭೆಯನ್ನು ತಂದಿತ್ತು. ಮದುಮಗನ ಕಳೆ ಏರಿತ್ತು.. ಅನಾಯಾಸವಾಗಿ ಪಲ್ಲವಿಗೆ ಇಂಥಾ ಸುಂದರ ಗಂಡ!.. ತಾನು ಬಿಟ್ಟು ಕೊಟ್ಟಿದ್ದು.. ಇಲ್ಲದಿದ್ರೆ ಎಲ್ಲಿ ಸಿಗ್ತಿದ್ದ?.. ತಾನೇನೋ ಭಾರೀ ಉಪಕಾರ ಮಾಡಿರುವೆ ಎನ್ನುವ ಭಾವನೆ ತುಂಬಿಕೊಂಡಿತು.

"ಅತ್ತೇ..ಅತ್ತೇ.." ಎಂದು ಎತ್ತರದ ಧ್ವನಿಯಲ್ಲಿ ಕೂಗುತ್ತಾ, ಭುಜಂಗ ಮನೆಯೊಳಕ್ಕೆ ಧಾವಿಸಿದ ವೈದೇಹಿ ಗಾಬರಿಗೊಂಡಳು. ಆಕೆಯ ಕೈ ಹಿಡಿದು ಸರ ಸರನೆ ತನ್ನ ಮನೆಗೆ ಕರೆತಂದ. "ಇದೇನೋ ಭುಜೀ.. ಯಾಕೆ ಹೀಗೆ ಎಳೀತಿದೀಯೋ?" ಅವಳು ಅರಚಿದ್ದಳು.

"ಸುಮ್ಮನೇ ಬನ್ನಿ ಅಪ್ಪಯ್ಯ ಕರೀತಿದಾರೆ.." ಎಂದು ಹೇಳಿ, ಒಳಗಿನ ರೂಮಿಗೆ ಕರೆದೊಯ್ದು ರೂಮಿನ ಬಾಗಿಲನ್ನು ಭದ್ರ ಪಡಿಸಿದ.

"ಯಾಕೋ ಭುಜೀ.. ಬಾಗಿಲನ್ನು ಯಾಕೆ ಹಾಕ್ದೆ? ನಿನ್ನ ಅಪ್ಪಯ್ಯ ಎಲ್ಲಿ!"

"ನನಗೆ ವರದಕ್ಷಿಣೆ ಎಷ್ಟು ಕೊಡ್ತೀರಿ ಅಂತ ನೀವು ಇದುವರ್ಗೂ ಹೇಳೇ ಇಲ್ಲ.. ಅಪ್ಪಯ್ಯ ಕೇಳು ಅಂತಂದ್ರು.. "ಮಾತಾಡಿ.." ಜಬರ್ದಸ್ತಿನಿಂದ ಕೇಳಿದ.

"ನೀವು ಕೇಳಲಿಲ್ಲ; ನಾನು ಹೇಳಲಿಲ್ಲ, ಇವತ್ಯಾಕೆ ಈ ಮಾತು? ಅವತ್ತೇ ಹೇಳಿರಲಿಲ್ವಾ!.. ನಮ್ಮದೇನಿದೆಯೋ ಅದೆಲ್ಲಾ ನಿನ್ನದೇ ಅಂತ.. ಇನ್ನೇನು ಬೇಕು ನಿಂಗೆ?"

"ಅದ್ಹೇಗೆ ಆಗುತ್ತೆ! ಅದೆಲ್ಲಾ ಹೇಮಂದು.. ಅವಳಿಗೆ ಸೇರಬೇಕಾದದ್ದು.. ಅವಳು ಬಂದು ಕೇಳಿದ್ರೆ ನಾನು ಏನು ಹೇಳ್ಲಿ? ನಂಗೆ ಅದೆಲ್ಲಾ ಬೇಡ." ತಲೆ ಒದರಿದ.

"ಬಂದು ಕೇಳುಕ್ಕೆ ಅದಕ್ಕೆಲ್ಲಿದೆ ಮುಖ? ಒಂದ್ವೇಳೆ ಬಂದ್ರೂ ನಾನು ಅವಳನ್ನು ನನ್ನ ಮನೆಗೆ ಸೇರಿಸುಲ್ಲ.. ಮಾತನ್ನೂ ಆಡಿಸುಲ್ಲ.." ಆ ರೂಮಿನ, ಇನ್ನೊಂದು ಬಾಗಿಲಿನ ಮರೆಯಲ್ಲಿ ನಿಂತಿದ್ದ ಹೇಮಾ ವೇಗವಾಗಿ ಬಂದು ತಾಯಿಯ ಕಾಲುಗಳನ್ನು ಹಿಡಿದಳು. ಅನಿರೀಕ್ಷಿತವಾದ್ದರಿಂದ ವೈದೇಹಿಗೆ ಬೀಳುವಂತಾಗಿತ್ತು. ಭುಜಂಗ ಹಿಡಿದುಕೊಂಡ.

"ಏಯ್...ಯಾರದು? ಬಿಡು ನನ್ನ ಕಾಲುಗಳನ್ನ," ಹಿಂದಕ್ಕೆ ಸರಿದು ಬಿಡಿಸಿಕೊಂಡಳು.

"ಅಮ್ಮಾ...ನಾನಮ್ಮ.. ಹೇಮಾ.." ಎನ್ನುತ್ತಾ ಹೇಮಾ ಎದ್ದು ನಿಂತಳು.

"ಹೇಮಾ? ಯಾವ ಹೇಮಾ?.. ನೀನ್ಯಾರೋ ನಂಗೊತ್ತಿಲ್ಲ ಹೋಗು" ಕೈ ಝಾಡಿಸಿದಳು.

"ಕೋಪವೇನಮ್ಮಾ...? ನನ್ನನ್ನ ಕ್ಷಮಿಸಮ್ಮ"

"ಭುಜೀ...ಯಾರೀ ಹುಡುಗಿ!...ಇಲ್ಯಾಕೆ ಬಂದ್ಲು ಕಳಿಸು ಇವಳನ್ನ.."

"ಅತ್ತೇ, ಇವಳನ್ನ ನನ್ನ ಮದುವೆಗೆ ಅಂತ ನಾನೇ ಆಹ್ವಾನ ಕೊಟ್ಟು ಕರೆಸ್ಕೊಂಡಿದೀನಿ. ಹಾಗೆಲ್ಲ ಮಾತಡ್ಬೇಡಿ.. ಇವಳಿಗೆ ಅವಮಾನವಾಗುತ್ತೆ."

"ಮಾನ ಇರುವಂಥ ಕೆಲಸ ಏನ್ಮಾಡಿದಾಳೆ ಅಂತ ಕೇಳು.. ಹೊಟ್ಟೆ ಉರಿಸಿದಾಳೆ."

"ಸುಮ್ನಿರಿ ಅತ್ತೇ...ನಾನೇ ಸುಮ್ಮನಿದೀನಂತೆ.. ಇವಳು ನನ್ನ ಪತ್ನಿಯಾಗದಿದ್ದರೇನು? ನಮ್ಮ ಸೋದರಿಕೆ ಸಂಬಂಧ ಇಲ್ವಾ!.. ನಾನು ಇವಳಿಗೆ ಆಪ್ತ ಸ್ನೇಹಿತ. ಮೊದಲ್ನಿಂದ ಜೊತೆ ಜೊತೆಯಲ್ಲಿ ಆಡಿದೀವಿ, ಬೆಳೆದಿದೀವಿ. ಈಗ ನಾನು ಇವಳನ್ನು ಈ ನೆಂಟಸ್ತಿಕೆಯಿಂದ ಹೇಗೆ ದೂರ ಮಾಡ್ಲೀ!.. ನನಗೆ ನಿಮ್ಮಿಂದ ಯಾವ ವರದಕ್ಷಿಣೆಯೂ ಬೇಡ. ವರೋಪಚಾರವೂ ಬೇಡ. ನಿಮ್ಮ ಆಸ್ತಿಯಂತೂ ಬೇಡವೇ ಬೇಡ.. ಆದರೆ, ಒಂದೇ ಒಂದು ಸಣ್ಣ ಉಡುಗೊರೆಯನ್ನು ಕೇಳ್ತೀನಿ. ಇಲ್ಲ ಅನ್ಬೇಡಿ. ನಂಗೋಸ್ಕರ ಇವಳನ್ನು ಕ್ಷಮಿಸಿ ಬಿಡಿ." ಅವನು ವೈದೇಹಿಯ ಎರಡೂ ಕೈಗಳನ್ನು ಹಿಡಿದು ಬೇಡಿಕೊಂಡ. ಕಣ್ಣುಗಳು ತುಂಬಿ ಬಂದಿದ್ದವು.

ವೈದೇಹಿ ಅವನ ಕೈಗಳನ್ನು ಬಿಡಿಸಿಕೊಂಡು ಮಗಳ ಕಡೆ ದುರು ದುರು ನೋಡಿದಳು. "ನೋಡೇ...ನೋಡು. ನೀನು ದ್ರೋಹ ಮಾಡಿದ್ರೂ.. ನಿನ್ನ ಪರವಾಗಿ, ನನ್ನ ಹತ್ರ ಕ್ಷಮೆ ಕೇಳ್ತಾನೆ. ಇಂಥಾ ಒಳ್ಳೇ ಹುಡುಗ ನಿನಗೆಲ್ಲಿ ಸಿಗ್ತಾನೆ?...ನಿನ್ನ ಬಾಳನ್ನು ನೀನೇ ಕೈಯಾರ ಹಾಳು ಮಾಡ್ಕೊಳ್ತಿದೀಯಲ್ಲ...ಇವನಷ್ಟು ಒಳ್ಳೆಯವನನ್ನು ನಾನೆಲ್ಲೂ ಕಂಡಿಲ್ಲ, ಎಲ್ಲೂ ಕೇಳಿಲ್ಲ. ಸರಿ. ನಿನಗೋಸ್ಕರ ಇವಳನ್ನು ಕ್ಷಮಿಸ್ತೀನಿ.. ಅಷ್ಟೆ." ಆದರೆ, ಇವಳ ಹತ್ರ ನನಗೆ ಯಾವ ಮಾತು ಕತೆ ಏನೂ ಬೇಡ.." ಭುಜಂಗನ ಕಡೆ ತಿರುಗಿ ನುಡಿದಳು.

"ಇಷ್ಟು ಕಟುಕರಾಗ್ಬೇಡಿ ಅತ್ತೇ.. ಇವಳು ನಿಮ್ಮ ಸ್ವಂತ ಮಗಳು.. ಚಿಕ್ಕವಯಸ್ನಲ್ಲಿ ಎಷ್ಟೋ

ತಪ್ಪುಗಳನ್ನು ಮಾಡಿದಾಳೆ. ಆಗೆಲ್ಲಾ ಕ್ಷಮಿಸಿಲ್ವಾ! ಆಮೇಲೆ ಮರೆತಿಲ್ವಾ?..."

"ಇದು ಬರೀ ತಪ್ಪಲ್ಲ. ನನಗೆ ಅವಮಾನ ಮಾಡಿದಾಳೆ."

"ಅವಮಾನ ಅಂತ ಯಾಕೆ ಅಂದ್ಕೋತೀರಿ ಅತ್ತೇ.. ಮುಂದಾಗುವ ಅನಾಹುತಗಳು ತಪ್ಪಿಸಿವೆ ಅಂತ ಅಂದ್ಕೊಳ್ಳಿ.. ನಮ್ಮಿಬ್ಬರಲ್ಲಿ ಹೊಂದಾಣಿಕೇನೇ ಇಲ್ದಿದ್ರೆ ನಿಮಗೆ ವ್ಯಥೆಯಾಗ್ತಿರಲಿಲ್ವಾ? ಈಗ ಈ ವಿಷಯ ಬಿಡಿ. ಊಟಕ್ಕೆ ಬನ್ನಿ. ಎಲೆ ಹಾಕಿದಾರೆ.. ಎಲ್ರೂ ಒಟ್ಟಿಗೇ ಊಟಕ್ಕೆ ಕೂತ್ಕೊಳ್ಳೋಣ."

"ನಂಗೆ ಊಟ ಬೇಡ, ನನ್ನ ಹೊಟ್ಟೆ ತುಂಬಿ ಹೋಗಿದೆ."

"ನೀವು ಊಟ ಮಾಡ್ದಿದ್ರೆ ಯಾರೂ ಮಾಡುಲ್ಲ ಅಷ್ಟೇ. ಮಾಡಿದ ಅಡಿಗೆಯೆಲ್ಲಾ ದಂಡವಾಗುತ್ತೆ. ನಡಿಯೇ ಹೇಮಾ..ನಂಗೊಂದು, ನಿಮ್ಮಮ್ಮಗೊಂದು ಸರಿಯಾದ ಜಾಗಾನ ನೋಡಿ ಎಲೆ ಹಿಡಿದಿಟ್ಕೋ.." ನಾನು ಅತ್ತೆ ಪಕ್ಕ ಕೂತ್ಕೋತೀನಿ..."

"ನಂಗೆ?.. ನಾನೆಲ್ಲಿ ಕೂತ್ಕೊಳ್ಲಿ...?" ಹೇಮಾ ತಾಯಿಯನ್ನು ಒಲಿಸಲು ನೋಡಿದಳು.

"ನೀನೂ ನಿಮ್ಮಮ್ಮನ ಪಕ್ಕ ಕೂತ್ಕೋ.. ಏನೂ ಹೆದರ್ಬೇಡ. ಅತ್ತೇ ಎಲ್ಲರ ಎದುರಿಗೆ ನಿನ್ನನ್ನ ಖಂಡಿತಾ ಬೈಯುಲ್ಲ.. ಅಲ್ವಾ ಅತ್ತೇ? ಎಲ್ಲರೆದುರಿಗೆ ಮಾತ್ರ ಬೈಯಬೇಡಿ."

"ಇಲ್ಲ ಭುಜೀ...ಅಮ್ಮ ನನ್ನನ್ನ ಬಾಯ್ತುಂಬಾ ಬೈಯಲಿ. ಅವಳ ಮನದ ವ್ಯಥೆಯೆಲ್ಲಾ ಹೊರಕ್ಕೆ ಬರಲಿ..ನಾನು ಅದಕ್ಕೇ ಲಾಯಖ್ಖು"

"ಸರಿ, ಹಾಗಾದ್ರೆ ಊಟ ಆದ್ಮೇಲೆ ಈ ಕಾರ್ಯಕ್ರಮವನ್ನು ನಿಮ್ಮ ಮನೇಲಿ ಇಟ್ಕೊಳ್ಳಿ. ಈಗ ಬೇಡ"

"ನೀನು ಜಾಣ ಕಣೋ.. ನನ್ನ ಮಗಳನ್ನು ಕರೆಸಿ, ನನ್ನೆದುರಿಗೆ ನಿಲ್ಲಿಸಿ ಬೈಬೇಡ ಅಂತೀಯಲ್ಲ, ನನ್ನ ಸಂಕಟ ನಿನಗೆ ಹೇಗೆ ಅರ್ಥವಾಗುತ್ತೇ...? ವೈದೇಹಿಯ ಕಣ್ಣುಗಳಲ್ಲಿ ನೀರು ತೊಟ್ಟಿಕ್ಕುವ ಮೊದಲೇ ಭುಜಂಗ ಆಕೆಯನ್ನು ಹೊರಕ್ಕೆ ಕರೆತಂದ. ಹೇಮಾಳೂ ಹಿಂಬಾಲಿಸಿದಳು.

ಊಟಕ್ಕೆ ಕುಳಿತಿದ್ದವರೆಲ್ಲಾ ವೈದೇಹಿಯನ್ನು ಹೇಮಾಳನ್ನು ನೋಡಿ ತಮ್ಮ ತಮ್ಮಲ್ಲೇ ಪಿಸು ಪಿಸು ಮಾತನ್ನಾಡಿಕೊಂಡರು. ವೈದೇಹಿಯ ಮುಖ ಚಿಕ್ಕದಾಗಿತ್ತು. ಭುಜಂಗ ಪಲ್ಲವಿಯ ಕಡೆ ನೋಡಿ ನಗೆ ಸೂಸಿದ. ಶ್ವೇತಾ ಗೆಳತಿಯ ಮೊಣಕ್ಕೆ ತಿವಿದಳು.

"ಚೈತ್ರಾ ಹುಶಾರಾಗಿರೇ.. ಹೇಮಾ, ಭುಜಂಗ ರೂಮಿನಲ್ಲಿ ಏನ್ಮಾಡ್ತಿದ್ರು?"

"ಆಂಟೀನೂ ಅಲ್ಲೇ ಇದ್ರಲ್ಲಾ, ನೀನು ಏನೇನೋ ಆಡ್ಬೇಡ."

"ಅವರು ಏಷ್ಟಾಗಲೀ, ಹೇಮಂಗೆ ತಾಯಿಯಲ್ವಾ!..ನಾಳೆ ರಾತ್ರಿ ನಿನ್ನ ಪತಿರಾಯ ಒಂಟಿಯಾಗಿ ಸಿಕ್ತಾನಲ್ಲ.. ಆಗ ಜಾದೂ ಮಾಡು.. ಅವನು ನಿನ್ನನ್ನಲ್ಲದೇ, ಹೇಮಳ ಜೊತೆ ಮಾತನ್ನಾಡಬಾರದು. ಹಾಗೆ ವಶ ಮಾಡ್ಕೋ.. "ಹೇಗೆ ಒಲಿಸ್ಕೋಬೇಕು ಅಂತ ಹೇಳಿ ಕೊಡ್ತೀನಿ."

"ಹೋಗೇ.. ಅದ್ನೆಲ್ಲಾ ಹೇಳಿಕೊಡ್ಬೇಕಾ.. ನಿನಗೇನು ಅನುಭವ ಆಗಿದೆ. ನಿನ್ನ ಮದುವೆ

ಆಗಿಲ್ಲವಲ್ಲ.."

"ಶರತ್‌ನ ನಾನು ಮದುವೆ ಆಗ್ಲೇ ಇಲ್ಲ. ಆದರೆ ಅವನಿಗೆ ನನ್ನನ್ನು ನಾನು ಒಪ್ಪಿಸಿಕೊಂಡಿದ್ದೆ. ಆ ರಸಮಯ ಗಳಿಗೆಗಳನ್ನು ಮರೆಯೋಕೆ ಆಗುಲ್ಲ ಕಣೇ.."

"ಈ ಸಮಯದಲ್ಲಿ ಅವನ ಮಾತ್ಯಾಕೆ? ಸುಮ್ನೇ ಊಟ ಮಾಡು." ಭುಜಂಗ ವೈದೇಹಿಯ ಪಕ್ಕದಲ್ಲಿ ಊಟಕ್ಕೆ ಕುಳಿತಿದ್ದುದನ್ನು ಗಮನಿಸಿದಳು. ಮನಸ್ಸು ವಿಚಲಿತಗೊಂಡಿತು. ಆಂಟಿಯ ಅಕ್ಕ ಪಕ್ಕದಲ್ಲಿ ಕುಳಿತಿದ್ದ ಹೇಮಾ, ಭುಜಂಗ ಮೌನವಾಗಿ ಊಟವನ್ನು ಮಾಡುತ್ತಿದ್ದರು. ಭುಜಂಗ ಆಗಾಗ್ಗೆ ಪಲ್ಲವಿಯ ಕಡೆ ನೋಡುತ್ತಿದ್ದ.

"ನಿನ್ನ ಗಂಡ ಸುಂದರ ಕಣೇ. ಪಂಚೆ ಷರಟ್ನಲ್ಲೂ ಎಷ್ಟು ಲಕ್ಷಣವಾಗಿ ಕಾಣ್ತೆದಾನೆ. ಶರತ್ ಇಷ್ಟು ಲಕ್ಷಣವಾಗಿರ್ಲ್ಲೇ ಇಲ್ಲ" ಶ್ವೇತ ಆ ಸ್ನೇಹಿತೆಗೆ ಹೇಳಿದಳು. ಪಲ್ಲವಿ ಅವನನ್ನೇ ಆಗಾಗ್ಗೆ ನೋಡಿದಳು. ಹೌದು, ಶ್ವೇತಾ ಹೇಳುವುದು ನಿಜ. ಭುಜಂಗ ಸುಂದರ ಯುವಕ. ಇವನನ್ನು ತನ್ನ ಮುಷ್ಠಿಯಲ್ಲೇ ಕಾಪಾಡಿಕೊಳ್ಳಬೇಕು. ಶ್ವೇತಾಳಂಥ, ಹೇಮಾಳಂಥ ಹುಡುಗಿಯರಿಂದ ಅವನು ದೂರವಿರುವಂತೆ ಮಾಡಬೇಕು ಎಂದುಕೊಂಡಳು.

ರುಚಿಯಾದ, ಬಿಸಿ ಊಟವನ್ನು ಎಲ್ಲರೂ ಸವಿದರು. ಒಬ್ಬಟ್ಟು, ಪಾಯಸದ ಭಾರಿ ಊಟವನ್ನು ಮುಗಿಸಿ ಕೈ ತೊಳೆಯಲು ಎದ್ದರು. ಭುಜಂಗ ಪಲ್ಲವಿಯ ಬಳಿಗೆ ಬಂದ... "ನೀವು ಸರಿಯಾಗಿ ಊಟ ಮಾಡ್ಲೇ ಇಲ್ಲ, ಏನು ಯೋಚಿಸ್ತಿದ್ರಿ?"

"ಏನೂ ಇಲ್ಲ, ಸರಿಯಾಗೇ ಊಟ ಮಾಡ್ದೆ"

"ಇಲ್ಲ ಭುಜಂಗ್.. ಅವಳಿಗೆ ಟೆನ್ಷನ್.. ಏನೋ ಭಯ..." ಶ್ವೇತಾ ನಕ್ಕಳು.

"ಭಯ ಯಾಕೆ? ಇಲ್ಲಿ ಇರೋರೆಲ್ಲಾ ನಮ್ಮವರೇ ಪರಿಚಿತರೇ, ಹೊಸಬರಲ್ಲ"

"ನಾಳೆಯಿಂದ ಹೊಸ ಜೀವನ ಪ್ರಾರಂಭವಾಗುತ್ತೆ. ಎಲ್ಲಾ ಹೊಸತು ಹೊಸತು. ಭಯ ಆಗ್ದೇ ಇರುತ್ತಾ?.. ಇವಳು ಒಂಥರಾ ಹುಡುಗಿ..." ಶ್ವೇತಾ ನುಡಿದಳು. ಪಲ್ಲವಿ ಅವಳ ಮೊಣಕೈ ತಿವಿದಳು.

"ನನಗೂ ಎಲ್ಲಾ ಹೊಸತೇ.. ನಾವು ಒಬ್ಬರನ್ನೊಬ್ಬರು ಈಗಾಗ್ಲೇ ಅರಿತಿದೀವಿ. ಏನೂ ಆತಂಕವಿಲ್ಲ ಅಲ್ವಾ ಪಲ್ಲವಿ?" ಅವನು ನೇರವಾಗಿ ಕೇಳಿದಾಗ, ಅವಳು ಕೆಂಪಾದಳು.. ಅವನು ಅವಳೊಬ್ಬಳಿಗೇ ಕಾಣುವಂತೆ ಕಣ್ಣು ಹೊಡೆದ. ಅವಳು ನಾಚಿ ತಲೆ ತಗ್ಗಿಸಿದಳು.

ಮಾರನೇ ದಿನ, ಬೆಳಗಿನ ಝಾವದಿಂದಲೇ, ಮದುವೆ ಮನೆಯ ಸಂಭ್ರಮದ ಗದ್ದಲ ಪ್ರಾರಂಭವಾಗಿತ್ತು. ಮಂಗಳ ವಾದ್ಯಗಳು, ಮಲಗಿದ್ದವರನ್ನು ಎಬ್ಬಿಸಿದವು. ಬಿಸಿ ಬಿಸಿ ಕಾಫಿಯನ್ನು ಅಡಿಗೆ ಭಟ್ಟರು, ಎಲ್ಲರಿಗೂ ತಂದು ಕೊಟ್ಟರು. ಅವರವರ ಮನೆಯಲ್ಲಿ ಮದು ಮಕ್ಕಳಿಗೆ ಆರತಿ ಎತ್ತಿ, ಎಣ್ಣೆ ಶಾಸ್ತ್ರವನ್ನು ಮಾಡಿ, ಮಂಗಳ ಸ್ನಾನವನ್ನು ಮಾಡಿಸಿದರು.

ಚೆನ್ನಾಗಿ ತಲೆಗೂದಲನ್ನು ಒಣಗಿಸಿಕೊಂಡ ಚೈತ್ರಾ, ಶ್ವೇತಾಳಿಗೆ ಓರಣವಾ[illegible] ಹೆಣೆಯುವಂತೆ ಹೇಳಿದಳು. ಅಲ್ಲಿಯೇ ಓಡಾಡುತ್ತಿದ್ದ ವೈದೇಹಿ ಬಂದಳು.

"ನೀನು ಸಿಕ್ಕನ್ನು ಬಿಡಿಸಿ ಚೆನ್ನಾಗಿ ಬಾಚು. ನಾನು ಐದು ಕಾಲಿನ ಜಡೆಯನ್ನು ಹೆಣೆದು ದುಂಡು ಮಲ್ಲಿಗೆಯ ಕಟ್ಟಿದ ಹೂವನ್ನು ಸುತ್ತುತ್ತೀನಿ. ಕುಚ್ಚು ಹಾಕಿ, ಮುಡಿ ತುಂಬಾ ಹೂವನ್ನು ಮುಡಿಸ್ತೀನಿ. ಕುಂಕುಮವನ್ನು ಕಲೆಸಿ ಬೊಟ್ಟನ್ನಿಟ್ಟು ಚಂದ್ರದ ತಿಲಕವನ್ನು ಇಡ್ತೀನಿ. ಆಗಲೇ ಮದುಮಗಳ ಕಳೆ ಮುಖಕ್ಕೆ ಏರೋದು. ಅಳ್ಳಕವಾಗಿ ಜಡೆ ಹಾಕಿದರೆ, ನಿಮಿಷಕ್ಕೆ ಬಿಚ್ಚಿ ಹೋಗುತ್ತೆ" ಪಲ್ಲವಿ, ಶ್ವೇತಾಳ ಕಡೆ ನೋಡಿ ಕನಿಕರದಿಂದ ನಕ್ಕಳು.

"ಹಾಗಾದ್ರೆ, ನಂಗೂ ಐದು ಕಾಲಿನ ಜಡೆಯನ್ನು ಹಾಕ್ತೀರಾ!..ನಾನೆಂದೂ ಹೆಣೆದುಕೊಂಡಿಲ್ಲ..."ಶ್ವೇತಾ ಆಸೆಯನ್ನು ತೋರಿದಳು.

"ಹೂಂ, ಅದಕ್ಕೇನಂತೆ ಹಾಕ್ತೀನಿ? ಎನ್ನುತ್ತಾ ಪಲ್ಲವಿಯನ್ನು ತನ್ನ ಮುಂದೆ ಕೂರಿಸಿಕೊಂಡಳು. ಮುಂದಲೆಯನ್ನು ಚೆನ್ನಾಗಿ ತೀಡಿ ಬಾಚಿ, ಬಿಗಿಯಾಗಿ ಐದು ಕಾಲಿನ ಜಡೆಯನ್ನು ಹಾಕಿದಳು. ಕುಚ್ಚನ್ನು ಸೇರಿಸಿ ಬಿಗಿಯಾಗಿ ಕಟ್ಟಿದಳು. ಪಲ್ಲವಿ ಕೈ ಗನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಂಡಳು. ಅವಳಿಗೇ ಗುರುತು ಸಿಗದ ಹಾಗೆ ಅವಳ ಮುಖದ ಅಂದ ಬದಲಾಗಿತ್ತು. ಭುಜಂಗ ತನ್ನನ್ನು ಗುರುತಿಸುವುದು ಕಷ್ಟ ಅಂತಂದುಕೊಂಡಾಗ ಕಿರುನಗೆ ಮೂಡಿತು...ಮೋಜೆನಿಸಿತು.

"ಯಾಕಮ್ಮಾ ನಗ್ತಿದೀಯಾ!...ಭುಜಂಗ ನಿನ್ನನ್ನ ಮೆಚ್ಚಿದ್ದಾನೆ. ಈ ಅಲಂಕಾರದಲ್ಲಿ ಇನ್ನೂ ಮೆಚ್ತಾನೆ. ಅವನು ತುಂಬಾ ಒಳ್ಳೆಯ ಹುಡುಗ. ಅವನನ್ನು ಸುಖವಾಗಿಟ್ಟುಕೊಳ್ಳುವುದು ನಿನ್ನ ಧರ್ಮ. ಅವನ ಬೇಕು ಬೇಡಗಳನ್ನು, ಆಸೆಗಳನ್ನು ನಿರಾಕರಿಸಬೇಡ. ಅವನು ಮಂಕಾಗಿ ಬಿಡ್ತಾನೆ.." ಪಲ್ಲವಿ ಗಂಭೀರಳಾದಳು. ಕನ್ನಡಿಯನ್ನು ಓರೆ ಮಾಡಿ ವೈದೇಹಿಯ ಕಡೆ ನೋಡಿದಳು. ಅವಳ ಕಣ್ಣಾಲಿಗಳು ತುಂಬಿದ್ದವು.. ಪಲ್ಲವಿಯ ಅಲಂಕಾರವನ್ನು ಮುಗಿಸಿ ಎದ್ದಳು. ಅವಳ ಮನದ ತುಂಬಾ ವ್ಯಥೆಯಿದೆ ಎಂದು ಅರ್ಥವಾಗಿತ್ತು.

"ಶ್ವೇತಾ.. ನೀನು ಮಂದಾಕಿನಿಯ ಹತ್ರ ಜಡೆ ಹಾಕಿಸ್ಕೋ.. ನನಗೆ ಇನ್ನೂ ಬೇಕಾದಷ್ಟು ಕೆಲಸಗಳಿವೆ" ಎಂದು ಹೇಳಿ ಒಳಗೆಲ್ಲೋ ಹೊರಟು ಹೋದಳು. ಶ್ವೇತಾ ಪೆಚ್ಚು ನಗೆಯನ್ನು ನಕ್ಕು ತಾನೇ ಜಡೆ ಹೆಣೆದುಕೊಂಡು ಹೂ ಮುಡಿದಳು.

"ನಿಂಗೆ ಈ ಅಲಂಕಾರ ಒಪ್ತಿಲ್ಲ ಕಣೇ ಚೈತ್ರಾ.. ಆಂಟಿ ಬೇಕು ಅಂತ ಹೀಗೆ ಅಲಂಕಾರ ಮಾಡಿದಾರೆ. ಭುಜಂಗ ನಿನ್ನನ್ನ ಮೆಚ್ಚದೇ ಇರಲಿ ಅಂತ" ಪಿಸುದನಿಯಲ್ಲಿ ಶ್ವೇತಾ ನುಡಿದಾಗ, ಪಲ್ಲವಿಗೂ, ಇರಬಹುದೇ ಎಂಬ ಅನುಮಾನ ಕಾಡಿತ್ತು. ಮುಖದ ಅಲಂಕಾರವನ್ನು ತಾನೇ ದೂರಿಕೊಂಡಳು.

ಪಲ್ಲವಿ, ಹೊಸ ರೇಶ್ಮೆ ಸೀರೆಯನ್ನುಟ್ಟು ಅದಕ್ಕೊಪ್ಪುವ ರವಿಕೆಯನ್ನು ತೊಟ್ಟಳು. ಶ್ವೇತಾ, ಪಾಲಿಷ್ ಮಾಡಿಸಿ ತಂದಿದ್ದ ಒಡವೆಗಳಲ್ಲಿ ತನಗೆ ಪ್ರಿಯವಾದ ಮುತ್ತಿನ ನೆಕ್ಲೇಸನ್ನು ತೊಟ್ಟು ಮುತ್ತಿನ ಓಲೆ, ಝುಮುಕಿಗಳನ್ನು ಧರಿಸಿದಳು. ತಾಯಿಯ ನೆನಪು ಒತ್ತಿಕೊಂಡು ಬಂದಿತ್ತು.

"ಥೇಟ್ ಪಟ್ಟದ ಹೆಣ್ಣು ಬೊಂಬೆ! ದಸರಾ ಹಬ್ಬದಲ್ಲಿ ಬೊಂಬೆಗೆ ಅಲಂಕಾರ ಮಾಡಿರ್ತಾರಲ್ಲ ಹಾಗಿದೆ. ಭುಜಂಗ ನಿನ್ನನ್ನ ನೋಡಿ ಹೆದರಿ, ನನ್ನ ಬಳಿಗೆ ಬರ್ತಾನೆ ಅಷ್ಟೇ."

"ಅಯ್ಯೋ ಬಿಡೇ.. ನನ್ನ ಅಲಂಕಾರ ಹೇಗಿದ್ರೇನು! ಭುಜಂಗ ನನ್ನನ್ನು ಮೆಚ್ಚಿದ್ದಾರೆ. ನಾನು ಹೇಗೇ ಇದ್ದರೂ ಅವರಿಗೆ ಇಷ್ಟವಾದವಳು.. ನಾನು.." ಎದೆ ತಟ್ಟಿ ಹೇಳಿಕೊಂಡಳು.

"ಅಷ್ಟು ಜಂಭ ಪಡ್ಬೇಡ...ಆ ಮಾಟಗಾತಿ ಬಿಡ್ಬೇಕಲ್ಲ.. ಭುಜೀ.. ಭುಜೀ ಅಂತ ಅವನ ನಿನ್ನ ಮಧ್ಯೆ ಬರ್ತಾಳೆ...ನೋಡ್ತಿರು.. ನೀನು ಕೇರ್‌ಫುಲ್ ಆಗಿರ್ಬೇಕು.."

"ಭುಜಂಗ ಅಂಥೋರಲ್ಲ, ನನಗೆ ನಂಬಿಕೆ ಇದೆ..."

"ನಿನ್ನ ನಂಬಿಕೆಗೆ ವಂದನೆ...ಆದರೆ ನನ್ನ ಮಾತನ್ನು ನೆನಪಿನಲ್ಲಿಟ್ಕೋ...ಭುಜಂಗನ್ನ ನಿನ್ನ ಮುಷ್ಠೀಲಿ ಇಟ್ಕೋ...ಎಲ್ಲಾದಕ್ಕೂ ಸಹಕರಿಸು. ನಿನ್ನನ್ನು ಬಿಟ್ಟು ಅತ್ತಿತ್ತ ಹೋಗುಲ್ಲ"

"ಸಾಕು ನಿನ್ನ ಉಪದೇಶ. ಇದನ್ನೆಲ್ಲಾ ನಿನ್ನ ಮದುವೆ ಸಮಯಕ್ಕೆ ಇಟ್ಕೋ.."

"ನಾನು ಮದುವೆನೇ ಆಗ್ಬಾರ್ದು ಅಂತ ಅಂದ್ಕೊಂಡಿದೀನಿ.."

"ಶರತ್‌ನ ಮರೆಯುಕ್ಕೆ ಆಗ್ತಿಲ್ವಾ?.."

"ಅದಕ್ಕಿಂತ ಹೆಚ್ಚಾಗಿ ನಾನು ಅಬಾರ್ಷನ್ ಮಾಡಿಸ್ಕೊಂಡಿದೀನಲ್ಲ, ಅದನ್ನ ಮರೆಯುಕ್ಕೆ ಆಗ್ತಿಲ್ಲ. ನಾನು ಪಾಪಿ ಕಣೇ.. ಆ ಮಗುವಿನ ತಪ್ಪೇನಿತ್ತು ನೀನೇ ಹೇಳು. ಅದೇ ಕೊರಗು ನಂಗೆ ಹಗಲೂ ರಾತ್ರಿ ಕಾಡುತ್ತೆ."

"ಹೋಗ್ಲಿ ಬಿಡು. ಈಗ ಅದನ್ನೆಲ್ಲ ನೆನೆಸ್ಕೊಂಡು ವ್ಯಥೆ ಪಟ್ಟರೆ ಏನು ಉಪಯೋಗ?.. ನಾನು ಎಲ್ಲವನ್ನು ಮರೆತು ಮದುವೆ ಆಗ್ತಿಲ್ವಾ?.."

"ನಿನ್ನ ವಿಷಯ ಬೇರೆ.." ಎಂದು ಹೇಳಿ ಶ್ವೇತಾ ಕಣ್ಣುಗಳನ್ನೊರೆಸಿಕೊಂಡಳು."

"ಅತ್ತಿಗೇ ನಿಮ್ಮ ಅಲಂಕಾರ ಮುಗಿದಿದ್ರೆ ತಿಂಡಿ ತಿನ್ನೋಕೆ ಬರ್ಬೇಕಂತೆ.." ವಾಣಿ ಬಂದು ಕರೆದಳು. ಇಬ್ಬರೂ ರೂಮಿನಿಂದ ಹೊರ ಬಂದರು. ಊಟದ ಹಾಲಿನಲ್ಲಿ ಯಾರೊಡನೆಯೋ ಮಾತನಾಡುತ್ತಾ ನಿಂತಿದ್ದ ಭುಜಂಗ ಹತ್ತಿರ ಬಂದ. ಪಲ್ಲವಿ ತಲೆ ತಗ್ಗಿಸಿದಳು.

"ಶ್ವೇತಾ, ನನ್ನ ಹುಡುಗಿಗೆ ಇಷ್ಟೊಂದು ಅಲಂಕಾರ ಯಾಕೆ ಮಾಡಿದೀರಿ... ಜಾಸ್ತಿಯಾಯ್ತಲ್ವಾ?"

"ನಾನಲ್ಲ ಮಾಡಿದ್ದು, ನಿಮ್ಮ ಅತ್ತೆ.. ಅವರಿಗೆ ತಮ್ಮ ಮದುವೆಯ ದಿನಗಳು ನೆನಪಿಗೆ ಬಂದಿರ್ಬೇಕು." ಅವಳು ನಕ್ಕಳು. ಭುಜಂಗ ಪೆಚ್ಚಾದ..

"ಹೌದಾ! ಹೋಗ್ಲಿಬಿಡಿ..." ಎಂದಷ್ಟೇ ನುಡಿದ. ಹೇಮಾಳಿಗೆ ಮದುಮಗಳ ಅಲಂಕಾರವನ್ನು ಹೀಗೇ ಮಾಡುವ ಆಸೆಯನ್ನು ಅತ್ತೆ ಇಟ್ಟುಕೊಂಡಿರಬಹುದೆಂದುಕೊಂಡ. ಅಷ್ಟರಲ್ಲಿ ಅಲ್ಲಿಗೆ ಹೇಮಾ ಬಂದಳು." ಭುಜೀ..ಭುಜೀ..ಇಲ್ಬಾ" ಎಂದು ಅವನ ಕೈ ಹಿಡಿದು ಎಳೆದಳು. "ಕೈ ಬಿಡು ಹೇಮಾ ಬರ್ತೀನಿ.. ಎಲ್ಲಿಗೆ ಯಾಕೆ ಅಂತ ಹೇಳು.." ಸಿಡುಕಿದ.

"ನಾನು ನಿನ್ನನ್ನೇನೂ ತಿಂದು ಬಿಡುಲ್ಲ. ನೀವೂ ಬನ್ರೀ ಪಲ್ಲವೀ" ಎನ್ನುತ್ತಾ ಒಳಗಿನ ರೂಮಿಗೆ ಕರೆದೊಯ್ದಳು. ಶ್ವೇತಾಳು ಅಲ್ಲಿಗೆ ನಡೆದಳು. ಹೇಮಾ ಎರಡು ಚಿಕ್ಕ ಚಿಕ್ಕ ಡಬ್ಬಿಯನ್ನು

ತೆಗೆದಳು.

"ಇದು ನಿನಗೆ.. ಇದು ಇವರಿಗೆ.." ಎಂದು ಹೇಳಿ ಡಬ್ಬಿಯ ಮುಚ್ಚಳವನ್ನು ತೆರೆದಳು. ಒಂದು ಬಿಳಿ ಹರಳಿನ ಉಂಗುರ. ಹರಳು ಹೊಳೆಯುತ್ತಿತ್ತು. ಇನ್ನೊಂದು ಬರೀ ಚಿನ್ನದ ಉಂಗುರ. 'ಬಿ' ಎಂಬ ಅಕ್ಷರವನ್ನು ಕೆತ್ತಿಸಲಾಗಿತ್ತು. ಇದು ನಿನಗೆ ಎನ್ನುತ್ತಾ ಅವನ ಕೈಯ ಬೆರಳಿಗೆ ತಾನೇ ತೊಡಿಸಿದಳು.

"ಇದೆಲ್ಲಾ ಯಾಕೇ ಹೇಮಾ.. ಸುಮ್ಮನೇ ಖರ್ಚು.." ಸಂಕೋಚಗೊಂಡಿದ್ದ

"ಏನು ಖರ್ಚು? ನಾನು ವಸೂಲು ಮಾಡ್ತೀನಿ ಬಿಡು.. ನಿಮ್ಮಿಬ್ಬರ ದಾಂಪತ್ಯ ಜೀವನ ಚೆನ್ನಾಗಿರಲಿ ಅಂತ ಹಾರೈಸ್ತೀನಿ.." ಎನ್ನುತ್ತಾ ಇನ್ನೊಂದು ಡಬ್ಬಿಯನ್ನು ಅವನ ಕೈಗೆ ಇತ್ತಳು. ಅವನು ಪಲ್ಲವಿಯ ಎಡಗೈಯ ಉಂಗುರದ ಬೆರಳಿಗೆ ಹರಳಿನ ಉಂಗುರವನ್ನು ತೊಡಿಸಿದ. ಅವಳನ್ನೇ ನೋಡುತ್ತಾ ಕೈಯನ್ನು ಹಿಡಿದಿದ್ದ. ಅವಳ ಕೈ ನಡುಗಿತ್ತು. ಅವನ ಕಡೆ ನೋಡಲಾಗಿರಲಿಲ್ಲ "ಇಲ್ಲಿ ನಾನೂ ಇದೀನಿ. ಶ್ವೇತಾನೂ ಇದಾರೆ.. ಕೈ ಬಿಡು" ಹೇಮಾ ರೇಗಿಸಿದಳು. ಅವನು ಕೈ ಬಿಟ್ಟ. ಪಲ್ಲವಿ ನಾಚಿದ್ದಳು. ಅವನಿಂದ ದೂರ ಸರಿದು ನಿಂತಳು.

"ಪಲ್ಲವೀ.. ಯಾರು ನಿಮಗೆ ಈ ಅಲಂಕಾರಾನ ಮಾಡಿದ್ದು!..ಭುಜಗೆ ಖಂಡಿತಾ ಇಷ್ಟ ಆಗುಲ್ಲ ಅಲ್ವೇನೋ!... ಅಲಂಕಾರ ಮಾಡಿದ ದಸರಾ ಬೊಂಬೆ ಥರ ಕಾಣ್ತೀರಿ."

"ಹಾಗೇನಿಲ್ಲ ಚೆನ್ನಾಗಿದೆ. ಅತ್ತೆ ಅಂತೆ ಅಲಂಕಾರ ಮಾಡಿದ್ದು.." ಭುಜಂಗನೆಂದ.

"ಸರಿ ಬಿಡು.. ನನಗೆ ಮಾಡಬೇಕಾಗಿದ್ದ ಅಲಂಕಾರ ಇದು. ನಾನು ಬಚಾವಾದೆ.." ಎನ್ನುತ್ತಾ ಅವನ ಕಡೆ ನೋಡಿ ಕಣ್ಣು ಹೊಡೆದು ನಕ್ಕಳು. ಶ್ವೇತಾ ಪಲ್ಲವಿಯ ಮೊಣಕ್ಕೆ ತಿವಿದಳು. "ನಾನು ತಿಂಡಿ ಆಗ್ತಿದ್ದ ಹಾಗೇ ವಾಪಸ್ಸು ಹೊರಟು ಬಿಡ್ತೀನಿ.. ಮತ್ತೆ ಎಂದು ಬರ್ತೀನೋ ಗೊತ್ತಿಲ್ಲ.."

"ಇನ್ನು ನಮ್ಮಿಬ್ಬರ ಮದುವೆ ಕಾರ್ಯವೇ ಆಗಿಲ್ಲವಲ್ಲೇ.. ಹೊರಟು ಬಿಟ್ಯಾ?"

"ನೀನು ಮಾಡ್ಕೋ.. ಅದನ್ನೆಲ್ಲಾ ನೋಡ್ತಾ ಕೂತ್ಕೊಳ್ಳೋಕೆ ನಂಗೆ ಸಮಯವಿಲ್ಲ, ಹ್ಯಾಪೀ ಮ್ಯಾರೀಡ್ ಲೈಫ್" ಎಂದು ಹೇಳಿ ಅವನ ಕೈಗಳನ್ನು ಕುಲುಕಿದಳು. ಪಲ್ಲವಿ ಮೂಕ ಪ್ರೇಕ್ಷಕಳಂತೆ ಸುಮ್ಮನೇ ನಿಂತಿದ್ದಳು. ಹೇಮಾ ಹೊರಕ್ಕೆ ಹೊರಟು ಹೋಗಿದ್ದಳು. ಮನೆಗೇ ತಿಂಡಿಯನ್ನು ತರಿಸಿಕೊಂಡು ತಿಂದು, ಕಾಫಿಯನ್ನು ಕುಡಿದು ಹೊರಟು ಬಿಟ್ಟಳು.

ಭುಜಂಗ ಮಂಟಪದ ಕಡೆಗೆ ನಡೆದ. ಪುರೋಹಿತರು ಅವನನ್ನು ಬೇರೊಂದು ರೂಮಿಗೆ ಕರೆದೊಯ್ದರು. ಜರತಾರಿ ಅಂಚಿನ ರೇಶ್ಮೆಯ ಮಗುಟವನ್ನು ಕಚ್ಚೆ ಹಾಕಿ ಉಡಿಸಿದರು. ಮೇಲೊಂದು ರೇಶ್ಮೆಯ ಶಲ್ಯವನ್ನು ಹೊದಿಸಿದರು. ತಲೆಗೆ, ಸುತ್ತಿದ್ದ ಪೇಟವನ್ನು ಇಟ್ಟು ಬಾಸಿಂಗವನ್ನು ಕಟ್ಟಿದರು. ಅವನನ್ನು ಹಸೆ ಮಣೆಯ ಬಳಿಗೆ ಕರೆ ತಂದರು.

"ಮದು ಮಗ ರೆಡಿ.. ಮಂಗಳವಾದ್ಯ ನುಡಿಸಿ...ಎಲ್ಲರೂ ಮಂಟಪದ ಬಳಿಗೆ ಬರಲಿ" ಪುರೋಹಿತರು ಜೋರಾಗಿ ನುಡಿದರು. ಶ್ವೇತಾ ಓಡಿ ಬಂದು ಪಲ್ಲವಿಯನ್ನು ತಬ್ಬಿಕೊಂಡಳು.

"ಭುಜಂಗ, ರಾಜಕುಮಾರನ ಥರ ಕಾಣ್ತಾ ಇದಾನೆ ಕಣೇ. ನೋಡು ಬಾ..." ಉದ್ವೇಗದಿಂದ

ನುಡಿದು ಅವಳನ್ನು ರೂಮಿನ ಬಾಗಿಲಿಗೆ ಕರೆತಂದಳು.

"ಹಾಗೆಲ್ಲಾ ಮದುಮಗನನ್ನು ಕದ್ದು ನೋಡ್ಬಾರ್ದು. ದೃಷ್ಟಿಯಾಗುತ್ತೆ.." ಪಲ್ಲವಿ ಬೆಚ್ಚಿ ಹಿಂದೆ ಸರಿದಳು. "ತಗೋ.. ಈ ಭಾರೀ ಸೀರೇನ ಉಟ್ಕೋ.. ಬಾಸಿಂಗವನ್ನು ಕಟ್ಕೊಂಡು, ಗೌರಿ ಪೂಜೆಗೆ ಕುಳಿತ್ಕೋ.. ಆಮೇಲೆ ಅಂತರ ಪಟವನ್ನು ಸರಿಸಿದ್ಮೇಲೇನೇ ಗಂಡಿನ ಮುಖವನ್ನು ನೋಡ್ಬೇಕು ತಿಳೀತಾ!" ಆ ಹಿರಿಯ ಹೆಂಗಸು ಹೇಳಿದಾಗ ಶ್ವೇತಾ ಕಿಲಕಿಲನೆ ನಕ್ಕಳು. ಪಲ್ಲವಿ ನಾಚಿಕೆಯಿಂದ ಕೆಂಪಾಗಿದ್ದಳು. ಶರೀರ ಕಂಪಿಸಿತ್ತು.

"ಯಾಕೇ ನಗ್ತೀಯಾ ಹುಡುಗಿ!.. ನಾನೇನು ತಮಾಷೆ ಹೇಳಿದ್ನಾ?..ಬೇಗ ಬೇಗ ಈ ಸೀರೇನ ಉಡಿಸಿ ದೇವರ ಮನೆಗೆ ಕರ್ಕೊಂಡು ಬಾ.. ಹೊತ್ತಾಗ್ತಾ ಇದೆ."

"ಈ ಸೀರೇನ ಯಾರು ಕೊಟ್ರು!" ಕಷ್ಟ ಪಟ್ಟು ಕೇಳಿದ್ಲು.."

"ನಿನ್ನ ಅಣ್ಣ ಚಿದಾನಂದ ಕೊಟ್ಟ.." ಎಂದು ಹೇಳಿ ಆ ಹೆಂಗಸು ಹೊರಟಳು. ಪಲ್ಲವಿ ಕೈಲಿದ್ದ ಸೀರೆಯನ್ನೇ ದಿಟ್ಟಿಸಿದಳು.. ಉಡಬೇಕೋ ಬೇಡವೋ ಅಂತ ಒಂದು ಗಳಿಗೆ ಚಿಂತಿಸಿದಳು.

"ಏನು ಅನುಮಾನಿಸ್ತಾ ಇದೀಯೇ ಚೈತ್ರಾ. ಬೇಗ ಉಟ್ಕೋ..ಇಲ್ದಿದ್ರೆ ಮತ್ತೆ ಆ ಆಂಟಿ ಬಂದು ನನ್ನನ್ನ ಬೈತಾರೆ.. ನಿನ್ನಿಂದ ನಂಗೆ ಬೈಗುಳ.." ಶ್ವೇತಾ ಅವಸರಿಸಿದಳು.

"ಚಿದಾನಂದನ ಹತ್ರ ಹಣವಿರಲಿಲ್ಲ. ಇಷ್ಟು ಭಾರಿ ಸೀರೇನ ಯಾಕೆ ತಂದನೋ?.."

"ಅದೆಲ್ಲಾ ನಿಂಗ್ಯಾಕೆ?.. ಶರತ್ ಜೈಲಿಗೆ ಹೋಗದೇ ಇದ್ದಿದ್ರೆ..." ಎಂದು ಹೇಳಿ ಅಷ್ಟಕ್ಕೇ ಮಾತನ್ನು ನಿಲ್ಲಿಸಿದಳು.

"ಅಮ್ಮ ನೆನಪಿಗೆ ಬರ್ತಾ ಇದಾಳೆ ಕಣೇ.. ಅವಳು ಇರ್ಬೇಕಾಗಿತ್ತು.."

"ಅವರು ಇದ್ದಿದ್ರೆ, ನೀನು ಇಲ್ಲಿಗೆ ಬರುತ್ತಲೂ ಇರ್ಲಿಲ್ಲ, ಭುಜಂಗ ನಿನ್ನನ್ನ ಪ್ರೀತಿಸಿ ಮದುವೆಯಾಗ್ತಿರ್ಲಿಲ್ಲ. ಹೆಚ್ಚು ಯೋಚಿಸ್ಬೇಡ.. ಬೇಗ ರೆಡಿಯಾಗು.." ಎಂದು ಹೇಳಿ ಅವಳಿಗೆ ಸೀರೆಯನ್ನುಡಲು ಸಹಾಯ ಮಾಡಿದಳು.

ನವಿಲು ಹಸುರಿನ ನವಿರಾದ ರೇಶ್ಮೆಯ ಸೀರೆ. ಒಡಲಲ್ಲಿ ಜರತಾರಿಯ ಬುಟ್ಟಾ ಹೂಗಳು. ಜರಿಯ ಅಂಚು, ಜರಿಯ ಸೆರಗು.. ಸೀರೆ ಚೆನ್ನಾಗಿದೆ ಅಂತನ್ನಿಸಿತ್ತು. ಅದಕ್ಕೇ ಒಪ್ಪುವ ರವಿಕೆಯನ್ನು ತೊಟ್ಟು ಸಿದ್ಧಳಾದಳು. ಹಣೆಗೆ ಬಾಸಿಂಗವನ್ನು ಕಟ್ಟಿ ಕನ್ನಡಿಯಲ್ಲಿ ಒಮ್ಮೆ ನೋಡಿಕೊಂಡಳು.. ಈಗ ಪರವಾಗಿಲ್ಲ, ಮದುಮಗಳ ಕಳೆ ಬಂದಿದೆ. ನಡೀ.. ದೇವರ ಮನೆಗೆ ಹೋಗೋಣ" ಅಂತ ಹೇಳಿ ಕರೆದುಕಂಡು ಹೋದಳು, ಪಲ್ಲವಿ ಅವಳ ಕೈ ಹಿಡಿದಿದ್ದಳು.

* * *

ಮದು ಮಕ್ಕಳಿಗಾಗಿ ಪುರೋಹಿತರು ಕಾಯುತ್ತಿದ್ದರು. ಕಲಾಪಗಳು ಪ್ರಾರಂಭವಾದವು. ಗೌರೀ ಪೂಜೆಯನ್ನು ಮುಗಿಸಿ, ಪಲ್ಲವಿ, ಶ್ವೇತಾ ಹಾಗೂ ಚಿದಾನಂದರೊಡಗೂಡಿ, ಮಂಟಪದ ಸಮೀಪಕ್ಕೆ ಬಂದಳು. ವಧೂ ವರರ ನಡುವೆ ಅಂತರ ಪಟವನ್ನು ಎತ್ತಿ ಹಿಡಿದಿದ್ದಳು. ವೇದ

ಘೋಷಗಳು, ಮಂಗಳವಾದ್ಯಗಳು ಮೊಳಗಿದವು. ಅಂತರ ಪಟ ಸರಿದ ಕೂಡಲೇ ವಧೂ ವರರು ಪರಸ್ಪರ ಜೀರಿಗೆ ಬೆಲ್ಲವನ್ನು ತಲೆಯ ಮೇಲೆ ಹಾಕಿದರು. ಭುಜಂಗ ಪಲ್ಲವಿಯ ಕಡೆ ನೋಡಿ ವಿಜಯದ ನಗೆಯನ್ನು ನಕ್ಕ. ನಂತರ ಅಕ್ಕಿಧಾರೆ, ಹೂಮಾಲೆಗಳನ್ನು ಹಾಕುವ ಕಾರ್ಯಕ್ರಮ ನೆರವೇರಿತು. ಪಲ್ಲವಿ ಭುಜಂಗನ ಪಕ್ಕದಲ್ಲಿ ಬಂದು ಕುಳಿತಳು. ಸುಮೂಹೂರ್ತದಲ್ಲಿ ಭುಜಂಗ ಪಲ್ಲವಿಯ ಕೊರಳಿಗೆ ಮಾಂಗಲ್ಯವನ್ನು ಕಟ್ಟಿದ. ಹೆಂಗಳೆಯರು, ವಧೂ ವರರನ್ನು ಆಶೀರ್ವದಿಸಿ ಆರತಿಯನ್ನೆತ್ತಿದರು. ಪಲ್ಲವಿ ಪುಳಕಿತಗೊಂಡಿದ್ದಳು. ಭುಜಂಗ ರೋಮಾಂಚಿತನಾಗಿದ್ದ. ಪ್ರೀತಿಯ ಅಲೆಗಳು ಪರಸ್ಪರರನ್ನು ಉತ್ತೇಜನಗೊಳಿಸಿತ್ತು. ಉತ್ಸಾಹವನ್ನುಂಟು ಮಾಡಿತ್ತು.

ಉಡುಗೊರೆಗಳ ಸುರಿಮಳೆಯಾಗಿತ್ತು. ಭುಜಂಗನ ತಂಗಿಯರು, ಉಡುಗೊರೆಗಳನ್ನು ಮಹಡಿ ಮೇಲಿನ ರೂಮಿನಲ್ಲಿರಿಸಿದರು. ನಂತರ, ಲಾಜಾ ಹೋಮ, ನಾಗೋಲಿ, ಉರುಟಣೆ, ಉಯ್ಯಾಲೆ, ಪ್ರತಿಯೊಂದು ಕಾರ್ಯಕ್ರಮವೂ ಬೇಗ ಬೇಗ ನೆರವೇರಿತು.

ನವದಂಪತಿಗಳಿಗೆ "ಭೂಮದ ಎಲೆ"ಯನ್ನು ಹಾಕಿ ಬಗೆ ಬಗೆಯ ತಿನಿಸನ್ನು ಬಡಿಸಿ ಊಟಕ್ಕೆ ಕೂರಿಸಿದರು. ಭುಜಂಗ ಪ್ರೀತಿಯಿಂದ ಪಲ್ಲವಿಗೆ ಇಷ್ಟವಾದ ತಿನಿಸನ್ನು ತಿನ್ನಿಸಿದ. ಪಲ್ಲವಿ ನಾಚಿಕೊಂಡು, ಭುಜಂಗ ಕೇಳಿದ ತಿನಿಸನ್ನು ತಿನ್ನಿಸಿದಳು. ಆಹ್ವಾನಿತರೆಲ್ಲಾ ಸಂತೃಪ್ತಿಯಾಗಿ ಉಂಡು ವಧೂ ವರರನ್ನು ಹರಿಸಿದರು. ಒಬ್ಬೊಬ್ಬರಾಗಿ, ಕೆಲವು ನೆಂಟರಿಷ್ಟರು ಹೊರಟು ಹೋಗಿದ್ದರು. ಸಂಭ್ರಮದ ಗದ್ದಲ ಕಡಿಮೆ ಆಗಿತ್ತು.

ಭುಜಂಗನ ತಂಗಿ ಬಂದು ಹೇಳಿದಳು. "ನಿಮ್ಮಿಬ್ಬರಿಗೂ ಆಯಾಸವಾಗಿದೆ. ಸ್ವಲ್ಪ ಹೊತ್ತು ಸುಧಾರಿಸಿಕೊಳ್ಳಬೇಕಂತೆ. ಅತ್ತೆಯ ಮನೆಗೆ ಹೋಗಬೇಕಂತೆ.."

"ಹೇಮಾ ವಾಪಸ್ಸು ಹೊರಟು ಹೋದ್ಲಾ!.." ಗೊತ್ತಿದ್ದರು ಕೇಳಿದ.

"ಹೂಂ, ಹೊರಟು ಹೋದ್ಲು, ಅತ್ತೆ ಬೇಜಾರು ಮಾಡ್ಕೊಂಡ್ರು.." ಎಂದು ಹೇಳಿ ಅಲ್ಲಿಂದ ಹೊರಟು ಹೋಗಿದ್ದಳು. ಭುಜಂಗ, ಪಲ್ಲವಿ ಇಬ್ಬರೂ ವೈದೇಹಿಯ ಮನೆಗೆ ಬಂದರು. ಫ್ಯಾನಿನ ಗಾಳಿಯ ಕೆಳಗೆ, ಕುರ್ಚಿಯ ಮೇಲೆ ಭುಜಂಗ ಕುಳಿತ. ಪಲ್ಲವಿ ಸೀರೆಯನ್ನು ಬದಲಾಯಿಸಲೆಂದು ಒಳಗಿನ ರೂಮಿಗೆ ಹೋದಳು.

ಭಾರವಾಗಿದ್ದ ರೇಶಿಮೆ ಸೀರೆಯನ್ನು ಬಿಚ್ಚಿ ಹಗುರವಾದ ರೇಶ್ಮೆ ಸೀರೆಯನ್ನುಟ್ಟು ಅದಕ್ಕೊಪ್ಪುವ ರವಿಕೆಯನ್ನು ತೊಟ್ಟಳು. ಬಿಗಿಯಾಗಿದ್ದ ಜಡೆಯನ್ನು ಬಿಚ್ಚಿ, ಮುಡಿದಿದ್ದ ಹೂಗಳನ್ನು ತೆಗೆದು, ಅಳ್ಳಕವಾಗಿ ಜಡೆಯನ್ನು ಹಾಕಿಕೊಂಡಳು. ಹಾಯೆನ್ನಿಸಿತ್ತು. ಕನ್ನಡಿಯ ಮುಂದೆ ನಿಂತು, ತನ್ನನ್ನು ತಾನೇ ನೋಡಿಕೊಂಡು ಮುಗುಳ್ನಕ್ಕಳು. ಬಾಗಿಲನ್ನು ಯಾರೋ ಬಡಿದ ಸದ್ದಾಗಿತ್ತು. ತೆರೆದಳು. ಆಚೆ ಭುಜಂಗ ನಿಂತಿದ್ದ..ಬರಬಹುದಾ ಮೇಡಂ" ಎನ್ನುತ್ತಾ ಒಳಕ್ಕೆ ಬಂದು ಬಾಗಿಲನ್ನು ಓರೆ ಮಾಡಿ, ಅವಳೆದುರಿಗೆ ನಿಂತ. ಅವಳು ಹರಿಣಿಯಂತೆ ಬೆದರಿದಳು.. ಕತ್ತನ್ನು ತಗ್ಗಿಸಿದಳು.

"ಏನನ್ನಿಸ್ತಾ ಇದೆ ಪಲ್ಲವೀ.." ಎನ್ನುತ್ತಾ ಗಲ್ಲವನ್ನು ಹಿಡಿದು ಎತ್ತಿದ. ಅವಳು ಸಣ್ಣಗೆ ನಡುಗಿದಳು.. ಆ ಕಂಪನ, ಅವನ ಕೈಯ ಬೆರಳ ಮೂಲಕ, ಅವನ ದೇಹದೊಳಗೆ ಓಡಾಡಿತು. ಮುಗುಳ್ನಗುತ್ತಾ ಅವಳ ಮುಖವನ್ನು ತನ್ನ ಬೊಗಸೆಯಲ್ಲಿ ಹಿಡಿದ.. ಪಲ್ಲವಿ ಮೈ ಬಿಗಿ

ಮಾಡಿದಳು.

"ಚೈತ್ರಾ ಇಲ್ಲಿದೀಯೇನೇ" ಎನ್ನುತ್ತಾ ಶ್ವೇತಾ ಬಾಗಿಲನ್ನು ತಳ್ಳಿದಳು. ಭುಜಂಗ ಪಲ್ಲವಿಯಿಂದ ದೂರ ಸರಿದ. ಪಲ್ಲವಿ ನಾಚಿ ನೀರಾಗಿದ್ದಳು.." ಸಾರೀ.. ಡಿಸ್ಟರ್ಬ್ ಮಾಡಿದೆ. ನಿನ್ನ ಅತ್ತೇ ಕರೀತಿದಾರೆ....ಎಂದು ಹೇಳಿ ಭುಜಂಗನ ಕಡೆ ನೋಡಿ ಕಿರುನಗೆ ನಕ್ಕಳು. ಭುಜಂಗ ರೂಮಿನಿಂದ ಹೊರಬಂದ. ರಸಗಳಿಗೆಗೆ ಭಂಗ ಬಂದುದು ಅವನನ್ನು ರೇಗಿಸಿತ್ತು.

"ಭುಜಂಗಂಗೆ ಕೋಪ ಬಂತು ಅಂತ ಕಾಣುತ್ತೆ.. ನೀನು ಡ್ರೆಸ್ ಛೇಂಜ್ ಮಾಡಿದ್ಯಾ! ಆ ರೂಪದಲ್ಲಿ ನೀನು ಹೇಗಿದೀಯ ಅನ್ನೋದೇ ಮರೆತು ಹೋಗಿತ್ತು.. ಬರ್ತೀಯಾ?" ಎನ್ನುತ್ತಾ ಅವಳನ್ನು ಹೊರಕ್ಕೆ ಕರೆತಂದಳು. ಭುಜಂಗ ಅವಳಿಗಿಂತ ಮುಂಚೆಯೇ ತನ್ನ ಮನೆಗೆ ಬಂದ.. ಅವರ ಮನೆಯಲ್ಲಿ ಮನೆ ತುಂಬಿಸಿಕೊಳ್ಳುವ ಕಾರ್ಯಕ್ರಮಕ್ಕೆ ಸಿದ್ಧತೆ ನಡೆದಿತ್ತು. ಚಿದಾನಂದ, ಮಂದಾಕಿನಿ, ಪಲ್ಲವಿಯನ್ನು ಭುಜಂಗನಿಗೆ ಹಾಗೂ ಅವನ ತಂದೆ ತಾಯಿಯರಿಗೆ ಒಪ್ಪಿಸಿ ಕೊಟ್ಟರು. ಭುಜಂಗ, ಅವಳನ್ನು ತೋಳುಗಳಿಂದ ಬಳಸಿ, ಸ್ವೀಕರಿಸಿದ. ಎಲ್ಲರೂ ನಕ್ಕರು.

ಭುಜಂಗನ ಪ್ರೀತಿ ಪೂರ್ವಕವಾದ ನಡೆ ನುಡಿ, ಶ್ವೇತಾಳನ್ನು ಮರುಳು ಮಾಡಿತ್ತು. ಪಲ್ಲವಿ ಅದೃಷ್ಟವಂತೆ. ಭುಜಂಗನಂಥ ಮನಮೋಹಕ ಪತಿ ಸಿಕ್ಕಿದ್ದಾನೆ. ಪ್ರೀತಿಯ ಮಹಾಪೂರದಲ್ಲಿ ಅವಳನ್ನು ಮೈ ಮರೆಯುವಂತೆ ಮಾಡ್ತಾನೆ. ಈ ಅನಿಸಿಕೆ ಅವಳಲ್ಲಿ ಹೊಸ ಆಸೆಯ ಅಲೆಗಳನ್ನು ಎಬ್ಬಿಸಿತ್ತು. ತನಗೂ ಇಂತಹ ಪತಿ ಸಿಕ್ಕಿದರೇ.. ಮರು ಗಳಿಗೆಯಲ್ಲೇ ಮನಸ್ಸು ಮುದುಡಿತು. ಭಾವನೆಗಳ ತಿಕ್ಕಾಟ ನಡೆದೇ ಇತ್ತು. ಚಪ್ಪರದ ಕೆಳಗೆ ಹಾಕಿದ್ದ ಕುರ್ಚಿಯೊಂದರಲ್ಲಿ ಕುಳಿತು ತನ್ನ ಬಗ್ಗೆಯೇ ಚಿಂತಿಸಿದಳು.

* * *

ಪ್ರಥಮ ರಾತ್ರಿಗೆಂದು, ಮದು ಮಕ್ಕಳಿಗಾಗಿ, ಮಹಡಿ ಮೇಲಿನ ಕೋಣೆಯನ್ನು ವಿಶೇಷವಾಗಿ, ಅಲಂಕರಿಸಿ ಸಿದ್ಧಗೊಳಿಸಿದ್ದರು. ಕೊಠಡಿಯಲ್ಲಿ ಮಂದವದ ಬೆಳಕು ಹರಡಿತ್ತು. ಸುಗಂಧವಾದ ಸುವಾಸನೆ ಪಸರಿಸಿತ್ತು. ವಿಶಾಲವಾದ ಮಂಚದ ಮೇಲೆ ಹಾಸಿದ್ದ ಮೆತ್ತನೆಯ ಹಾಸಿಗೆ, ಜೋಡಿಸಿಟ್ಟ ದಿಂಬುಗಳು ಸ್ವಾಗತವನ್ನು ಕೋರಿದವು. ಟೇಬಲ್ಲಿನ ಮೇಲೆ ಇಟ್ಟಿದ್ದ ಬಾದಾಮಿ ಹಾಲಿನ ಲೋಟಗಳು ಮದು ಮಕ್ಕಳಿಗಾಗಿ ಕರೆದಿದ್ದವು. ತಟ್ಟೆಯ ತುಂಬಾ ಇಟ್ಟಿದ್ದ ವಿಧವಿಧವಾದ ಹಣ್ಣುಗಳು, ತಿಂಡಿಗಳು ಮದುಮಕ್ಕಳಿಗಾಗಿ ಕಾಯುತ್ತಿದ್ದವು.

ಹಿರಿಯ ಮುತ್ತೈದೆಯರು, ಭುಜಂಗನೊಡನೆ ಪಲ್ಲವಿಯನ್ನು ಮಂಚದ ಮೇಲೆ ಕೂರಿಸಿ ಆರತಿಯನ್ನೆತ್ತಿ, ಕಿಸಿ ಕಿಸಿ ನಗುತ್ತಾ, ತುಂಟತನದಿಂದ ನೋಡುತ್ತಾ, ಮದು ಮಕ್ಕಳಿಗೆ ಶುಭರಾತ್ರಿಯನ್ನು ಕೋರಿ ಹೊರಟಿದ್ದರು. ಅವರ ಹಿಂದೆಯೇ ಭುಜಂಗ ನಡೆದು, ಅವರುಗಳು ಬಾಗಿಲನ್ನು ದಾಟಿದ ಕೂಡಲೇ, ಬಾಗಿಲನ್ನು ಭದ್ರ ಪಡಿಸಿದ. ಅವರುಗಳ ಕಿಲ ಕಿಲ ನಗು ಮೈ ಬಿಸಿ ಮಾಡಿತ್ತು. ಪಲ್ಲವಿ ತಲೆ ತಗ್ಗಿಸಿ ಕುಳಿತಿದ್ದಳು. ಈ ರಸಮಯ ಸಮಯ ಬರುವುದೆಂದು ತಿಳಿದಿದ್ದರೂ, ಏನೋ ಉದ್ವೇಗ, ಆತಂಕಗಳಿಂದ ಅವಳ ಎದೆಯ ಬಡಿತ ತೀವ್ರಗೊಂಡಿತ್ತು. ಭುಜಂಗ ಅವಳ ಮಗ್ಗುಲಲ್ಲಿ ಕುಳಿತು ಪಲ್ಲವೀ.. ಎಂದು ಮೃದುವಾಗಿ ಕರೆದು, ಅವಳ ಗಲ್ಲವನ್ನು

ಹಿಡಿದೆತ್ತಿ ಅವಳ ಮುಖವನ್ನೇ ದಿಟ್ಟಿಸಿದ. ಅವಳು ನಾಚಿದ್ದಳು. ದೇಹ ಕಂಪಿಸಿತ್ತು. ಅವಳ ದೇಹದ ಕಂಪನ ಅವನನ್ನು ಎಬ್ಬಿಸಿತು.. ಅವಳ ಮುಖದ ಬಳಿಗೆ ತನ್ನ ಮುಖವನ್ನು ತಂದ.. ಅವಳು ಅವನ ಮುಖವನ್ನು ಸರಿಸಿ, ಎದ್ದು ನಿಂತಳು.

"ಪಲ್ಲವೀ..ಏನಿದು?..ಭಯಾನ? ನಾನು ನಿನ್ನ ಗಂಡ..." ಎನ್ನುತ್ತಾ ಅವಳ ಕೈಯನ್ನು ಹಿಡಿದ. ಅವಳು ಕೊಸರಿಕೊಂಡು, ಟೇಬಲ್ಲಿನ ಬಳಿಗೆ ಬಂದಳು. ಹಾಲಿನ ಲೋಟಗಳನ್ನು ಕೈಯಲ್ಲಿ ಹಿಡಿದು ಮಂಚದ ಬಳಿಗೆ ಬಂದಳು.

"ನಾವಿಬ್ಬರೂ ಹಾಲನ್ನು ಕುಡಿಯಬೇಕಂತೆ..ಅತ್ತೆ ಹೇಳಿದಾರೆ.."

"ಅಷ್ಟೇನಾ!..ನಿನಗೆ ಏನೋ ಕೋಪ ಅಂತ ಅಂದ್ಕೊಂಡೆ ನಾನು.."

"ಕೋಪ ಯಾಕೆ?.. ಅದೂ ಈ ರಾತ್ರಿ.. ತಗೊಳ್ಳಿ ಹಾಲನ್ನು ಕುಡೀರಿ" ಎನ್ನುತ್ತಾ ಅವನ ಕೈಗೆ ಲೋಟವನ್ನಿತ್ತಳು. ಅವನು ಮೊದಲು ಅವಳ ತುಟಿಯ ಬಳಿಗೆ ಲೋಟವನ್ನು ಹಿಡಿದ.

"ನೀನು ಮೊದಲು ಕುಡಿ...ನಾನು ಆಮೇಲೆ ಕುಡೀತೀನಿ.." ಎಂದು ಹೇಳಿ ನಿಧಾನವಾಗಿ ಅವಳಿಗೆ ಕುಡಿಸಿದ. ಹಾಲನ್ನು ಹೀರುವ ತುಟಿಗಳು ಮಧುರವಾಗಿ ಕಂಡವು.

"ನೀವೂ ಕುಡೀರಿ..." ಅವನಿಗೆ ಮತ್ತೆ ಹೇಳಿದಳು.

"ನನಗೆ ಹಾಲು ಸೇರುಲ್ಲ, ನೀನೇ ಕುಡಿದು ಬಿಡು.. ನಾನು ಜೇನನ್ನು ಕುಡೀತೀನಿ" ಎಂದ ತುಂಟತನದಿಂದ. ಅವನ ಸಾಮೀಪ್ಯ, ಅವನ ಮಾತುಗಳು ಹಿತವಾಗಿ ಕಂಡಿತ್ತು.

"ಜೇನು! ಎಲ್ಲಿದೆ ಜೇನು..? ಅವಳು ಮುಗ್ಧಳಂತೆ ಕೇಳಿದಳು.

"ಇಲ್ಲಿದೆ.. ಇಲ್ಲಿದೆ ನನಗೆ ಬೇಕಾದ ಜೇನು" ಎನ್ನುತ್ತಾ ಅವಳ ತುಟಿಗಳಿಗೆ ಬೆರಳನ್ನು ಸೋಕಿಸಿದ. ಅವಳು ಉತ್ತರಿಸಲಿಲ್ಲ, ಅವಳ ಮೈ ಬಿಸಿಯಾಗಿತ್ತು. ಅದರ ಅನುಭವ ಅವನಿಗಾಯಿತು. ಲೋಟಗಳನ್ನು ಬದಿಗಿಟ್ಟು ಅವಳ ಮೇಲೆ ಬಾಗಿದ. ಮೃದುವಾಗಿ ಅವಳ ತುಟಿಗಳನ್ನು ತನ್ನ ತುಟಿಗಳೊಳಗೆ ಎಳೆದುಕೊಂಡು ಜೇನನ್ನು ಹೀರಿದ. ಅಧರಗಳ ಮಧುರವಾದ ಜೇನು ಸವಿಯಾಗಿತ್ತು. ಮತ್ತೆ ಮತ್ತೆ ಹೀರಿದ. ಮತ್ತೂ ಏರಿತು.. ಅವಳ ದೇಹವನ್ನು ಬಿಗಿಯಾಗಿ ತಬ್ಬಿಕೊಂಡ. ಅವಳಿಂದ ಯಾವ ವಿರೋಧವೂ ಇರಲಿಲ್ಲ, ಅವನನ್ನು ಪ್ರೀತಿಯಿಂದ ಸ್ವೀಕರಿಸಿದಳು. ತನ್ನನ್ನು ಅರ್ಪಿಸಿಕೊಂಡಳು. ಹೊಸ ಅನುಭವ ಮೈ ಮರೆಯುವಂತೆ ಮಾಡಿತ್ತು.. ಆ ಸುಖ ಮತ್ತೆ ಮತ್ತೆ ಬೇಕೆನ್ನಿಸಿತ್ತು, ಭುಜಂಗನಿಗೆ. ಈ ಸಮಯ ಆನಂದಮಯವಾಗಿ ಕಂಡಿತ್ತು.

"ನಿನ್ನನ್ನೂ ಪ್ರೀತಿಸಿದ ದಿನಗಳಿಂದ, ಈ ಗಳಿಗೆಗಾಗಿ ನಾನು ಕಾದಿದ್ದೆ ಪಲ್ಲವೀ.." ಎನ್ನುತ್ತಾ ಅವಳ ದೇಹದ ಸಿರಿಯನ್ನು ತನ್ನದಾಗಿಸಿಕೊಂಡ. ಅವಳ ಯೌವನವನ್ನು ಲೂಟಿ ಹೊಡೆದ. ಇದುವರೆಗೂ ತನ್ನದಾಗಿತ್ತ ಸ್ವತ್ತನ್ನು, ಪಲ್ಲವಿ ಅವನಿಗೆ ಕೊಟ್ಟು ತೃಪ್ತಿಯ ಉಸಿರನ್ನು ಬಿಟ್ಟಳು. ಭುಜಂಗ ಅವಳಿಗೆ ಸೊಬಗಿನ ಸವಿಯ ಆನಂದವನ್ನು ನೀಡಿದ. ಹಳೆಯದೆಲ್ಲವನ್ನೂ ಕಳಚಿ, ಹೊಸತನ್ನು ಧರಿಸಿ, ಚೈತ್ರ ಪಲ್ಲವಿಯಾಗಿ ಕಂಗೊಳಿಸಿದಳು. ಆ ಸಮಯ ನೂತನ ಬಾಳಿಗೆ ಶುಭೋದಯವನ್ನು ತಂದಿತ್ತು.

ಮಂಚಕ್ಕೆ ಇಳಿಬಿಟ್ಟ ಹೂ ಮಾಲೆಯ ಮಲ್ಲಿಗೆ ಅರಳಿ ಸುವಾಸನೆಯನ್ನು ಬೀರಿತು. ಲೋಟದಲ್ಲಿ ಉಳಿದುಕೊಂಡ ಹಾಲು ಮುಗುಳ್ನಗೆಯನ್ನು ಚೆಲ್ಲಿತು. ತಟ್ಟೆಗಳಲ್ಲಿ ಬಿರಿದು ಕುಳಿತ ಹಣ್ಣುಗಳು ಮಧುರ ಮಿಲನವನ್ನು ಕಂಡು ನಾಚಿ ಕೆಂಪಾದವು. ಉಂಡೆ, ಚಕ್ಕುಲಿಗಳು ರುಚಿಯನ್ನು ಬೆರೆಸಿದವು.. ಹಚ್ಚಿಟ್ಟಿದ್ದ ಕಾಲು ದೀಪಗಳು ಬೆಳಕನ್ನು ಸೂಸಿ ಶುಭವನ್ನು ಕೋರಿದವು. ನವ ಜೋಡಿಗಳು, ಇದ್ಯಾವುದರ ಪರಿವೆ ಇಲ್ಲದೇ.. ರಾತ್ರಿಯನ್ನು ಕಳೆದರು.

ಬೆಳಗಾಯಿತು, ಮೊದಲು ಎಚ್ಚರವಾದುದು ಪಲ್ಲವಿಗೆ. ಗಂಡನ ತೋಳನ್ನು ಮೆಲ್ಲಗೆ ಸರಿಸಿ ಎದ್ದಳು. ಭುಜಂಗನಿಗೂ ಎಚ್ಚರವಾಯಿತು. ಕಿಟಕಿಯಿಂದ ಸೂರ್ಯನ ಬೆಳಕು ರೂಮಿನಲ್ಲಿ ಇಣುಕಿತ್ತು.. ಪಲ್ಲವಿಯನ್ನು ತನ್ನೆಡೆಗೆ ಎಳೆದುಕೊಂಡ. ಅವಳು ನಾಚಿಕೊಂಡು ಬಿಡಿಸಿಕೊಳ್ಳಲು ನೋಡಿದಳು. ತಮ್ಮಿಬ್ಬರ ಪ್ರಥಮ ಮಿಲನಕ್ಕೆ ಸಾಕ್ಷಿಯಾಗಿದ್ದ ವಸ್ತುಗಳ ಕಡೆ ಗಮನ ಹರಿಯಿತು. ಉತ್ತೇಜಿತನಾದ. ರಾತ್ರಿ, ಯಾವ ನಾಚಿಕೆಯೂ ಇರಲಿಲ್ಲ, ಈಗೆಂಥಾ ನಾಚಿಕೆ?'' ಎಂದು ಕೇಳುತ್ತಾ ಅವಳನ್ನು ಮುದ್ದಿಸಿದ.. ಅವಳು ಕೊಸರಿಕೊಳ್ಳಲು ನೋಡಿದಳು. ಅವನು ಹಿಡಿತವನ್ನು ಬಿಗಿಗೊಳಿಸಿದ.

''ಬೆಳಗಾಗಿದೆ...'' ಎಂದಳು ನಾಚಿಕೆಯನ್ನು ಪ್ರಕಟಿಸುತ್ತಾ.

''ಬೆಳಗಾದ್ರೆ ಏನಾಯ್ತು! ನಾವು ಹೊಸದಾಗಿ ಮದುವೆಯಾದವರು. ನಮ್ಮನ್ನು ಯಾರೂ ಬಂದು ಎಬ್ಬಿಸುವುದಿಲ್ಲ..'' ಎನ್ನುತ್ತಾ ಮತ್ತೆ ಅವಳನ್ನು ತಬ್ಬಿಕೊಂಡ.. ''ಪಲ್ಲವೀ, ಹನಿಮೂನ್‌ಗೆ ಎಲ್ಲಾದ್ರು ಹೋಗಿ ಬರ್ಬೇಕು ಅಂತ ಆಸೆ ಇದ್ದರೆ ಹೇಳು. ನನಗೆ ಅದೆಲ್ಲ ಗೊತ್ತಾಗುವುದಿಲ್ಲ'' ಎಂದ.

''ಯೋಚಿಸ್ಬಿಟ್ಟು ಹೇಳ್ತೀನಿ'' ಎಂದಳು ಕಿಲ ಕಿಲ ನಗುತ್ತಾ.

''ಈ ನಗುವ ತುಟಿಗಳಿಗೆ ನನ್ನ ಕಾಣಿಕೆ'' ಎನ್ನುತ್ತಾ ತುಟಿಗಳನ್ನು ಗಾಢವಾಗಿ ಚುಂಬಿಸಿದ.

* * *

ಮನೆಯವರೆಲ್ಲರೂ ಸಮೀಪದಲ್ಲಿದ್ದ ದೇವಸ್ಥಾನಕ್ಕೆ ಹೊರಡಲು ಸಿದ್ಧರಾಗುತ್ತಿದ್ದರು. ಅಡಿಗೆಯವರು ಎಲ್ಲರಿಗೂ ಕಾಫಿ ತಿಂಡಿಯನ್ನು ತಂದು ಕೊಟ್ಟರು. ಚಿದಾನಂದ, ಶ್ವೇತಾ, ಮಂದಾಕಿನಿ ಎಲ್ಲರೂ ಹೊರಟಿದ್ದರು. ಶ್ವೇತಾ ಯಾಕೋ ಮಂಕಾಗಿದಾಳೆ ಎನ್ನುವುದನ್ನು ಪಲ್ಲವಿ ಗಮನಿಸಿದಳು. ಶರತ್‌ನ ನೆನಪು ಕಾಡಿರಬಹುದು ಎಂದುಕೊಂಡಳು. ಅವಳು ಆಗಾಗ್ಗೆ ಭುಜಂಗನ ಕಡೆ ನೋಡುವುದು ಇವಳಿಗೆ ಇಷ್ಟವಾಗಲಿಲ್ಲ.

ಒಂದು ರಾತ್ರಿಯಲ್ಲಿ ಚೈತ್ರಾ ಸಾಕಷ್ಟು ಬದಲಾಗಿದ್ದಾಳೆಂದೆನಿಸಿತ್ತು ಶ್ವೇತಾಳಿಗೆ. ಇನ್ನು ಇಲ್ಲಿ ತಾನು ಒಂಟಿ. ತನ್ನ ಸ್ನೇಹ ಇವಳಿಗೆ ಬೇಕಾಗಿಲ್ಲ, ಭುಜಂಗನ ಸಂಗ ಮಾತ್ರ ಬೇಕಾಗಿದೆ ಎನ್ನುವುದನ್ನು ಮನಗಂಡಳು. ಈರ್ಷ್ಯೆಯ ಸಣ್ಣ ಮುಳ್ಳು ಚುಚ್ಚಿದಂತಾಗಿತ್ತು.

ವ್ಯಾನಿನಲ್ಲಿ ಭುಜಂಗ ಪಲ್ಲವಿ ಅಕ್ಕ ಪಕ್ಕ ಕುಳಿತು ಪಿಸುದನಿಯಲ್ಲಿ ಮಾತನಾಡಿಕೊಂಡು ಕಿಸಿ ಕಿಸಿ ನಗುತ್ತಿದ್ದರು. ಚಿದಾನಂದನೂ ಗಂಭೀರನಾಗಿದ್ದ. ಹಿಂದಿನ ಚೈತ್ರಳು ಇವಳೇನಾ

ಅನ್ನುವಂತೆ ಉಲ್ಲಾಸದಿಂದ ಇದಾಳೆ ಅಂತೆನ್ನಿಸಿತ್ತು. ತನ್ನನ್ನು ಪ್ರೀತಿಸುವುದಾಗಿ ಹೇಳಿದ್ದಳು. ರಾಜೀವನನ್ನು ಮದುವೆಯಾದಳು. ಎಲ್ಲವನ್ನು ಮರೆಯಲೆಂದು ಇಲ್ಲಿ ಬಂದವಳು. ಭುಜಂಗನನ್ನೂ ಪ್ರೀತಿಸಿ, ಮದುವೆಯಾದಳು. ಈಗ ಚೈತ್ರಾ ಭುಜಂಗನ ಒಲವಿನ ಮಡದಿ. ಈ ಪ್ರೀತಿ ಹೇಗೆ ಹುಟ್ಟಿತು? ಹೇಗೆ ಗಾಢವಾಯಿತು?..ಈಗಾಗಲೇ ಭುಜಂಗನೊಡನೆ ಒಂದು ರಾತ್ರಿಯನ್ನು ಕಳೆದಿದ್ದಾಳೆ.. ಆ ರಾತ್ರಿಯ ನಂತರ ಇಬ್ಬರೂ ಮತ್ತೂ ಅನ್ಯೋನ್ಯವಾಗಿದಾರೆ.. ಪಲ್ಲವಿ ಅನುಗಾಲವೂ ಇವನೊಡನೆ ಹೀಗೇ ಇರಬಲ್ಲಳೇ?.. ಏನೇನೋ ಆಲೋಚನೆಗಳು ಮುತ್ತಿದಾಗ, ತಲೆಯನ್ನು ಕೊಡವಿದ.

ದೇವಸ್ಥಾನದ ಮೆಟ್ಟಿಲುಗಳನ್ನೇರಿ, ಆಯಾಸವಾದವರೆಲ್ಲಾ, ಅಲ್ಲೇ ನಿಂತು ಒಂದು ಗಳಿಗೆ ಸುಧಾರಿಸಿಕೊಂಡರು. ಸೂರ್ಯನ ತಾಪವಿದ್ದರೂ, ಗಾಳಿ ಜೋರಾಗಿ ಬೀಸುತ್ತಿತ್ತು. ಗಾಳಿಗೆ ಮುಖ ಒಡ್ಡಿ ನಿಂತಿದ್ದ ಚಿದಾನಂದನ ಬಳಿಗೆ ಶ್ವೇತಾ ಬಂದಳು.

"ಗಾಳಿ ಎಷ್ಟು ಹಿತವಾಗಿ ಬೀಸ್ತಿದೆ ಅಲ್ವಾ?" ಎನ್ನುತ್ತಾ ಅವನಿಗೆ ತಾಗುವಂತೆ ನಿಂತಳು. ಅವಳು ಮೈಗೆ ಪೂಸಿಕೊಂಡಿದ್ದ ಸೆಂಟ್‌ವಾಸನೆ ಅವನ ಮೂಗನ್ನು ಅರಳಿಸಿತು. ಅವಳ ಕಡೆ ತಿರುಗಿ ಮಂದಹಾಸ ಬೀರಿದ. ಅವಳೂ ಪ್ರತಿಯಾಗಿ ಮುಗುಳ್ನಗೆಯನ್ನು ಸೂಸಿದ್ದಳು.

"ನಿಮ್ಮ ತಂಗಿಯ ಮದುವೆ ಆಯ್ತು.. ಇನ್ನು ನಿಮ್ಮ ಲೈನ್ ಕ್ಲಿಯರ್.. ನಿಮ್ಮ ಮದುವೆ ಯಾವಾಗ?" ಓಲಾಡುತ್ತಾ ಕೇಳಿದಳು, ಚಿದಾನಂದ ಒಣನಗೆಯನ್ನು ನಕ್ಕ.

"ನನ್ನ ಮದುವೆ ? ನಾನು ಅದರ ಬಗ್ಗೆ ಯೋಚಿಸಿಲ್ಲ ಬಿಡಿ.."

"ಯಾಕ್ರೀ.... ನೋಡೀ ಭುಜಂಗ ಎಷ್ಟು ಉತ್ಸಾಹದಿಂದ ಇದಾರೆ. ಅವರನ್ನು ನೋಡಿ ನಿಮಗೂ ಮದುವೆಯಾಗುವ ಆಸೆ ಹುಟ್ಟಿಲ್ವಾ?" ಅವನ ಆಲೋಚನೆಗಳ ಬಗ್ಗೆ ಆಸಕ್ತಿ ಹುಟ್ಟಿತ್ತು.

"ಇಲ್ಲ, ಆ ಆಸೆ ಇಲ್ಲ, ಸಧ್ಯಕ್ಕೆ ಆ ಆಲೋಚನೆ ಇಲ್ಲ."

"ಬೆಂಗಳೂರಿಗೇ ಬಂದು, ಒಂದು ಕೆಲಸಕ್ಕೆ ಸೇರಿ ಯಾಕೆ ಸೆಟ್ಲ್ ಆಗ್ಬಾರ್ದು ನೀವು?"

"ನನ್ನ ವಿದ್ಯಾಭ್ಯಾಸಕ್ಕೆ ಒಂದು ದೊಡ್ಡ ಕೆಲಸವೂ ಸಿಗುಲ್ಲ, ಬರೋ ಸಂಬಳದಲ್ಲಿ ನನ್ನ ನನ್ನ ಅಮ್ಮನ ಜೀವನ ನಡೀಬೇಕಲ್ಲ.. ನೋಡೋಣ ಹೇಗಾಗುತ್ತೇ ಅಂತ.. ಸಧ್ಯಕ್ಕೆ ಇಲ್ಲೇ ಇರುವ ಆಲೋಚನೆ ಇದೆ."

"ಇಂಥಾ ಕೊಂಪೇಲಿ ಇದ್ದು ಏನ್ಮಾಡ್ತೀರಿ?" ನಗೆಯಾಡಿದಳು.

"ಇನ್ನು ಮುಂದೆ ದೊಡ್ಡಮ್ಮನ ಜಮೀನು, ತೋಟಗಳನ್ನು ನಾನು ನೋಡಿಕೊಳ್ಳಬೇಕೆಂದು ನಿರ್ಧರಿಸಿದ್ದೇನೆ. ಭುಜಂಗ ಎಲ್ಲವನ್ನೂ ತಿಳಿಸಿ ಕೊಡ್ತಾರೆ."

"ನಿಮ್ಮ ದೊಡ್ಡಮ್ಮಂಗೆ ಒಪ್ಪಿಗೆ ಇದೆಯಾ?.. ಭುಜಂಗನ ಮಾತೇ ಬೇರೆಯಾಗಿತ್ತು. ಈಗ ನೀವು ಅವರಿಗೆ ಅಳಿಯನಲ್ಲ; ಅಥವಾ ಸ್ವಂತ ಮಗನಲ್ಲ"

"ನೋಡೋಣ, ಕೆಲಸ ಸರಿ ಹೋಗದಿದ್ರೆ, ಇದ್ದೇ ಇದೆ ನಮ್ಮೂರು. ಅಮ್ಮನ್ನೂ ಕರ್ಕೊಂಡು ಅಲ್ಲಿಗೆ ಹೊರಟು ಹೋಗ್ತೀನಿ.." ಬನ್ನಿ ಎಲ್ರೂ ದೇವಸ್ಥಾನದ ಒಳಗೆ ಹೋಗಿದಾರೆ.. ಮಂಗಳಾರತಿ

ಮಾಡ್ತಿದಾರೆ.'' ಇಬ್ಬರೂ ಒಳಗೆ ನಡೆದರು.

ಈಶ್ವರನಿಗೆ ಬೆಳಗ್ಗೆಯೇ ಕ್ಷೀರಾಭಿಷೇಕವಾಗಿತ್ತು. ಮತ್ತೊಮ್ಮೆ, ಅರ್ಚನೆಯನ್ನು ಮಾಡಿ, ಮಂಗಳಾರತಿಯನ್ನು ಮಾಡಿ, ಎಲ್ಲರಿಗೂ ತೀರ್ಥ ಪ್ರಸಾದಗಳನ್ನು ಕೊಟ್ಟರು. ನವ ದಂಪತಿಗಳು ಅರ್ಚಕರಿಗೆ ದಕ್ಷಿಣೆಯನ್ನು ಕೊಟ್ಟು ನಮಸ್ಕರಿಸಿದರು. ಅವರು ವಿಶೇಷವಾಗಿ ಆಶೀರ್ವದಿಸಿ, ಪ್ರಸಾದವನ್ನಿತ್ತರು ಎಲ್ಲರೂ ಪ್ರಸಾದವನ್ನು ಸ್ವೀಕರಿಸಿ, ಹೊರಗಿನ ಮೆಟ್ಟಿಲುಗಳ ಮೇಲೆ ಕುಳಿತರು.

''ದೇವರನ್ನು ಏನು ಬೇಡಿಕೊಂಡೆ?'' ಭುಜಂಗ ಪಲ್ಲವಿಯನ್ನು ಕೇಳಿದ.

''ನೀವು ಏನು ಕೇಳ್ಕೊಂಡ್ರಿ?'' ಮರು ಸವಾಲನ್ನೆಸೆದಳು.

''ಮನೇಲಿ ಹೇಳ್ತೀನಿ'' ಎಂದ ಅವಳ ಕೈಯನ್ನು ಸವರುತ್ತಾ, ಶ್ವೇತಾಳ ನೋಟ ಅವರಿಬ್ಬರ ಮೇಲಿತ್ತು. ಮೈಯೊಳಗೆ ಏನೋ ಹರಿದಾಡಿದಂತಾಗಿತ್ತು. ಅವರ ಕಡೆಗೆ ನಡೆದು ಬಂದಳು. ಭುಜಂಗ ಕೈಯನ್ನು ಬಿಟ್ಟ

''ನಾನು ಇವತ್ತು ರಾತ್ರಿಯ ಬಸ್ಸಿಗೆ ವಾಪಸ್ಸು ಹೋಗ್ತಿದೀನಿ'' ಎಂದಳು.

''ಅಲ್ಲಿ ಹೋಗಿ ಏನ್ಮಾಡ್ತೀಯೆ? ನಾಲ್ಕು ದಿನ ಇಲ್ಲಿ ಹಾಯಾಗಿರು.'' ಪಲ್ಲವಿ ರೇಗಿದಳು.

''ಬೋರ್ ಆಗುತ್ತೆ ಕಣೇ. ನಿನಗೆ ನನ್ನ ಹತ್ರ ಎರಡು ಮಾತುಗಳನ್ನಾಡುಕ್ಕೂ ಬಿಡುವಿಲ್ಲ..'' ತಮಾಷೆಯಾಗಿ ಹಂಗಿಸಿದಳು. ಪಲ್ಲವಿ ಭುಜಂಗನ ಕಡೆ ನೋಡಿದಳು. ಭುಜಂಗ ನಕ್ಕ.

''ಪಲ್ಲವಿ ನನ್ನ ಜೊತೆ ಜೊತೇಲೇ ಇರ್ತಾಳೆ ಅಂತ ನಿಮಗೆ ಅಸೂಯೆಯೇನ್ರೀ? ಏನ್ಮಾಡೋದು. ನೆನ್ನೆಯಿನ್ನು ನಮ್ಮಿಬ್ಬರ ಮದುವೆಯಾಗಿದೆ.. ಅಲ್ವಾ ಪಲ್ಲವೀ?''

''ಸುತ್ತ ಮುತ್ತ ಬೇಕಾದಷ್ಟು ತಿರುಗಾಡಲು ಜಾಗಗಳಿವೆ. ತೋಟ ಇದೆ. ತೊರೆ ಇದೆ. ಗವಿ, ಗುಹೆ ಎಲ್ಲಾ ಇದೆ. ತಿರುಗಾಡ್ಕೊಂಡು ಬಾ..'' ಪಲ್ಲವಿ ಹೇಳಿದಳು.

''ಒಬ್ಬಳೇ?.. ಗೊತ್ತಿಲ್ಲದ ಊರ್ನಲ್ಲಿ ಜತೆ ಇಲ್ಲದೇ ಹೇಗೆ ಹೋಗಲಿ! ಭುಜಂಗ, ನೀವು ಬರ್ತೀರಾ ನನ್ನ ಜೊತೆಗೆ..'' ಬೇಕಂತ ಕೇಳಿದಳು.

''ಚಿದಾನಂದನ ಜತೇಲಿ ಹೋಗು. ಹೇಗೂ ಅವನೂ ಕೆಲಸವಿಲ್ಲದೆ ಕೂತಿದಾನೆ.'' ತಟ್ಟನೆ ಹೇಳಿದಳು. ಭುಜಂಗ ಅವಳ ಕಡೆ ತಿರುಗಿದ.

''ಇನ್ನು ಮುಂದೆ ಅತ್ತೆ ಮನೆಯ ಗದ್ದೆ ತೋಟದ ಕಾರುಬಾರನ್ನೆಲ್ಲಾ ಚಿದಾನಂದನೇ ನೋಡಿಕೊಳ್ತಾನೆ, ಅತ್ತೆ ಹತ್ರ ಮಾತನಾಡಿದೀನಿ..''

''ಅವನಿಗೇನು ಗೊತ್ತಿದೆ ವ್ಯವಸಾಯದ ಕೆಲಸ?.. ಯಾವುದಾದ್ರೂ ಆಸ್ಪತ್ರೆಯಲ್ಲಿ ಕೆಲಸವನ್ನು ಕೊಡಿಸಿ.. ಅವನಿಗೆ ಫಿಸಿಯೋ ಥೆರಪಿಯಲ್ಲಿ ಡಿಪ್ಲೊಮಾ ಆಗಿದೆಯಂತೆ.''

''ಅವನಿಗೆ ಬೇರೆ ಎಲ್ಲಾದ್ರೂ ಕೆಲಸ ಮಾಡುವ ಆಸೆ ಇದ್ರೆ, ಪಾರ್ಟ್ ಟೈಂ ಕೆಲಸಕ್ಕೆ ಸೇರಿಕೊಳ್ಳಬಹುದು. ಇಲ್ಲಿ ಅತ್ತೆ ಮಾವನಿಗೆ, ಸಹಾಯಕರ ಅಗತ್ಯವಿದೆ. ಚಿದಾನಂದ ಮನೆಯವನು, ಅತ್ತೆಗೆ ಇಷ್ಟವಾಗುತ್ತೆ.''

ಶ್ವೇತಾ ಸುಮ್ಮನಾದಳು. ಎಲ್ಲರೂ ಮನೆಗೆ ಹಿಂತಿರುಗಿದ್ದರು. ಎಲ್ಲರಿಗೂ ಸಿಹಿ ಊಟಕ್ಕೆ ವ್ಯವಸ್ಥೆ ಮಾಡಿದ್ದರು. ಊಟದ ನಂತರ ಕೈ ತೊಳೆದು, ಭುಜಂಗ ಪಲ್ಲವಿ ತಮ್ಮ ರೂಮನ್ನು ಸೇರಿಕೊಂಡರು. ಮಂಚದ ಮೇಲೆ ಕುಳಿತಿದ್ದ ಪಲ್ಲವಿಯ ತೊಡೆಯ ಮೇಲೆ ತಲೆಯನ್ನಿಟ್ಟು ಭುಜಂಗ ಮಲಗಿದ. ಏನನ್ನೋ ಯೋಚಿಸುತ್ತಾ ಕುಳಿತಿದ್ದವಳ ಗಮನವನ್ನು ತನ್ನ ಕಡೆಗೆ ಸೆಳೆದುಕೊಳ್ಳಲು ಕಚಗುಳಿಯನ್ನಿಟ್ಟ. ಅವಳು ನಗುತ್ತಾ ಮಿಸುಗಾಡಿದಳು.

"ಅಷ್ಟು ಗಾಢವಾಗಿ ಏನನ್ನು ಯೋಚಿಸ್ತಿದೀಯ?.. ಹೋಗ್ಲಿ, ದೇವರಲ್ಲಿ ಏನು ಬೇಡಿದೆ..?"

"ನಾನು ಏನನ್ನೂ ಬೇಡಲಿಲ್ಲ, ನನಗೆ ಎಲ್ಲಾ ಸಿಕ್ಕಿದೆಯಲ್ಲ"

"ಒಂದೇ ರಾತ್ರಿಗೆ ಮುಗಿದು ಹೋಯ್ತಾ? ಇನ್ನೂ ಬೇಕಾದಷ್ಟಿದೆ. ನಮ್ಮಿಬ್ಬರ ಪ್ರೀತಿಯ ಕುರುಹಾಗಿ, ನಾಲ್ಕು ಮಕ್ಕಳಾದ್ರೂ ಬೇಕು. ಬೇಗ ಪಲ್ಲವಿ ತಾಯಾಗುವಂತೆ ಮಾಡಪ್ಪಾ ಅಂತ ದೇವರಲ್ಲಿ ಕೇಳಿಕೊಂಡೆ..." ಭುಜಂಗ ನಗುತ್ತಾ ನುಡಿದು, ಅವಳ ಗಲ್ಲವನ್ನು ಮೆಲ್ಲಗೆ ಕಚ್ಚಿದ.

"ಹೀಗೆಲ್ಲಾ ಮಾಡ್ಬೇಡಿ ನೋವಾಗುತ್ತೆ.. ನಿಮ್ಮ ತಂಗಿ ಕೇಳ್ತಾರೆ.. ಏನಿದು ಗಾಯ ಅಂತ" ಪಲ್ಲವಿ ನಾಚುತ್ತಾ ಹೇಳಿದಳು.

"ಯಾಕೆ? ಅವಳಿಗೆ ಗೊತ್ತಿಲ್ಲವಂತಾ?...ಅವಳ ಗಂಡನೂ ಹೀಗೇ ಪ್ರೀತಿಸಿರ್ತಾನೆ."

"ನಿಮ್ಮ ಭಾವ ಯಾಕೆ ಮದುವೆಗೆ ಬರ್ಲಿಲ್ಲ?"

"ಅವನಿಗೆ ಸ್ವಲ್ಪ ಕೊಬ್ಬು ಜಾಸ್ತಿ. ನಮ್ಮನ್ನೆಲ್ಲ ಕಂಡರೆ ಅಷ್ಟಕ್ಕಷ್ಟೇ.."

"ಯಾಕೆ? ವರದಕ್ಷಿಣೆ ಕೊಡ್ಲಿಲ್ವಾ!"

"ವರದಕ್ಷಿಣೇನ ಕೇಳ್ಲಿಲ್ಲ, ನಾವಾಗೇ ಕೊಡ್ಲಿಲ್ಲ.. ಅದಲ್ಲ ಅವನ ಕೋಪಕ್ಕೆ ಕಾರಣ.. ಅವನ ತಂಗೀನ ನಾನು ಮದುವೆಯಾಗ್ಲಿಲ್ಲ ಅಂತ ಕೋಪವಂತೆ. ಹಾಗಂತ ವಿಜಯಾನೇ ಹೇಳಿದ್ಲು ಅವಳು ನನ್ನನ್ನ ಇಷ್ಟಪಟ್ಟಿದ್ದಳಂತೆ. ಪೆಚ್ಚು ನಗೆಯನ್ನು ನಕ್ಕ. ನನಗೂ ಹೇಮಾಳಿಗೂ ಮದುವೆ ಈ ಮೊದಲೇ ಗೊತ್ತಾಗಿದೆ ಅಂತ ತಿಳಿದಿದ್ರೂ ಏನೋ ಕಿತಾಪತಿ ಮಾಡ್ದ"

" ಹಾಗಾದ್ರೆ ಈಗ ವಿಜಯಂಗೂ ನನ್ಮೇಲೆ ಅಸಮಾಧಾನಾ?..ನಾನು ನಿಮ್ಮನ್ನು ಮದ್ವೆಯಾದೆ ಅಂತ."

"ಇರಲಾರದು. ಇದ್ರೂ ನೀನು ತಲೆಗೆ ಹಚ್ಕೋಬೇಡ.. ಈಗ ಆ ಮಾತುಗಳು ಬೇಡ.. ನಮ್ಮ ಮಕ್ಕಳ ಬಗ್ಗೆ ಮಾತನಾಡೋಣ.." ಪಲ್ಲವಿ ಕಿಲಕಿಲನೆ ನಕ್ಕಳು. "ನೀನು ಹೀಗೆ ಮಾದಕವಾಗಿ ನಗ್ತೀಯ. ನಾನು ಮರುಳಾಗ್ತೀನಿ.." ಅವಳ ಕೆನ್ನೆಗೆ ಲೊಚಲೊಚನೆ ಮುತ್ತುಗಳನ್ನು ಕೊಟ್ಟ, ಅವಳು ಅವನನ್ನು ಸರಿಸಿದಳು.

"ಯಾಕೇ ಪಲ್ಲವಿ?..ನನ್ನ ಮುದ್ದು ನಿಂಗೆ ಬೇಡ್ವಾ?.. ತಳ್ತೀಯಲ್ಲಾ?.."

"ನೀವು ಇಷ್ಟು ಪೋಲಿ ಅಂತ ನಂಗೆ ಗೊತ್ತಿರಲಿಲ್ಲ" ಮತ್ತೆ ನಕ್ಕಳು.

"ನನ್ನನ್ನ ಪೋಲಿ ಅಂತೀಯ?.. ನಾನು ನಿನ್ನ ಗಂಡ ಕಣೇ.. ನಿನ್ನನ್ನ ಮದುವೆಯಾಗಿದೀನಿ.

ನಂಗೆ ಲೈಸೆನ್ಸ್ ಸಿಕ್ಕಿದೆ. ನೀನು ನನಗೆ ಸಹಕರಿಸದೇ ಇದ್ದರೆ ಬೇರೆ ಮದುವೆಯಾಗಿ ಬಿಡ್ತೀನಿ ಅಷ್ಟೇ..'' ಅವನು ತಮಾಷೆಗೆ ಹೇಳಿದರೂ ಇದ್ದಕ್ಕಿದ್ದಂತೆ ಅವಳು ಗಂಭೀರಳಾದಳು.

* * *

''ಏಯ್..ಏನಾಯ್ತು? ತಮಾಷೆ ಮಾಡ್ದೆ.. ನಂಗೆ ನೀನೊಬ್ಬಳೇ.. ಮೂಡ್ ಕೆಡಿಸ್ಕೋಬೇಡ.''

''ನಂಗೆ ಮಕ್ಕಳಾಗದಿದ್ರೆ ನೀವು ಬೇರೆ ಮದುವೆಯಾಗ್ತೀರಾ?..'' ಪೆಚ್ಚು ಮುಖ ಮಾಡಿದಳು.

''ಛೀ.. ಇದೆಂಥಾ ಪ್ರಶ್ನೆ..?''

''ಇಲ್ಲ, ಹೇಳಿ, ಒಂದು ವೇಳೆ ನನಗೆ ಮಕ್ಕಳಾಗದಿದ್ರೆ?..'' ಅವಳು ಮಂಕಾಗಿದ್ದಳು.

''ಯಾಕೆ ಆಗುಲ್ಲ..? ನಾವಿಬ್ರೂ ಆರೋಗ್ಯವಾಗಿದೀವಿ. ಯೌವನವಿದೆ. ವಯಸ್ಸು ಇದೆ. ನಾನು ಸುಮ್ಮನೇ ತಮಾಷೆ ಮಾಡ್ದೆ...''

''ಮತ್ತೆ! ದೇವರ ಬಳಿ ಬೇಡಿದೆ ಅಂತ ಹೇಳಿದ್ರಿ...''

''ಹೂಂ, ನಿನ್ನಂಥ ಎರಡು ಹೆಣ್ಣು ಮಕ್ಕಳು, ನನ್ನಂಥ ಎರಡು ಗಂಡು ಮಕ್ಕಳಾಗಲಿ ಅಂತ ಕೇಳ್ಕೊಂಡೆ. ನಿಧಾನವಾಗಿ ಆಗ್ಲಿ ಬಿಡು. ಅರ್ಜೆಂಟೇನು?.. ಆದರೆ ನೀನು ಹೀಗೆ ನನ್ನನ್ನ ದೂರ ತಳ್ಳಿದ್ರೆ ಮಕ್ಕಳಾಗೋಲ್ಲ ನೋಡು..'' ಅವನು ಅವಳನ್ನು ಬರಸೆಳೆದು ಅಪ್ಪಿಕೊಂಡಾಗ ಅವಳು ಸುಮ್ಮನಾದಳು. ಆದರೂ ಇದ್ದಕ್ಕಿದ್ದಂತೆ ಅವಳು ಯಾವುದೋ ಆಲೋಚನೆಯಲ್ಲಿರುವಂತೆ ಅನ್ನಿಸಿತ್ತು.. ''ಏ ಪಲ್ಲವೀ.. ಯಾಕೇ ನನ್ಮೇಲೆ ಬೇಸರಾನಾ?..ಅಥವಾ ಯಾರಾದ್ರೂ ನಿನ್ನನ್ನ ಏನಾದ್ರೂ ಅಂದ್ರಾ?..ಅಥವಾ ಈಗ್ಲಿಂದ ತಾಯಿಯಾಗುವ ಪ್ಲ್ಯಾನಾ?''

''ಬೆಳಿಗ್ಗೆ ನಾನು ಕೆಳಗಿಳಿದು ಹೋದಾಗ, ಚಿದಾನಂದನ ತಾಯಿ ಎದುರಿಗೆ ಬಂದ್ರು.. ನಿಮ್ಮ ಅಜ್ಜಿ ಅವರ ಹತ್ರ ಏನೋ ಮಾತಾಡ್ತಿದ್ರು...''

''ಏನಾಯ್ತೀಗ?.. ಅಜ್ಜಿ ನನ್ನನ್ನು ಏನೇನೋ ಕೇಳ್ತು.. ವಯಸ್ಸಾಗಿದ್ರೂ ಅಜ್ಜಿಗೆ ಚಪಲ .. ಗೇಲಿ ಮಾಡ್ತು.. ಮಂದಾಕಿನಿ ನಿನ್ನನ್ನ ಏನಾದ್ರೂ ಕೇಳಿದ್ರಾ?..''

''ಇಲ್ಲ, ನನ್ನನ್ನೇನೂ ಕೇಳ್ಲಿಲ್ಲ..ಏನೇ ಮಂದಾ.. ನಿನ್ನ ಮಗಳು ನಿನ್ನ ಹತ್ರ ಸರಿಯಾಗಿ ಮಾತಾಡುಲ್ಲವಂತೆ ಹೌದಾ ಅಂತ ನಿಮ್ಮ ಅಜ್ಜಿ ಕೇಳ್ತಿದ್ರು..''

''ಹೌದು, ನೀನ್ಯಾಕೆ ಅವರ ಹತ್ರ ಸರಿಯಾಗಿ ಮಾತಾಡುಲ್ವಂತೆ? ಅತ್ತೆ ಹೇಳಿದ್ರು.''

''ನಾನ್ಯಾಕೆ ಮಾತಾಡ್ಬೇಕು! ನನಗೂ ಅವರಿಗೂ ಏನು ಸಂಬಂಧ?''

''ಅವರು ನಿನ್ನ ತಾಯಿ ಅಲ್ವಾ! ಎಲ್ರೂ ಹಾಗೇ ತಿಳ್ಕೊಂಡಿದಾರೆ.''

''ಇಲ್ಲ, ಅವರು ನನ್ನ ತಾಯಿ ಅಲ್ಲ, ನನ್ನನ್ನು ಹೆತ್ತ ಬಾಡಿಗೆ ತಾಯಿ. ಅವರ ಮೇಲೆ ನನಗೆ ಯಾವ ಭಾವನೆಯೂ ಇಲ್ಲ''

''ಹಾಗಂತ ಎಲ್ರಿಗೂ ಹೇಳುಕ್ಕಾಗುತ್ತಾ? ತೋರಿಕೆಗಾದ್ರೂ...''

"ತೋರಿಕೆಗೆ ನಾನು ಅವರನ್ನು ಅಮ್ಮ ಅಂತ ಕರೆಯುಕ್ಕೆ ಆಗುಲ್ಲ, ನನ್ನಿಂದ ಅದು ಸಾಧ್ಯವಿಲ್ಲ.. ಚಿದಾನಂದ ಇಲ್ಲಿ ಇರುವುದು ಬೇಡ. ಅವನ ಅಮ್ಮನನ್ನು ಕರೆದುಕೊಂಡು ಬೇರೆ ಮನೆ ಮಾಡ್ಕೊಂಡು ಹೋಗಲಿ..." ಅಸಹನೆಯಿಂದ ಹೇಳಿದಳು.

"ಅವರ ಪಾಡಿಗೆ ಅವರು ಅತ್ತೆಯ ಮನೇಲಿರ್ತಾರೆ.. ನೀನೇನೂ ಅಲ್ಲಿ ಇರಬೇಕಾಗಿಲ್ಲ ಅಲ್ವಾ?.. ಏನೇನೋ ಯೋಚ್ನೇ ಮಾಡ್ಬೇಡ... ನೆನ್ನೆಯವರೆಗೂ ಇಲ್ಲದ ಚಿಂತೆ ಈಗ್ಯಾಕೆ ಕಾಡ್ತಿದೆ, ನನ್ನ ಅರಗಿಣೀನಾ!.." ಎನ್ನುತ್ತಾ ಸಮಾಧಾನಗೊಳಿಸಲು ಯತ್ನಿಸಿದ. ಆದರೂ ಅವಳ ಮನಸ್ಸು ಅರಳಲಿಲ್ಲ, ಅವಳ್ಯಾಕೆ ಹೀಗಾಡ್ತಾಳೆ ಎಂದು ಅವನಿಗೆ ಅರ್ಥವಾಗಿರಲಿಲ್ಲ, ತಾನು ಚಿದಾನಂದನೊಡನೆ ಹೇಗೆ ಹೇಳುವುದು!.. ಅವನಿಂದ ಅತ್ತೆಗೆ ಸಹಾಯವಾಗುತ್ತದೆ. ಮಂದಾಕಿನಿಗೂ ಅನುಕೂಲವಾಗುತ್ತದೆ. ಕ್ರಮೇಣ ಇವಳ ಮನಸ್ಸು ಸರಿ ಹೋಗುತ್ತದೆ ಎಂದು ಭಾವಿಸಿದ.

"ಚಿದಾನಂದ, ನನ್ನನ್ನ ತೊರೆಯ ಹತ್ತಿರಕ್ಕೆ ಕರ್ಕೊಂಡು ಹೋಗ್ತೀರಾ! ಎಲ್ರೂ ನೋಡ್ಲೇ ಬೇಕಾದ ಸ್ಥಳ ಅಂತ ಹೇಳ್ತಿದೀರಿ. ಊರಿಗೆ ಹೋಗುಕ್ಕೆ ಮುಂಚೆ ನೋಡ್ಕೊಂಡೇ ಹೋಗೋಣ ಅಂತ ಅಂದ್ಕೊಂಡಿದೀನಿ.." ಶ್ವೇತಾ ಅವನನ್ನು ಎಬ್ಬಿಸಿದಳು.

"ಹೂಂ, ನಡೀರಿ, ಹೇಗೂ ನಂಗೆ ಏನೂ ಕೆಲಸವಿಲ್ಲ..ಬನ್ನಿ ಹೋಗೋಣ."

"ಚೈತ್ರಾನೂ ಇದೇ ಮಾತನ್ನು ಹೇಳಿದ್ಲು.. ನೀವು ಯಾಕೆ ಇಲ್ಲೇ ಕೆಲಸವಿಲ್ಲದೇ ಗೈಡ್ ಕೆಲಸ ಮಾಡ್ಬೇಕು? ಏನಾದ್ರೂ ಬಿಸಿನೆಸ್ ಮಾಡಿ. ಲಾಭ ಬರುತ್ತೆ.."

"ಬಿಸಿನೆಸ್? ನಾನು?.. ನೋಡೋಣ...ಅಂತ ತಮಾಷೆಗೂ ಹೇಳುಲ್ಲ, ನನ್ನ ಹತ್ರ ಬಂಡವಾಳ ಎಲ್ಲಿದೆ?.." ಅವನು ನಗುತ್ತಾ ಚಪ್ಪಲಿ ಮೆಟ್ಟಿದ. ಅವಳೂ ಅವನ ಜೊತೆ ಹೆಜ್ಜೆ ಹಾಕಿದಳು. ಮನೆಯಿಂದ ಸ್ವಲ್ಪ ದೂರ ಬಂದು, ತೊರೆಯ ದಾರಿಯನ್ನು ಹಿಡಿದಾಗ ಅವಳು ಮತ್ತೆ ಹೇಳಿದಳು.

"ಬಿಸಿನೆಸ್ ಹಣವನ್ನು ಯಾರಾದ್ರೂ ಕೊಟ್ಟರೆ ಮಾಡ್ತೀರಾ?"

"ನನ್ನನ್ನ ಬಿಸಿನೆಸ್‌ಗೆ ತಳ್ಳಲೇಬೇಕು ಅಂತ ಅಂದುಕೊಂಡಿರುವಂತಿದೆ. ನಿಮ್ಮ ಪಾರ್ಟನರ್ ಆಗ್ಬೇಕಾ ನಾನು?" ತಮಾಷೆಯ ದನಿಯಲ್ಲಿ ಕೇಳಿದ.

"ಯಾಕಾಗ್ಬಾರ್ದು?.. ನಾನು ಹಣದ ವ್ಯವಸ್ಥೆ ಮಾಡ್ತೀನಿ. ನಿಮಗೆ ಒಪ್ಪಿಗೆ ಇದ್ದರೆ.. ನಾನೂ ನೀವೂ ಒಟ್ಟಾಗಿ ಏನಾದ್ರು ಬಿಸಿನೆಸ್ ಮಾಡೋಣ.. ನಂಗೆ ಪಾರ್ಟ್ನರ್ ಬೇಕು."

"ಇಲ್ಲ ಶ್ವೇತಾ..ನನಗೆ ಯಾವ ವ್ಯವಹಾರ ಜ್ಞಾನವೂ ಇಲ್ಲ.. ನಿಮ್ಮ ಸಲಹೆಗೆ ಥ್ಯಾಂಕ್ಸ್.. ಈ ಕಡೆಯಿಂದ ಹೋಗೋಣ. ತೊರೆಗೆ ಸಮೀಪವಾಗುತ್ತೆ.. ಬೇಗ ತಲುಪಬಹುದು" ಅವನು ಮುಂದೆ ಮುಂದೆ ನಡೆದ.

"ನೀವು ಹೀಗೆ ಬೇಗ ಬೇಗ ನಡೆದರೆ, ನನಗೆ ಕಷ್ಟವಾಗುತ್ತೆ, ಕಾಲುಗಳು ನೋಯುತ್ತೆ." ಅವಳು ಮುದ್ದುಗರೆಯುತ್ತಾ ನುಡಿದಳು.

"ನಿಮ್ಮ ನಡಿಗೆ ನಿಧಾನ. ನನ್ನ ನಡಿಗೆ ವೇಗ ಹೆಚ್ಚು.." ಎನ್ನುತ್ತಾ ಅವಳ ಹೆಜ್ಜೆಯ ಜೊತೆಗೆ ಹೆಜ್ಜೆಯನ್ನಿಟ್ಟ, ಇಬ್ಬರೂ ತೊರೆಯ ಬಳಿಗೆ ಬಂದರು. "ಇದೇ ಈ ಹಳ್ಳಿಯ ತೊರೆ. ನದಿಯಷ್ಟು

ದೊಡ್ಡದಲ್ಲ, ಸ್ವಲ್ಪ ದೂರದಲ್ಲಿ ಸ್ವಲ್ಪ ಎತ್ತರದ ಬಂಡೆಗಳ ಮಧ್ಯದಲ್ಲಿ ನೀರು ಮೇಲಿನಿಂದ ಬೀಳುತ್ತೆ. ಅದೇ ಜಲಪಾತ."

"ಗಾಳಿ ಹಿತವಾಗಿ ಬೀಸ್ತಿದೆ. ಹತ್ತಿರಕ್ಕೆ ಹೋಗೋಣ್ವಾ?.."

"ಇಲ್ಲೆಲ್ಲಾ ಚೆನ್ನಾಗಿ ಬೆಳಕಿದ್ದಾಗ ಮಾತ್ರ ಸುತ್ತಬೇಕು.. ಅಕ್ಕ ಪಕ್ಕದಲ್ಲಿ ಕಾಡುಗಳಿವೆ. ಕಾಡು ಪ್ರಾಣಿಗಳಿವೆಯಂತೆ.."

"ಹೌದಾ?" ಎನ್ನುತ್ತಾ ಅವಳು ಅವನಿಗೆ ಆತುಕೊಂಡಳು."

"ಹಾವುಗಳೂ ಹರಿದಾಡುತ್ತವಂತೆ. ಅದಕ್ಕೇ ನಾನು ಹೆಚ್ಚಿಗೆ ಇಲ್ಲೆಲ್ಲಾ ಬಂದೇ ಇಲ್ಲ, ನನಗೆ ಆಸಕ್ತಿಯೂ ಇಲ್ಲ" ಎನ್ನುತ್ತಾ ಅವಳಿಂದ ದೂರ ಸರಿದು ನಿಂತು ಹೇಳಿದ.

"ಭುಜಂಗನಿಗೆ ಭಯವೇ ಇಲ್ಲವಂತೆ.. ಅವರು ಚೈತ್ರಳನ್ನು ಇಲ್ಲಿಗೆ ಆಗಾಗ್ಗೆ ಕರ್ಕೊಂಡು ಬಂದಿದಾರೆ.. ಇಲ್ಲೇ ಅಂತೆ ಅವರ ಪ್ರೇಮ ಕತೆ ಪ್ರಾರಂಭವಾದದ್ದು.." ನಕ್ಕಳು.

"ಇರಬಹುದು ನಂಗೆ ಗೊತ್ತಿಲ್ಲ.. ನನ್ನನ್ನ ಕೇಳಿದ್ರೆ, ಇಂತಹ ಪ್ರದೇಶಗಳಿಗೆ ಹೆಂಗಸರನ್ನು ಕರ್ಕೊಂಡು ಬರಲೇ ಬಾರದು."

"ನಿಮಗೆ ಧೈರ್ಯವಿಲ್ಲದಿರಬಹುದು. ಭುಜಂಗ ಧೈರ್ಯವಂತರು ಅಂತ ಚೈತ್ರಾ ತುಂಬಾ ಹೊಗಳ್ತಾಳೆ.."

"ನಿಮಗೆ ತೊರೆಯ ನಡುವೆ, ಬಂಡೆಗಳ ಮೇಲೆ ಹೋಗಿ ಕುಳಿತ್ಕೋಬೇಕು ಅಂತ ಆಸೆ ಇದ್ರೆ ಬನ್ನಿ.. ಕರ್ಕೊಂಡು ಹೋಗ್ತೀನಿ."

"ಹೂಂ, ಹೋಗೋಣ.. ಇಬ್ಬರೂ, ಎಚ್ಚರದಿಂದ ಬಂಡೆಗಳ ಮೇಲೆ ಹಾಲಿಡುತ್ತಾ, ತೊರೆಯ ಮಧ್ಯಭಾಗಕ್ಕೆ ಬಂದರು.. ಅವರ ಕಣ್ಣೆದುರಿಗೇ ಒಂದು ಹಾವು ಹರಿದು ಬಂಡೆಯ ಸಂಧಿಯಲ್ಲೆಲ್ಲೋ ಮರೆಯಾಯಿತು. ಶ್ವೇತಾ ಉಸಿರನ್ನು ಬಿಗಿ ಹಿಡಿತು, ಅವನ ಕೈಗಳನ್ನು ಬಲವಾಗಿ ಹಿಡಿದಳು.

"ನೋಡಿದ್ರಾ.. ನೀವು ಹೆದರಿಬಿಟ್ರಿ. ಅದಕ್ಕೇ ನಾನು ಬೇಡ ಅಂತ ಅಂದದ್ದು.." ಅವನೆಂದ.

"ನಾನೆಂದೂ ಇಷ್ಟು ಹತ್ತಿರದಿಂದ ಹಾವುಗಳನ್ನು ನೋಡೇ ಇಲ್ಲ, ಭಯ ಆಗ್ದೇ ಇರುತ್ತಾ? ನಿಜ ಹೇಳಿ ಚಿದಾನಂದ್, ನಿಮಗೆ ಭಯ ಆಗ್ಲಿಲ್ವಾ?"

"ಸ್ವಲ್ಪ ಆಯ್ತು. ಆದರೆ ನೀವು ಜೊತೇಲಿದ್ರಲ್ಲ.." ಅವನು ಪೆಚ್ಚು ನಗೆಯನ್ನು ನಕ್ಕ ಕೈಗಳನ್ನು ಹಿಡಿದೇ ಇದ್ದಳು. ಇಬ್ಬರು ಅಲ್ಲಿಯೇ ನಿಂತು ನೀರು ಹರಿದು ಹೋಗುವ ಸೊಬಗನ್ನು ನೋಡುತ್ತಿದ್ದರು.." ಇಲ್ಲಿ ತುಂಬಾ ಮೀನುಗಳಿವೆ ಅಂತ ಚೈತ್ರಾ ಹೇಳ್ತಿದ್ಲು, ಆದರೆ ಒಂದೂ ಕಾಣ್ತಿಲ್ಲ"

"ಏನನ್ನಾದ್ರೂ ತಿನ್ನೋಕ್ಕೆ ಹಾಕಿದ್ರೆ, ಗುಂಪು ಗುಂಪಾಗಿ ಬರುತ್ತವಂತೆ.. ನಾವು ಏನನ್ನೂ ತಂದಿಲ್ಲವಲ್ಲ.. ಮುಂದಿನ ಸಾರಿ ಬರೋವಾಗ ಏನಾದ್ರೂ ತಿಂಡೀನ ತಂದು ಹಾಕೋಣ."

“ಅಂದ್ರೇ.. ಮತ್ತೆ ನನ್ನನ್ನು ಕರ್ಕೊಂಡು ಬರುವ ಪ್ಲ್ಯಾನ್ ಇದೆ ಅಂತಾಯ್ತು. ಆದರೆ ನಾನು ನಾಳೆ ಊರಿಗೆ ಹೊರಟೇ ಬಿಡ್ತೀವಿ.. ಮತ್ತೆ ಬರ್ತೀನೋ ಇಲ್ವೋ..?”

“ಯಾಕ್ರೀ ಹೀಗಂತೀರಾ! ನಿಮ್ಮ ಫ್ರೆಂಡ್‌ನ ನೋಡೋಕೆ ಬರುಲ್ವಾ?..”

“ಯಾರು? ಚೈತ್ರಾನ! ಅವಳಿಗೆ ಈಗ ನಾನು ಬೇಕಾಗಿಲ್ಲ, ಅವಳೀಗ ಒಂಟಿಯಲ್ಲ, ಬೇಕಾದವರು ಸಿಕ್ಕಿದಾರಲ್ಲ..” ಅವಳ ಧ್ವನಿಯಲ್ಲಿ ಅಸಹನೆ ಇದ್ದುದು ಅವನ ಗಮನಕ್ಕೆ ಬರಲಿಲ್ಲ.

“ಇನ್ನು ಹೆಚ್ಚು ಹೊತ್ತು ನಾವು ಇಲ್ಲಿರುವುದು ಸರಿಯಲ್ಲ, ಸೂರ್ಯ ಮುಳುಗುವ ಸಮಯವಾಗ್ತಿದೆ. ಅಷ್ಟು ದೂರ ನಡೆದು ಹೋಗ್ಬೇಕು. ಹೋಗೋಣ್ವಾ?” ಅವನು ಕೇಳಿದ.

“ಹೂಂ.” ಎನ್ನುತ್ತಾ ಸರ‍್ರನೆ ತಿರುಗಿದಳು. ಪಕ್ಕದಲ್ಲೇ ನಿಂತಿದ್ದವನ ದೇಹಕ್ಕೆ ಅವಳ ದೇಹ ಬಡಿಯಿತು. ಬೀಳುವಂತಾಗಿತ್ತು.. ಕಾಲು ತಿರುಚಿತು.. ಹ್ಹಾಂ.. ಎಂದು ಕಿರುಚಿ ಅಲ್ಲೇ ಕುಳಿತು ಬಿಟ್ಟಳು..

“ಏನಾಯ್ತು?...ಯಾಕೆ ಕೂತು ಬಿಟ್ರಿ?..” ಏಳಿ.. ಅವನು ಎಬ್ಬಿಸಲು ನೋಡಿದ.

“ಎಲ್ಲಾ ನಿಮ್ಮಿಂದ್ಲೇ.. ಅಡ್ಡ ಯಾಕೆ ನಿಂತಿದ್ರಿ. ಕಾಲು ತಿರುಚಿ ಹೋಯಿತು. ನೋಯ್ತಾ ಇದೆ.” ಅವಳು ಸಾವರಿಸಿಕೊಂಡು ಎದ್ದಳು.

“ಸಾರಿ, ಗೊತ್ತಾಗ್ಲಿಲ್ಲ.. ನಿಧಾನವಾಗಿ ಹೆಜ್ಜೆ ಇಡಿ. ನಾನು ಸಹಾಯ ಮಾಡ್ತೀನಿ.”

“ಏನೂ ಬೇಕಾಗಿಲ್ಲ, ನಾನೇ ನಡೀತೀನಿ..” ಎಂದು ಕುಂಟುತ್ತಾ ಹೆಜ್ಜೆಯನ್ನಿಡಲು ನೋಡಿದಳು. ಆಗಲಿಲ್ಲ, ಅವನ ಸಹಾಯ ಬೇಕಾಯಿತು. ಅವನು ಕೈ ಹಿಡಿದು ದಡಕ್ಕೆ ಕರೆತಂದ.

ಕುಂಟುತ್ತಾ ನಿಧಾನವಾಗಿ ಚಿದಾನಂದನ ತೋಳನ್ನು ಹಿಡಿದು ಬಂದವಳನ್ನು ಕಂಡು ಮಂದಾಕಿನಿ ಸಮೀಪಿಸಿದಳು. “ಏನಾಯ್ತೋ ಚಿದೂ.” ಗಾಬರಿಯಿಂದ ಕೇಳಿದಳು.

“ಏನಿಲ್ಲಮ್ಮ ಕಾಲು ಸ್ವಲ್ಪ ಉಳುಕಿದೆ. ಬಂಡೆ ಮೇಲೆ ಕಾಲು ಜಾರಿತು.”

“ತೊರೆ ಹತ್ರ ಹೋಗಿದ್ರಾ! ಇಷ್ಟು ಹೊತ್ನಲ್ಲಿ ಯಾರಾದ್ರೂ ಹೋಗ್ತಾರಾ?..” ಹಿಂದಿನಿಂದ ವೈದೇಹಿ ಬಂದು ಕೇಳಿದಳು. ಇಬ್ಬರೂ ಪೆಚ್ಚು ಮುಖ ಮಾಡಿದರು. ಅಯೋಡೆಕ್ಸ್ ಕೊಡ್ತೀನಿ ಬಳಕೊಂಡ್ರೆ ನೋವು ಕಡಿಮೆ ಆಗುತ್ತೆ. ಹಾಗೇ ನೋವಿಗೆ ಒಂದು ಮಾತ್ರೆ ತಗೊಂಬಿಡು..” ವೈದೇಹಿ ಆದೇಶವಿತ್ತಳು. ಚಿದಾನಂದ ಅವಳನ್ನು ನಡೆಸಿಕೊಂಡು, ರೂಮಿನ ತನಕ ಬಿಟ್ಟು ಬಂದ. ಮಂದಾಕಿನಿ ಏನೋ ಆಲೋಚನೆಯಲ್ಲಿದ್ದಳು. ಚಿದಾನಂದನೇ ಹುಡುಕಿ, ಮಾತ್ರೆಯನ್ನು ನುಂಗಿಸಿದ. ಅಯೋಡೆಕ್ಸ್‌ನ ಶೀಷೆಯನ್ನು ಕೊಟ್ಟ.

“ಸ್ವಲ್ಪ ನೀವೇ ತಿಕ್ತೀರಾ?” ಅವಳು ಸಂಕೋಚವಿಲ್ಲದೇ ಕೇಳಿದಾಗ, ಅವನಿಗೆ ಇಲ್ಲವೆನ್ನಲಾಗಲಿಲ್ಲ. ಬೇಗ ಬೇಗ, ಸ್ವಲ್ಪ ಅಯೋಡೆಕ್ಸ್‌ನ್ನು ಬೆರಳಿನಲ್ಲಿ ತೆಗೆದುಕೊಂಡು, ನೋವು ಇದ್ದ ಭಾಗಕ್ಕೆ ಬಳಿದ. ತಾಯಿ ನೋಡಿದರೆ ಏನಂದುಕೊಂಡಾಳು ಎಂಬ ಭಯವಿತ್ತು. ಅವನು ಹೊರಡಲನುವಾದ.

"ಚಿದಾನಂದ್, ಹೊಟ್ಟೆ ತುಂಬಾ ಹಸೀತಿದೆ. ತಿನ್ನುಕ್ಕೆ ಏನಾದ್ರೂ ಬೇಕು." ಎಂದಳು.

"ಅಮ್ಮನ್ನ ಕೇಳ್ತೀನಿ." ಎನ್ನುತ್ತಾ ಹೊರಬಂದ. ಎದುರಿಗೆ ವೈದೇಹಿ ಕಂಡಳು.

"ದೊಡ್ಡಮ್ಮ ತಿನ್ನುಕ್ಕೆ ಏನಾದ್ರೂ ಇದೆಯಾ? ಶ್ವೇತಂಗೆ ಬೇಕಂತೆ.."

"ಮನೇಲಿ ಏನೂ ಇಲ್ಲ, ಭುಜಿ ಮನೇಲಾದ್ರೆ ಮದುವೆ ಮನೆ ತಿಂಡಿಗಳು ಇರಬಹುದು. ಹೋಗಿ ಇಸ್ಕೊಂಡು ಬಾ.."

"ಅಮ್ಮ ಹೋಗಿ ತಗೊಂಡು ಬರ್ತೀಯಾ? ನಾನು ಕೇಳಿದ್ರೆ ಚೆನ್ನಾಗಿರುಲ್ಲ"

"ರಾತ್ರಿಗೆ ಎಲ್ರಿಗೂ ಊಟಕ್ಕೆ ಅಲ್ಲಿಗೆ ಬರಹೇಳಿದಾರೆ. ನಾನು, ಮಂದಾಕಿನಿ ಅಲ್ಲಿಗೇ ಊಟಕ್ಕೆ ಹೋಗ್ತೀನಿ.. ನೀನು ಶ್ವೇತನ್ನ ಕರ್ಕೊಂಡು ಬರ್ತೀಯಾ?.." ವೈದೇಹಿ ತಮಾಷೆ ಮಾಡುತ್ತಾ ಕೇಳಿದಳು.

"ನಾನೇನ್ಮಾಡ್ಲಿ ನೀವೇ ಹೇಳಿ.. ತಮಾಷೆ ಮಾಡ್ಬೇಡಿ.." ರೇಗಿದ.

"ಅಯ್ಯೋ ರಾಮಾ ಯಾಕೋ ರೇಗ್ತೀಯಾ..? ಅವಳನ್ನು ತೊರೆಯ ಬಳಿಗೆ ಕರ್ಕೊಂಡು ಹೋದೋನು ನೀನು. ಅಲ್ಲಿಂದ ಕರ್ಕೊಂಡು ಬಂದೋನೂ ನೀನೇ.. ಅದಕ್ಕೇ ಕೇಳ್ದೆ..." ಅವಳ ಮಾತನ್ನು ಕೇಳಿಸಿಕೊಳ್ಳಲು ಇಷ್ಟವಿಲ್ಲದವನಂತೆ ಹೊರಕ್ಕೆ ಹೋಗಿದ್ದ.

"ಯಾಕೇ ಮಂದಾ, ನಿನ್ನ ಮಗನಿಗೆ ಇಷ್ಟು ಕೋಪ?.. ಅಂಥಾದ್ದೇನಂದೆ ನಾನು?"

"ನಂಗೊತ್ತಿಲ್ಲ ಅಕ್ಕ.. ಈಚೀಚೆಗೆ ಸ್ವಲ್ಪ ಕೋಪಿಷ್ಠನಾಗಿದಾನೆ. ಕೆಲಸ ಇಲ್ಲ; ಸಂಪಾದನೆ ಇಲ್ಲ, ಅಸಹಾಯಕನಾಗಿದಾನೆ. ಏನೋ ಬೇಸರವಾಗಿರಬಹುದು. ಈ ಹುಡುಗೀನ ಬೀದೀಲಿ ನಡೆಸ್ಕೊಂಡು ಬಂದಿದಾನೆ. ಎಷ್ಟೋ ಜನ ನೋಡಿರಬಹುದು. ಮುಜುಗರವಾಗದೇ ಇರುತ್ತಾ! ನೀನೇ ಹೇಳು.."

"ಪಲ್ಲವಿ, ಭುಜಂಗ ಎಷ್ಟೋ ಸಾರಿ ತೊರೆದು ಬಳಿಗೆ ಹೋಗಿದಾರೆ. ಒಂದು ದಿನವೂ ಪೆಟ್ಟು ಮಾಡಿಕೊಂಡಿಲ್ಲ, ಬಂಡೆ ಮೇಲೆ ಸರಿಯಾಗಿ ಕಾಲಿಡುಕ್ಕೆ ಬರದಿದ್ರೆ ಯಾಕೆ ಹೋಗ್ಬೇಕಾಗಿತ್ತು?.. ಎಲ್ಲಾ ಬರೀ ನಟನೆ ಅಂತ ನಂಗೆ ಅನುಮಾನ.."

"ಹಾಗೆ ನಟನೆ ಮಾಡಿದ್ರೆ ಅವಳಿಗೇನು ಲಾಭ?" ನಿಂಗೇ ಇಂಥಾದ್ದೆಲ್ಲಾ ಹೊಳೆಯೋದು. ನೋವಿದ್ರೆ ಅನುಭವಿಸ್ತಾಳೆ.. ವಾಸಿ ಮಾಡ್ಕೋತಾ.."

"ಅದೆಲ್ಲಾ ಸರಿ. ಇವಳು ಪಲ್ಲವಿಯ ಸ್ನೇಹಿತೆ.. ಪಲ್ಲವಿ ಈಗ ಇವಳ ಕೈಗೆ ಸಿಗುವುದಿಲ್ಲ. ಗೊತ್ತಿದ್ದೂ ಇಲ್ಲಿ ಇನ್ನೂ ಯಾಕೆ ಇದಾಳೋ?"

"ಹೇಗೆ ಕೇಳೋದು?..ಹೋಗು ಅಂತ ಹೇಳೋಕೆ ಆಗುತ್ತಾ?.."

"ಕಾಲು ನೋವು ಅಂತ ಇನ್ನು ನಾಲ್ಕು ದಿನ ಇಲ್ಲಿ ಉಳಿದುಕೊಂಡರೆ ಇವಳ ಸೇವೇನ ಯಾರು ಮಾಡೋರು!...ಕಷ್ಟ ಆಗುಲ್ವಾ!"

"ನಾನು ನೋಡ್ಕೋತೀನಿ ಅಕ್ಕಾ, ನನ್ನ ಮಗಳ ಸ್ನೇಹಿತೆ ಅಂತ ಅಂದ್ಮೇಲೆ ನನ್ನ ಕರ್ತವ್ಯ

ಅಲ್ವಾ?.. ನೋವು ಕಡಿಮೆ ಆಗಿದ್ರೆ ನಾನೇ ಊರಿಗೆ ಬಿಟ್ಟು ಬರ್ತೀನಿ.. ನೀನು ಚಿಂತಿಸ್ಬೇಡ.'' ಅಷ್ಟರಲ್ಲಿ ಚಿದಾನಂದ ಹಿಂತಿರುಗಿದ್ದ.

''ನೀವಿಬ್ರೂ ಊಟಕ್ಕೆ ಹೋಗ್ಬೇಕಂತೆ. ಅತ್ತೆ ಹೇಳಿದ್ರು.''

''ನಿನ್ನ ಊಟ ಆಯ್ತಾ?'' ಮಂದಾಕಿನಿ ಕೇಳಿದಳು.

''ಇಲ್ಲ, ನಾನು ಆಮೇಲೆ ಮಾಡ್ತೀನಿ. ನೀವಿಬ್ರೂ ಹೋಗ್ಬನ್ನಿ. ಇಲ್ಲಿ ಮಾವ ಒಬ್ಬರೇ ಇರ್ತಾರಲ್ಲ ಮನೇಲಿ ನಾನು ಇರ್ತೀನಿ..'' ಅವರಿಬ್ಬರೂ ಹೊರಟು ಹೋಗಿದ್ದರು. ಚಿದಾನಂದ ಭುಜಂಗನ ಮನೆಯಿಂದ ಕೇಳಿ ತಂದಿದ್ದ ತಿಂಡಿಯ ಪೊಟ್ಟಣವನ್ನು ಹಿಡಿದು ಶ್ವೇತಾ ಮಲಗಿದ್ದೆಡೆಗೆ ಬಂದ.. ಶ್ವೇತಾ ಮಂಚದ ಮೇಲೆ ಕುಳಿತು, ಕಾಲಿನ ನೋವು ಇದ್ದ ಭಾಗವನ್ನು ಬೆರಳಿನಿಂದ ಉಜ್ಜುತ್ತಿದ್ದಳು.

''ಇನ್ನೂ ನೋವು ಇದೆಯಾ ಶ್ವೇತಾ..'' ಮೃದುವಾಗಿ ಕೇಳಿದ.

''ನೀವು ಎಲ್ಲಿಗೆ ಹೊರಟು ಹೋಗಿದ್ರಿ? ಕೋಪಿಸ್ಕೊಂಡು ಹೋದ್ರಿ ಅಂತ ನಿಮ್ಮ ತಾಯಿ ಮತ್ತೆ ದೊಡ್ಡಮ್ಮ ಮಾತಾಡಿಕೊಳ್ತಿದ್ರು..''

''ಇಲ್ಲ, ನಂಗ್ಯಾಕೆ ಕೋಪ? ನಿಮಗೋಸ್ಕರ ತಿನ್ನುಕ್ಕೇ ಏನಾದ್ರೂ ತರೋಣ ಅಂತ ಭುಜಂಗನ ಮನೆಗೆ ಹೋಗಿದ್ದೆ ಇಲ್ಲಿ ಜಿಲೇಬಿ, ಚಕ್ಕುಲಿ, ಉಂಡೆ, ಇದೆ ತಿಂತೀರಾ?''

''ಹುಂ, ಕೊಟ್ರೆ ತಿಂತೀನಿ.. ನನಗೆ ಇದೆಲ್ಲಾ ಅಪರೂಪ..'' ಎನ್ನುತ್ತಾ ಅವನು ಕೊಟ್ಟ ಪೊಟ್ಟಣವನ್ನು ಬಿಚ್ಚಿದಳು.

''ನೀವೂ ತಿಂತೀರಾ ಚಿದಾನಂದ್.. ಚೆನ್ನಾಗಿದೆ. ತೊರೆಗೆ ಹೋಗುವಾಗ ಈ ತಿಂಡಿಗಳನ್ನು ತೆಗೆದುಕೊಂಡು ಹೋಗಿದ್ದಿದ್ರೆ, ಮೀನುಗಳಿಗೂ ಹಾಕಬಹುದಾಗಿತ್ತು..''

''ತೊರೆಯ ಸಹವಾಸ ಬೇಡ ಅಂತ ಅನ್ನಿಸ್ಲಿಲ್ವಾ?'' ಅವನೂ ಒಂದು ಚೂರು ಜಿಲೇಬಿಯನ್ನು ಬಾಯಿಗೆ ಹಾಕಿಕೊಂಡ.

''ಥ್ಯಾಂಕ್ಸ್ ಚಿದಾನಂದ್.. ನಾಳೆ ದಿನ ನನ್ನನ್ನ ಊರಿಗೆ ಕರ್ಕೊಂಡು ಹೋಗಿ ಬಿಟ್ಟು ಬರ್ತೀರಾ!..''

''ಯಾಕೆ! ನಾಳೇನೇ ಹೋಗ್ಬೇಕಾ!.. ಕಾಲು ನೋವು ಕಡಿಮೆ ಆಗಲಿ.. ಹೋಗೋರಂತೆ..''

''ನೋವು ಕಡಿಮೆ ಆಗಲಿ ಬಿಡಲಿ, ನಾನು ನಾಳೆ ಹೋಗಲೇ ಬೇಕು ಅಂತ ನಿರ್ಧರಿಸಿಬಿಟ್ಟಿದೀನಿ. ನೀವು ಬರೋದಾದ್ರೆ ಬನ್ನಿ. ಇಲ್ದಿದ್ರೆ ನಾನು ಒಬ್ಬಳೇ ಹೋಗ್ತೀನಿ ಅಷ್ಟೇ..''

''ಚೈತ್ರನ ಹತ್ರ ಮಾತಾಡ್ತೀನಿ. ಅವಳೇನಂತಾಳೋ?''

''ಏನಂತಾಳೆ? ಅವಳೀಗ ಬಿಸಿ, ಎಲ್ಲಾ ನೆಂಟರೂ ಹೊರಟು ಹೋದರು. ನಾನೊಬ್ಬಳು ಮೂರ್ಖಳಂತೆ ಉಳಿದುಕೊಂಡೆ. ಇಲ್ಲಿ ನನಗೆ ಸಮಯ ಹೋಗ್ತಿಲ್ಲ..''

''ಸರಿ, ಹೋಗೋರಂತೆ. ನಾನೇ ಬಿಟ್ಟು ಬರ್ತೀನಿ.. ಈಗ ಊಟದ ಸಮಯ. ಬನ್ನಿ ಕರ್ಕೊಂಡು ಹೋಗ್ತೀನಿ.''

'ಇಲ್ಲಿಗೇ ತಂದು ಕೊಡುವಂತೆ ಯಾರಿಗಾದ್ರೂ ಹೇಳ್ತೀರಾ?''

''ತಂದರೆ ನಾನು ತರ್ಬೇಕು.. ಎಲ್ರಿಗೂ, ನಿಮಗೆ ತುಂಬಾ ಪೆಟ್ಟಾಗಿದೆ ಅಂತ ಗೊತ್ತಾಗುತ್ತೆ. ನಾಳೆ ದಿನ ನೀವು ಹೊರಟರೆ, ನಿಮ್ಮನ್ನು ಯಾರೂ ಕಳಿಸುಲ್ಲ..'' ಎನ್ನುತ್ತಾ ಅಲ್ಲೇ ಕುಳಿತ.

''ಹಾಗಾದ್ರೆ ನಾನು ಹೋದರೆ ಹೋಗಲಿ ಅಂತ ನಿಮಗೂ ಅನ್ಸುತ್ತಾ?''

''ಹಾಗೇನಿಲ್ಲ.. ಆದರೆ ಇಲ್ಲಿ ನಾನೂ ಹೊರಗಿನವನು.. ನಾನು ಏನು ಹೇಳಲಿ?'' ಶ್ವೇತಾ ತಿಂಡಿಗಳನ್ನು ತಿಂದು ಮುಗಿಸಿ, ನೀರನ್ನು ಕುಡಿದು, ದಿಂಬಿಗೆ ಒರಗಿ ಕುಳಿತಳು.. ಅವಳು, ಅವನ ಬಗ್ಗೆ ಅವನು, ಅವಳ ಬಗ್ಗೆ ಯೋಚಿಸಿದರು. ಅವಳ ಕಾಲಿನ ನೋವು ಕಡಿಮೆ ಆಗಿತ್ತು. ವೈದೇಹಿ ಹಾಗೂ ಮಂದಾಕಿನಿ ಬಂದೊಡನೆ, ಇವನು ಶ್ವೇತಾಳನ್ನು ಭುಜಂಗನ ಮನೆಗೆ ಊಟಕ್ಕೆ ಕರೆದೊಯ್ದ.. ಊಟವಾದ ನಂತರ ಚಿದಾನಂದ ಭುಜಂಗನೊಡನೆ ಮಾತಾಡಿದ.

''ಶ್ವೇತಾ, ನಾಳೆ ದಿನ ಊರಿಗೆ ವಾಪಸ್ಸು ಹೋಗ್ಬೇಕು ಅಂತ ಹೇಳ್ತಿದಾರೆ ಚೈತ್ರಾ ಏನಂತಾರೆ?''

''ಇನ್ನೊಂದೆರಡು ದಿನಗಳು ಇದ್ದು ಸುಧಾರಿಸಿಕೊಂಡು ಹೋಗ್ಲೀ.. ನಾನು ಶ್ವೇತಾಳ ಹತ್ರ ಮಾತಾಡ್ತೀನಿ..'' ಎನ್ನುತ್ತಾ ಚೈತ್ರಳ ಬಳಿ ಹೇಳಿದ. ಪಲ್ಲವಿ ನಿರಾಕರಿಸಿದಳು.

''ಊರಿಗೆ ಹೋಗೋದಾದರೆ ಹೋಗಲಿ. ಇಲ್ಲಿದ್ದು ಏನ್ಮಾಡ್ತಾಳೆ?.. ಇಲ್ಲಿ ಇವಳಿಗೆ ಸಮಯ ಹೋಗುಲ್ಲ, ಕಾಲನ್ನು ಬೇರೆ ಉಳುಕಿಸಿಕೊಂಡಿದಾಳೆ..''

''ಹೇಗೆ ಹೋಗ್ತಾಳೆ ಪಲ್ಲವಿ!..ಕಾಲು ನೋವಾಗಿರುವಾಗ?''

''ಚಿದಾನಂದನನ್ನ ಅವಳ ಜೊತೆಗೆ ಕಳಿಸಿ. ಬಿಟ್ಟು ಬರಲಿ.. ಅವಳ ನೋವಿಗೆ ಇವನೇ ತಾನೇ ಕಾರಣ..''

''ಶ್ವೇತಾ ನಿನ್ನ ಸ್ನೇಹಿತೆ.. ಮದುವೆಗೆ ಬಂದ ಗೆಸ್ಟ್..''

''ಹೌದು, ಅವಳು ನನ್ನ ಸ್ನೇಹಿತೆ.. ಆದರೆ ನಾನು ಈಗ ಈ ಮನೇಲಿ ಅವಳನ್ನು ಹೇಗೆ ಇಟ್ಕೊಳ್ಳಲಿ!.. ಆಂಟಿ ಮನೇಲಿರು ಅಂತ ಹೇಳೋಕು ಇಷ್ಟವಿಲ್ಲ..''

''ಅತ್ತೆಯ ಹತ್ರ ಮಾತಾಡ್ತೀನಿ. ಅಲ್ಲಿ ನಿನ್ನ ತಾಯೀನೂ ಇದಾರೆ..''

''ಅವರು ನನ್ನ ತಾಯಿಯಲ್ಲ, ನಿಮಗೆ ಎಷ್ಟೋ ಸಲ ಹೇಳಿದೀನಿ..'' ಭುಜಂಗ ಪಲ್ಲವಿಯನ್ನೇ ದಿಟ್ಟಿಸಿದ. ಅವಳ ಮನಸ್ನಲ್ಲಿ ಏನಿದೆ ಅಂತ ಅರ್ಥವಾಗಲಿಲ್ಲ, ತಾನೊಬ್ಬನೇ ಶ್ವೇತಾಳ ಬಳಿಗೆ ಬಂದ.

''ಊರಿಗೆ ನಾಳೇನೇ ಯಾಕೆ ಹೋಗ್ಬೇಕು?.. ಎರಡು ದಿನ ಇದ್ದು ಸುಧಾರಿಸಿಕೊಂಡು ಹೋಗಬಹುದಲ್ಲ'' ಶ್ವೇತಾ ನಕ್ಕಳು.

''ನನಗೆ ಇಲ್ಲಿ ಟೈಂ ಪಾಸ್ ಆಗ್ತಿಲ್ಲ ಭುಜಂಗ್.. ನೀವು ಪಲ್ಲವಿ ಹೊಸದಾಗಿ ಮದುವೆಯಾದವರು. ನಾನು ಇಲ್ಲಿ ಏಕಾಂಗಿ.. ನನಗೆ ಕಂಪೆನಿ ಕೊಡೋರು ಯಾರು?..''

''ಚಿದಾನಂದ ಇದಾರಲ್ಲ..'' ಸರ್ರನೆ ನುಡಿದಿದ್ದ

“ಚಿದಾನಂದ ಸದಾ ಕಾಲ ನನ್ನ ಜೊತೇನೇ ಇರೋಕೆ ಆಗುತ್ತಾ?.. ನಾನು ವಾಪಸ್ಸು ಹೋದರೆ ಅಮ್ಮನ್ನ ಕರೆಸ್ಕೋತೀನಿ. ಅಣ್ಣ ಮನೇಲಿರ್ತಾನೆ..”

“ಸರಿ, ಹಾಗಾದ್ರೆ ನಿಮ್ಮಿಷ್ಟ ಆದರೆ ಒಬ್ಬರೇ ಹೋಗ್ಬೇಡಿ. ಚಿದಾನಂದನನ್ನು ಜೊತೆಗೆ ಕರ್‍ಕೊಂಡು ಹೋಗಿ.. ಟ್ಯಾಕ್ಸಿಲಿ ಹೋಗಿ. ಬಸ್ಸು ಬೇಡ..”

“ಪರವಾಗಿಲ್ಲ ನಾವು ಬಸ್ನಲ್ಲಿ ಹೋಗ್ತೀನಿ.”

“ಬೇಡ.. ನೀವು ನನ್ನ ಗೆಸ್ಟ್.. ನಿಮ್ಮ ಯೋಗಕ್ಷೇಮ ನಮಗೆ ಸೇರಿದ್ದು.” ಕಡೇ ಮಾತು ಎಂಬಂತೆ ಅವನು ಹೇಳಿದಾಗ ಅವಳು ಸುಮ್ಮನಾದಳು. ಇವತ್ತು ರಾತ್ರಿ ಇಲ್ಲೇ ಇದ್ಬಿಡಿ.. ಕೆಳಗಡೆ ರೂಂನಲ್ಲಿ ವಾಣಿ ಜೊತೆ ಮಲಕ್ಕೊಳ್ಳಿ.” ಅವನು ಆದೇಶ ನೀಡಿದ. ನಂತರ ಅವನು ಚಿದಾನಂದನೊಡನೆ ಮಾತನಾಡಿದ.

* * *

ಮಾರನೇ ದಿನ ಊಟದ ನಂತರ ಶ್ವೇತಾ ಹೊರಟಳು. ಟ್ಯಾಕ್ಸಿ ಮನೆಯ ಬಾಗಿಲಲ್ಲಿ ಬಂದು ನಿಂತಿತ್ತು. ಪಲ್ಲವಿ ಅತ್ತೆಯ ಆದೇಶದ ಮೇರೆಗೆ ಶ್ವೇತಾಳಿಗೆ ಸೀರೆಯೊಂದನ್ನು ರವಿಕೆ ಖಣದೊಂದಿಗೆ ಉಡುಗೊರೆಯನ್ನಾಗಿ ಕೊಟ್ಟಳು.

“ಇದೆಲ್ಲಾ ಯಾಕೆ?” ಸಂಕೋಚದಿಂದ ನುಡಿದಳು.

“ಅತ್ತೆ ಕೊಡು ಅಂತಂದ್ರು ಕೊಡ್ತಿದೀನಿ. ಜಂಭ ಮಾಡ್ಬೇಡ.”

“ಇದರಲ್ಲಿ ಜಂಭ ಏನೇ?.. ನೀನು ಬಹಳ ಬದಲಾಗಿ ಹೋಗಿದೀಯ ಚೈತ್ರಾ, ಮದುವೆಯಾದ ಕೂಡ್ಲೇ ನೀನು ಹೀಗೆ ಬದಲಾಗ್ತೀಯ ಅಂತ ನಾನು ಅಂದ್ಕೊಂಡಿರ್ಲಿಲ್ಲ.”

“ನಿನಗೆ ಹಾಗೆನ್ನಿಸ್ತಿದೆ. ನೀನೊಂದು ಥರ ವಿಚಿತ್ರ..”

“ಭುಜಂಗನಂಥ ಗಂಡ ಸಿಕ್ಕಿದಾರೆ ಅಂತ ನಿಂಗೆ ಅಹಂಕಾರ ಬಂದ್ಬಿಟ್ಟಿದೆ. ನೀನು ನನ್ನ ಜೊತೆಗೆ ಇದ್ದಿದ್ದರೆ, ಹೀಗೆ ನನ್ನ ಕಾಲು ಉಳುಕ್ತಿರ್ಲಿಲ್ಲ..”

“ಇದರಲ್ಲಿ ನನ್ನ ತಪ್ಪೇನಿದೆ?.. ನಾನು ಭುಜಂಗನೊಡನೆ ಸಂತೋಷವಾಗಿರುವುದು ನಿನಗೆ ಕಣ್ಣುರಿಯಾಗಿ ಕಾಣ್ತಿದೆ. ಅದಕ್ಕೇ ಹೀಗೆಲ್ಲಾ ಮಾತಾಡ್ತೀಯ.. ನಿನ್ನನ್ನ ನನ್ನ ಆಪ್ತ ಸ್ನೇಹಿತೆ ಅಂತ ತಿಳ್ಕೊಂಡಿದ್ನಲ್ಲೇ.. ಬದಲಾಗಿರೋಳು ನೀನು..”

“ಇಲ್ಲ ಚೈತ್ರಾ.. ನಿನಗೆ ಸಹಾಯ ಬೇಕಾದಾಗ ನನ್ನನ್ನು ಉಪಯೋಗಿಸಿಕೊಂಡಿದೀಯ...ನನಗೆ ಕಂಪೆನಿ ಕೊಡುಕ್ಕೆ ನಿನಗಿಷ್ಟವಿದ್ದಿದ್ರೆ, ಭುಜಂಗ ಖಂಡಿತಾ ಬೇಡ ಅಂತ ಹೇಳ್ತಿರಲಿಲ್ಲ.. ಎರಡು ದಿನ ಇದ್ದು ಹೋಗು ಅನ್ನೋ ಸೌಜನ್ಯದ ಮಾತು ನಿನ್ನ ಬಾಯಲ್ಲಿ ಬಂದಿಲ್ಲ..”

“ನಾನು ಈ ಮನೆಗೆ ಸೊಸೆ. ಎರಡೇ ದಿನಗಳಲ್ಲಿ ನನಗೆ ಅಧಿಕಾರ ಬಂದು ಬಿಡುಲ್ಲ. ನೀನು ಊರಿಗೆ ಹೋಗೋದೇ ಸರಿ ಅಂತ ಅನ್ನಿಸ್ತು. ಹೇಳ್ದೆ.. ನಿನಗಿಷ್ಟವಿದ್ದರೆ ಇರು. ನಾನೇಕೆ ಬೇಡ ಅಂತ ಅನ್ನಲಿ?..”

"ಹೀಗೆ ಅತ್ತೂ ಕರೆದು ಔತಣ ಮಾಡಿಸಿಕೊಳ್ಳುವ ಇಷ್ಟವಿಲ್ಲ ನಂಗೆ.. ನಿನಗೋಸ್ಕರ ಬಂದಿದ್ದೆ. ಈಗ ನಿಂಗೆ ನಾನು ಬೇಡ. ಭುಜಂಗನ ಪ್ರೀತಿ, ಮುದ್ದು ನಿನ್ನನ್ನು ಬದಲಾಯಿಸಿದೆ. ಅದು ತಪ್ಪು ಅಂತ ನಾನು ಹೇಳಿದರೆ, ಅದು ತಪ್ಪಾಗುತ್ತೆ, ನನಗೆ ಶರತ್‌ನ ನೆನಪು ತುಂಬಾ ಕಾಡ್ತಿದೆ..." ಇದ್ದಕ್ಕಿದ್ದಂತೆ ಶ್ವೇತಾ ಅಳತೊಡಗಿದಾಗ ಚೈತ್ರಾ ತಬ್ಬಿಬ್ಬುಗೊಂಡಳು. ಏನು ಹೇಳಬೇಕೆಂದು ತೋಚದೇ ಸುಮ್ಮನಾದಳು. ಶ್ವೇತಾ ಟ್ಯಾಕ್ಸಿಯನ್ನು ಹತ್ತಿದಳು.

ಟ್ಯಾಕ್ಸಿ ಅತ್ತ ಹೊರಟು ಹೋದ ಮೇಲೆ, ಪಲ್ಲವಿ ಹಾಗೂ ಭುಜಂಗ ತಮ್ಮ ರೂಮಿಗೆ ಬಂದರು. ಭುಜಂಗ ಪಲ್ಲವಿಯ ತೊಡೆಯ ಮೇಲೆ ತಲೆಯನ್ನಿಟ್ಟು ಮಲಗಿದ. ಅವಳ ಕೈ ಬೆರಳುಗಳು ಅವನ ತಲೆ ಗೂದಲಿನಲ್ಲಿ ಆಡಿದವು.

"ಪಲ್ಲವೀ, ನಿನ್ನ ಸ್ನೇಹಿತೆ ಯಾಕೋ ಬೇಸರಗೊಂಡಂತಿತ್ತು. ಏನಾಯ್ತು ಅಂತ ಕೇಳಿದ್ಯಾ?"

"ಅವಳಿಗೆ, ನನ್ನ ಮದುವೆ ಆಗಿ ಹೋಯ್ತು ಅಂತ ಹೊಟ್ಟೆ ಉರಿ..."

"ನನಗೆ ಹಾಗೆನ್ನಿಸಲಿಲ್ಲ.. ಅವಳಿಗೆ ಹಣದ ಅವಶ್ಯಕತೆ ಇರಬಹುದೇನೋ.."

"ಕೆಲಸಕ್ಕೆ ಸೇರಿಕೊಳ್ಳಲಿ.. ಶರತ್ ಅವಳಿಗೆ ಬೇಕಾದಷ್ಟು ಹಣವನ್ನು ಕೊಟ್ಟಿದ್ದಾನೆ.. ನನ್ನ ಅಮ್ಮನ ಒಡವೆಗಳನ್ನೆಲ್ಲ ಅವಳಿಗೆ ಕೊಟ್ಟು ಬಿಟ್ಟಿದ್ದಾನೆ.."

"ನಿನಗೆ ಎಲ್ಲವನ್ನು ವಾಪಸ್ಸು ಕೊಟ್ಟಳು ಅಂತ ಹೇಳಿದ್ದೆ"

"ಅಮ್ಮನ ಹತ್ರ ಏನಿತ್ತು, ಎಷ್ಟಿತ್ತು ಅಂತ ನಂಗೆ ಲೆಖ್ಖ ಗೊತ್ತಿಲ್ಲ, ಅವಳು ಹೇಳ್ದೇ ಇದ್ದಿದ್ರೆ ನಂಗೆ ಗೊತ್ತೇ ಆಗ್ತಿರಲಿಲ್ಲ"

"ಮತ್ತೇ? ನಿನ್ನ ಸ್ನೇಹಿತೇನ ನೀನು ಮೆಚ್ಚಬೇಕು, ಪ್ರಾಮಾಣಿಕ ಹುಡುಗಿ."

"ನೀವೇನೂ ಅವಳನ್ನು ಹೊಗಳಬೇಕಾಗಿಲ್ಲ.."

"ಯಾಕೇ ಪಲ್ಲವಿ?..ಕೋಪ ಯಾಕೆ?"

"ಅವಳಿಗೆ ನಿಮ್ಮ ಮೇಲೆ ಕಣ್ಣು, ನಾನೇನೋ ಅವಳ ಪ್ರೇಮಿಯನ್ನು ಕಿತ್ಕೊಂಡ ಥರ ಆಡ್ತಾಳೇ. ಅವಳು ಬೇಗ ಹೋದದ್ದು ಒಳ್ಳೇದೇ ಆಯ್ತು.."

"ಅವಳನ್ನ ದೂರ ಮಾಡ್ಕೋಬೇಡ. ಅವಳು ನಿನ್ನ ಹಳೇ ಗೆಳತಿ.. ನಿನ್ನ ಎಲ್ಲಾ ವಿಷಯಗಳನ್ನು ತಿಳಿದಿರುವವಳು. ಸಮಯ ಅಂದರೆ ಸಹಾಯಕ್ಕೆ ಸಿಗಬಹುದು.."

"ಅಂಥಾ ಸಮಯ ಬಂದಾಗ ನೋಡ್ಕೊಂಡ್ರಾಯ್ತು.. ಈಗ ಅವಳ ವಿಷಯ ಸಾಕು.. ಈಗ ನಿದ್ದೆ ಬರ್ತಿದೆ. ಸ್ವಲ್ಪ ಹೊತ್ತು ಮಲಗ್ತೀನಿ." ಅವಳು ಅವನ ತಲೆಯನ್ನು ಕೆಳಕ್ಕೆ ಇರಿಸಿ, ದಿಂಬಿಗೆ ತಲೆ ಊರಿ ಮಲಗಿದಳು. ಅವನು ಅವಳ ಸೊಂಟವನ್ನು ಬಳಸಿದ.

"ಮಧ್ಯಾಹ್ನ ನಿದ್ದೆ ಮಾಡಿದ್ರೆ ಮೈ ಬರುತ್ತೆ ಅಂತ ನೀನೇ ಹೇಳಿದ್ದೆ ಈಗ?"

"ಈಗ ಏನೂ ಇಲ್ಲ, ಅದು ಮದುವೆಗೆ ಮುಂಚೆ ಆಡಿದ ಮಾತು.."

"ಅಂದ್ರೇ ಡುಮ್ಮಿ ಆದ್ರೂ ಪರವಾಗಿಲ್ಲ ಅಂತೀಯ..'

"ಒಂದು ದಿನ ಮಲಗಿದ್ರೆ ಡುಮ್ಮಿ ಏನೂ ಆಗುಲ್ಲ. ಬೇಕಾದ್ರೆ ನೀವೂ ಮಲಗಬಹುದು."

"ಓಹೋ.. ನೀನೇ ಆಹ್ವಾನ ಕೊಡ್ತಿದೀಯ.. ನನ್ನ ಪ್ರೀತಿ ನಿಂಗೆ ಇಷ್ಟವಾಯ್ತಾ ಚಿನ್ನಾ?"

ಎನ್ನುತ್ತಾ ಅವಳನ್ನು ತಬ್ಬಿಕೊಂಡು, ಮುಖಕ್ಕೆ ಮುಖವನ್ನಿಟ್ಟ. ಅವಳು ನಾಚಿ, ಅವನ ಮುಖವನ್ನು ಅತ್ತ ತಳ್ಳಿದಳು. "ನಂಗೊತ್ತಿಲ್ಲ" ಎನ್ನುತ್ತಾ ತನ್ನ ಕೈಯಿಂದ ಮುಖವನ್ನು ಮುಚ್ಚಿಕೊಂಡಳು. ಅವನು ಕೈಯನ್ನು ಸರಿಸಿ, ತುಟಿಗೆ ತುಟಿಯನ್ನು ಸೇರಿಸಿದ. ಅಷ್ಟರಲ್ಲಿ ಫೋನು ರಿಂಗಾದ ಸದ್ದು ಕೇಳಿಸಿತ್ತು. ಕೆಳಗಿನಿಂದ ತಾಯಿ ಕೂಗು ಹಾಕಿದಳು. ಭುಜಂಗ, ಆಲಿಂಗನವನ್ನು ಸಡಿಲಿಸಿ, ಕೆಳಗಿಳಿದು ಬಂದು ಫೋನನ್ನೆತ್ತಿಕೊಂಡ. ಹೇಮಾ ಫೋನು ಮಾಡಿದ್ದಳು. ಸ್ವಲ್ಪ ಹೊತ್ತು ಮಾತನಾಡಿ ಮುಗಿಸಿ ಮೇಲೆ ಬಂದ. ಪಲ್ಲವಿ ಅವನಿಗಾಗಿ ಎದುರು ನೋಡುತ್ತಿದ್ದಳು. "ಹೇಮಾ, ಫೋನು ಮಾಡಿದ್ದು" ಎಂದು ಅವನು ಹೇಳಿದ ಕೂಡಲೇ ಅವಳ ಮುಖ ಕಪ್ಪಿಟ್ಟಿತು. ಮುಖ ತಿರುಗಿಸಿದಳು.

"ಚಿನ್ನಾ" ಎನ್ನುತ್ತಾ ಅವಳನ್ನು ತನ್ನಡೆಗೆ ಎಳೆದುಕೊಂಡು ಮಲಗಿದ. ಅವಳ ಮುಖ ದಪ್ಪಗಾಗಿತ್ತು.. ಶ್ವೇತಾ...ಹೇಮಾ...ಎಲ್ರಿಗೂ ನೀವು ಬೇಕು.. ನಿಮ್ಮ ಮದುವೆಯಾಗಿದೆ ಅಂತ ಅವರ್‍ಯಾರಿಗೂ ಗೊತ್ತಿಲ್ವಾ?"

"ಮದುವೆಯಾಗಿ ಮೂರು ದಿನಗಳು ಕಳೆದಿದೆ ಅಷ್ಟೇ.. ಹೇಮಾ ನನ್ನ ಕಸಿನ್ ಶ್ವೇತಾ ನಿನ್ನ ಸ್ನೇಹಿತೆ.. ಹೇಮಾ ಏನು ಹೇಳಿದ್ಲು ಗೊತ್ತಾ!"

"ಏನಾದ್ರೂ ಹೇಳಿಕೊಳ್ಳಲಿ ನಂಗೆ ಬೇಕಿಲ್ಲ.. ನೀವು ನಂಗೆ ಮೋಸ ಮಾಡ್ತಿದೀರಾ.."

"ಮೋಸಾನಾ! ಇಲ್ಲ ಚಿನ್ನಾ.. ಹೆಣ್ಣು ಅಂದ್ರೆ ಏನು ಅಂತ, ನಿನ್ನಿಂದಲೇ ನನಗೆ ಅನುಭವ ಆದದ್ದು.. ಈ ತುಟಿಗಳ ಸಿಹಿ, ಈ ಸಂಗ ಸುಖ.. ಎಲ್ಲಾ ನಿನ್ನಿಂದಲೇ ನನಗೆ ಸಿಕ್ಕಿದ್ದು.. ಈ ಬ್ರಹ್ಮಚಾರಿಯ ವ್ರತಭಂಗ ಮಾಡಿದವಳೂ ನೀನೇ.. ನೀನೇ ಸರ್ವಸ್ವ...ನನಗೆ."

"ನೀವು ಹೀಗೇ ಇರ್ತೀರಿ ಅಂತ ಏನು ಗ್ಯಾರಂಟಿ? ಬದಲಾದರೆ?"

"ತಮಾಷೆಗೂ ಈ ಮಾತನ್ನು ಹೇಳ್ಬೇಡ ಪಲ್ಲವೀ.. ನಾನು ಪ್ರೀತಿಸಿದ್ದು ನಿನ್ನೊಬ್ಬಳನ್ನೇ ಮದುವೆಯಾಗಿದೀನಿ.. ಸುಖವಾಗಿಟ್ಟುಕೊಂಡಿದೀನಿ. ನನ್ಮೇಲೆ ನಂಬಿಕೆ ಇಲ್ವಾ ನಿಂಗೆ..."

"ನಿಮ್ಮನ್ನು ನಂಬ್ತೀನಿ ಭುಜಂಗ್.. ಆದರೆ, ಹೇಮಳ ಮೇಲೆ, ಶ್ವೇತಾಳ ಮೇಲೆ ನನಗೆ ನಂಬಿಕೆ ಇಲ್ಲ.."

"ನನ್ಮೇಲೆ ನಂಬಿಕೆ ಇದೆಯಲ್ಲ ಅಷ್ಟೇ ಸಾಕು.. ಈಗ ಇನ್ನು ಈ ಮಾತು ಬೇಡ.."

"ಮದುವೆಯಾಗಿ ಮೂರು ದಿನಗಳಾದ್ರೂ, ನೀವು ಗರುಡ ಮಚ್ಚೆಯನ್ನು ತೋರಿಸಿಯೇ ಇಲ್ಲ" ನಗುತ್ತಾ ಕೇಳಿದಳು. ನನಗೆ ಸುಳ್ಳು ಹೇಳಿದ್ರಾ?" ಸಂಶಯದಿಂದ ಕೇಳಿದಳು.

"ನೀನು ನೋಡಿಲ್ಲ ಅಷ್ಟೇ.. ನಾನು ಹತ್ತಿರ ಬಂದೊಡನೆ, ನಾಚಿಕೆಯಿಂದಲೋ, ಭಯದಿಂದಲೋ ಕಣ್ಣುಗಳನ್ನು ಮುಚ್ಚಿಕೊಳ್ತೀಯ.. ಸರಿಯಾಗಿ ನೋಡಿ, ಹೇಗಿದೆ ಅಂತ ನಂಗೂ ಹೇಳು. ನಾನು ಕನ್ನಡಿಯ ಮುಂದೆ ನಿಂತು, ಸರ್ಕಸ್ ಮಾಡಿದರೂ ಸರಿಯಾಗಿ ಕಾಣಿಸುಲ್ಲ

ಎನ್ನುತ್ತಾ, ಅವಳಿಗೆ ಬೆನ್ನು ಮಾಡಿ ಕುಳಿತ. ಅವಳು ಅವನ ಹದವಾದ ಬೆನ್ನ ಮೇಲೆ ತಲೆಯನ್ನಿಟ್ಟು, ಗರುಡ ಮಚ್ಚೆಯ ಮೇಲೆ ಕೈಯಾಡಿಸಿದಳು.."

"ಪಲ್ಲವೀ.. ಯಾಕೇ ಮೌನವಾಗ್ಬಿಟ್ಟೆ!.. ಅವಳನ್ನು ತನ್ನ ಮುಂದಕ್ಕೆ ಎಳೆದುಕೊಂಡ."

"ಏನನ್ನೋ ಯೋಚಿಸ್ತಿದ್ದೆ.. ನಾನು."

"ನೀನು ಏನು ಯೋಚಿಸ್ತಿದ್ದೆ ಅಂತ ಹೇಳ್ಲಾ? ನಮಗೆ ಹುಟ್ಟುವ ಮಕ್ಕಳಿಗೂ ಗರುಡ ಮಚ್ಚೆ ಇರಲಿ ಅಂತ...ಅಲ್ವಾ?" ಕೆಣಕುವಂತೆ ಕೇಳಿದ.

"ಹೌದು." ಎಂದಳು ನಾಚುತ್ತಾ. ಮುಖ ಕೆಂಪಾಗಿತ್ತು.

"ಇದಕ್ಕೆ ನಾಚಿಕೆ ಏಕೆ ಪಲ್ಲವೀ.. ನಾವು ಮೊದಲೇ ಒಬ್ಬರನ್ನೊಬ್ಬರು ಅರಿತಿದ್ದೆವು.. ಈಗ ಮದುವೆಯೂ ಆಗಿದೆ.. ನಮ್ಮ ಪ್ರೀತಿಗೆ ಫಲ ಸಿಗಲೇ ಬೇಕು ತಾನೇ.. ನೋಡ್ತಿರು ಸಾಲು ಸಾಲಾಗಿ ಮಕ್ಕಳಾಗುತ್ತವೆ.. ಎಲ್ಲದಕ್ಕೂ ಗರುಡ ಮಚ್ಚೆ ಇರುತ್ತೆ, ಯಾಕೆ ಅಂದ್ರೆ ಎಲ್ಲಾ ನನ್ನ ಮಕ್ಕಳಲ್ವಾ!.. ಆದರೆ ಬೆನ್ನ ಮೇಲಿರಬಾರದು.. ಹೊಟ್ಟೆಯ ಮೇಲೋ, ಕತ್ತಿನ ಮೇಲೋ ಎಲ್ಲರಿಗೂ ಗೊತ್ತಾಗುವಂತಿರಬೇಕು.."

"ನಿಮ್ಮ ಮಚ್ಚೆ ಯಾರಿಗೂ ಕಾಣ್ಸಲ್ಲ ಅಂತ ದುಃಖಾನಾ?"

"ಹಾಗೇನಿಲ್ಲ, ಚಿಕ್ಕವಯಸ್ನಲ್ಲಿ ಎಲ್ಲರೂ ನೋಡಿದಾರೆ. ದೊಡ್ಡೋನಾದ್ಮೇಲೆ ಈಗ ನಿನಗೇ ಈ ಮಚ್ಚೇನ ತೋರಿಸಿರೋದು.. ನಿನಗೊಬ್ಬಳಿಗೇ ನೋಡುವ ಹಕ್ಕು ಇರೋದು.."

"ಹಾಗಾದ್ರೆ ಹೇಮ ನೋಡಿಲ್ವಾ?.." ಅವನು ಸಂಶಯದಿಂದ ಅವಳ ಕಡೆ ನೋಡಿದ.

"ಈಗ ಅವಳ ಮಾತೇಕೆ?.. ಅವಳೆಂದೂ ಈ ಗರುಡ ಮಚ್ಚೆಯ ಬಗ್ಗೆ ಕೇಳಿಲ್ಲ.. ಅವಳಿಗೆ ಗೊತ್ತಿದೆಯೋ ಇಲ್ಲವೋ ನನಗೆ ಅದೂ ಗೊತ್ತಿಲ್ಲ.."

"ಹಾಗಾದ್ರೆ, ನೀವಿಬ್ಬರೂ ಏನು ಮಾತಾಡ್ತಿದ್ರಿ?.."

"ನನಗೂ ಅವಳಿಗೂ ಎಂಟೋ ಒಂಭತ್ತೋ ವರ್ಷದ ಅಂತರ.. ಚಿಕ್ಕ ವಯಸ್ನಲ್ಲಿ ಸ್ಕೂಲು ಕಾಲೇಜು, ಪಾಠ, ಪರೀಕ್ಷೆ ಅಂತ ಕಾಲ ಕಳೆದು ಹೋಯ್ತು.. ನಾನು ಡಿಗ್ರಿ ಮುಗಿದ ಮೇಲೆ, ತೋಟ, ಗದ್ದೆ ಅಂತ ಇದನ್ನೆಲ್ಲ ವಹಿಸಿಕೊಂಡೆ.. ಅವಳಾಯ್ತು ಅವಳ ಓದು ಅಂತ ಅಷ್ಟೇ.. ನಾನೆಂದೂ ಮೆಡಿಕಲ್ ಸೈನ್ಸ್ ಬಗ್ಗೆ ತಿಳಿದುಕೊಳ್ಳುವ ಆಸಕ್ತಿಯನ್ನು ತೋರಲಿಲ್ಲ, ಅವಳೆಂದೂ ಗದ್ದೆ ತೋಟದ ಬಗ್ಗೆ ಕೇಳಲಿಲ್ಲ, ಅಂತರವಿದ್ದೇ ಇತ್ತು."

"ಆದರೂ ನೀವಿಬ್ರೂ ಮದುವೆಯಾಗಲು ಸಿದ್ಧವಾಗಿದ್ರಿ. ಈಚೆಗೆ ಅವಳೆಂದೂ ನಿಮ್ಮ ಜೊತೆಯಲ್ಲಿ ತೊರೆಯ ಬಳಿಗೆ ಬರ್ಲಿಲ್ವಾ?.."

"ಇಲ್ಲ, ಬಂದಂತೆ ನೆನಪಿಲ್ಲ.. ಪಲ್ಲವಿ ಈ ತನಿಖೆ ಸಾಕು...ಮದುವೆಗೆ ಮೊದಲು, ನಿನಗೆಂದು ಈ ಅನುಮಾನ ಬರ್ಲಿಲ್ವಾ?"

"ಇಲ್ಲ, ಯಾಕೋ ಅನುಮಾನ ಈಗ ಕಾಡ್ತಿದೆ.."

"ಯಾಕೆ ಪಲ್ಲವಿ? ನನ್ನ ಪ್ರೀತೀಲಿ ಏನಾದ್ರೂ ಕಡಿಮೆ ಅಂತ ಅನ್ನಿಸುತ್ತಾ..? ನನ್ನೊಂದಿಗೆ ಮುಕ್ತವಾಗಿ ಬೆರೆತಿದೀಯಲ್ಲ.. ನಾನೇನಾದ್ರೂ ವಂಚನೆ ಮಾಡಿದೀನಾ?.."

"ಇಲ್ಲ ಭುಜಂಗ್.. ಆದರೂ ಏನೋ ಆತಂಕ ಕಾಡುತ್ತೆ.."

"ಆತಂಕ ಯಾಕೋ ಮರೀ.. ಹೀಗಿದ್ರೆ ಬದುಕು ಕಷ್ಟ ಆಗುತ್ತೆ.. ಮನಸ್ಸು ಕೆಡುತ್ತೆ.."

"ನನ್ನ ಬಗ್ಗೆ ನಿಮ್ಮ ಮನೆಯವರ್‍ಯಾರಿಗೂ ಪೂರ್ಣ ವಿವರ ತಿಳಿದಿಲ್ಲ, ತಿಳಿದ ದಿನ ನನ್ನ ನಿಮ್ಮ ಸಂಬಂಧಕ್ಕೆ ಕಲ್ಲು ಹಾಕಿದರೆ?.. ನೆನೆಸಿಕೊಂಡರೇ.. ಆತಂಕ ಆಗುತ್ತೆ."

"ಹೇಳೋರು ಯಾರು?.. ಅಸಂಬದ್ಧ ಆಲೋಚನೆಗಳು ನಿಂದು.."

"ಶ್ವೇತಾ, ಚಿದಾನಂದ, ಮಂದಾಕಿನಿ ಇವರುಗಳನ್ನು ನಂಬೋದು ಹೇಗೆ?.."

"ಯಾರು ಏನೇ ಹೇಳಿಕೊಡಲಿ.. ನಾನು ಅದಕ್ಕೆಲ್ಲ ತಲೆ ಕೆಡಿಸಿಕೊಳ್ಳುಲ್ಲ.. ಈ ನಿನ್ನ ಪುಟ್ಟ ತಲೇಲಿ ವಿಪರೀತ ಕಸ ತುಂಬಿಕೊಂಡಿದೆ. ಅದನ್ನು ಮೊದಲು ತೆಗೀಬೇಕು. ಇದನ್ನೆಲ್ಲ ಮರೆಯುವ ಹಾಗೆ ದಿವ್ಯೌಷಧವನ್ನು ಕೊಡ್ತೀನಿ..." ಬೊಗಸೆ ಕೈಯಲ್ಲಿ ಮುಖವನ್ನು ಹಿಡಿದ.

"ನಾನು ಆದಷ್ಟು ಬೇಗ ಗರ್ಭಿಣಿಯಾಗ್ಬೇಕು.." ಅವಳು ಸಂಕೋಚವನ್ನು ಬದಿಗೊತ್ತಿ ಅವನ ಕಡೆ ನೋಡುತ್ತಾ ಹೇಳಿದಳು.

"ಆತುರ ಯಾಕೆ ಚಿನ್ನಾ?...ನಿಧಾನವಾಗಿ ಆಗಲಿ.. ಕೆಲವು ವರ್ಷ ಹಾಯಾಗಿರೋಣ."

"ಇಲ್ಲ, ನಿಧಾನ ಬೇಡ..ನಾನು ಗರ್ಭಿಣಿ ಆದರೆ, ನನ್ನ ನಿಮ್ಮ ಸಂಬಂಧ ಗಟ್ಟಿಯಾಗುತ್ತೆ. ನಮ್ಮಿಬ್ಬರನ್ನು ಬೇರ್ಪಡಿಸಲು ಯಾರಿಂದಲೂ ಆಗುವುದಿಲ್ಲ."

"ಹೀಗೆಲ್ಲಾ ಯೋಚಿಸ್ಬೇಡ ಪಲ್ಲವಿ.. ಯಾರೂ ನಮ್ಮಿಬ್ಬರ ಮಧ್ಯೆ ಬಿರುಕನ್ನು ಉಂಟು ಮಾಡಲು ಸಾಧ್ಯವಿಲ್ಲ.. ಇನ್ನು ಮುಂದೆ ಇಂಥ ಮಾತುಗಳನ್ನಾಡಿದರೆ ನನ್ನ ಮೇಲಾಣೆ. ಅವನು ಬೇಸರಗೊಂಡು ನುಡಿದಾಗ ಅವಳು ಮೆತ್ತಗಾದಳು. ಅವನಿಗೆ ಒತ್ತಿ ಮಲಗಿದಳು. ಆದರೂ, ಆತಂಕದ ಗೆರೆಗಳು ತಲೆಯೊಳಗೆ ಅತ್ತ ಇತ್ತ ಓಡಾಡುತ್ತಿದ್ದವು.

* * *

ಟ್ಯಾಕ್ಸಿಯಿಂದ ಇಳಿದು ಶ್ವೇತಾ, ನಿಧಾನವಾಗಿ ತನ್ನ ಮನೆಯನ್ನು ತಲುಪಿದಳು. ಚಿದಾನಂದ ಟ್ಯಾಕ್ಸಿಯವನಿಗೆ ಹಣವನ್ನು ಕೊಟ್ಟು ಕಳುಹಿಸಿದ. ಅವಳು ತನ್ನ ಹ್ಯಾಂಡ್ ಬ್ಯಾಗ್‌ನಲ್ಲಿದ್ದ ಬೀಗದ ಕೈಯಿಂದ, ಮನೆಯ ಮುಂಬಾಗಿಲನ್ನು ತೆರೆದಳು. ಇಬ್ಬರೂ ಒಳಗೆ ಅಡಿ ಇಟ್ಟರು. ಮನೆಯೊಳಗೆ ಒಂದು ತರಹ ವಿಚಿತ್ರ ವಾಸನೆ ತುಂಬಿಕೊಂಡಿತ್ತು. ಚಿದಾನಂದ ತಾನೇ, ಕಿಟಕಿಗಳನ್ನು ತೆರೆದ. ಶ್ವೇತಾ ಉಸ್ಸೆಂದು ಸೋಫಾದ ಮೇಲೆ ಕುಳಿತಳು.

"ಕಾಲು ನೋಯ್ತಾ ಇದೆಯಾ?" ಅವನು ಕೇಳಿದ.

"ಹೂಂ...ಸ್ವಲ್ಪ ನೋಯ್ತಿದೆ. ಹೊಟ್ಟೆಯೂ ಹಸೀತಿದೆ.. ಅಣ್ಣ ಒಂದೆರಡು ದಿನಗಳಿಂದ

ಮನೆಗೆ ಬಂದಂತಿಲ್ಲ, ಎದುರಿಗೆ ಒಂದು ಸಣ್ಣ ಹೋಟೆಲ್ಲಿದೆ. ಅಲ್ಲಿಂದ ಏನನ್ನಾದ್ರೂ ತಿನ್ನುಕ್ಕೇ ತರ್ತೀರಾ?'' ಚಿದಾನಂದ ತಲೆಯಾಡಿಸಿ ಎದ್ದ. ಅವನು ಬರುವಷ್ಟರಲ್ಲಿ ಅವಳು ಬಟ್ಟೆಯನ್ನು ಬದಲಾಯಿಸಿ ನೈಟಿಯನ್ನು ಧರಿಸಿದ್ದಳು. ಮುಖವನ್ನು ತೊಳೆದು ತಲೆಗೂದಲನ್ನು ಎತ್ತಿ ಕಟ್ಟಿದ್ದಳು.

ಚಿದಾನಂದ, ಭಾತ್ ಹಾಗೂ ಪೂರಿ ಪಲ್ಯಗಳನ್ನು, ಮೊಸರನ್ನವನ್ನು ಕಟ್ಟಿಸಿಕೊಂಡು ಬಂದಿದ್ದ. ಅವಳು ಟೇಬಲ್ ಮೇಲೆ ಹರಡಿ, ತಟ್ಟೆಗಳನ್ನಿಟ್ಟಳು. ''ಚಿದಾನಂದ್ ಕೈ ಕಾಲು ತೊಳೆದು ಬನ್ನಿ...ಊಟ ಮಾಡೋಣ..''

''ಅವನಿಗೆ ಹಸಿವಿಲ್ಲದಿದ್ದರೂ, ಊಟದ ಕೆಲಸವನ್ನು ಮುಗಿಸಲೋಸುಗ, ಕೈಕಾಲುಗಳನ್ನು ತೊಳೆದು ಬಂದ. ಇಬ್ಬರೂ ಒಟ್ಟಿಗೇ ಕುಳಿತು ತಿಂದರು.

''ಅಬ್ಬಾ.. ಈಗ ಹಿತವಾಯ್ತು.. ಒಂಥರಾ ಸಂಕಟ ಆಗ್ತಿತ್ತು..'' ಎಂದಳು.

''ಭುಜಂಗನ ತಾಯಿ ಒಂದಿಷ್ಟು ತಿಂಡಿಗಳನ್ನು ಹಾಕಿ ಕೊಟ್ಟಿದ್ರು.. ಮಧ್ಯದಲ್ಲಿ ಎಲ್ಲಾದ್ರೂ ತಿನ್ನಬಹುದಾಗಿತ್ತು..'' ಅಂತಂದ.

''ಯಾಕೋ ತಿನ್ಬೇಕು ಅಂತ ಅನ್ನಿಸ್ಲಿಲ್ಲ..'' ಮೂತಿ ಚೂಪು ಮಾಡಿದಳು. ಅವನು ಸುಮ್ಮನೇ ನಕ್ಕ.

''ಗಂಟೆ ಒಂಭತ್ತಾಯ್ತು.. ನಾನು ಇನ್ನು ಹೊರಡ್ತೀನಿ.. ಯಾವುದಾದ್ರೂ ಬಸ್ಸು ಸಿಕ್ಕಿದರೆ ಬೆಳಗಿನ ಹೊತ್ತಿಗೆ ಊರಿಗೆ ಹೋಗಿ ಸೇರ್ತೀನಿ.'' ಹೊರಡಲನುವಾದ.

''ನಾಳೆ ಹೋದರೆ ಆಗುಲ್ವಾ ಚಿದಾನಂದ್... ಈಗ ರಾತ್ರಿ ಯಾಕೆ ಹೋಗ್ಬೇಕು..?''

''ಇಲ್ಲಿದ್ದು ಏನ್ಮಾಡ್ಲಿ..? ನಿಮ್ಮನ್ನು ತಲುಪಿಸಬೇಕಾಗಿತ್ತು. ಅದು ಆಯ್ತಲ್ಲಾ..''

''ಅಣ್ಣನೂ ಬಂದಿಲ್ಲ ಒಬ್ಬಳೇ ಆಗಿ ಬಿಡ್ತೀನಿ.. ಏನ್ಮಾಡ್ಲೀ?''

''ನಿಮ್ಮ ಅಣ್ಣಂಗೆ ಫೋನು ಮಾಡಿ. ಎಲ್ಲಿದ್ರೂ ಬಾ ಅಂತ..'' ಸಲಹೆ ನೀಡಿದ.

''ಅವನು ಸಿಗೋದು ಇಲ್ಲ, ಅಷ್ಟು ಸುಲಭವಾಗಿ ಬರೋನೂ ಅಲ್ಲ, ನೀವು ಹೋಗ್ಲೇ ಬೇಕು ಅಂತಿದ್ರೆ ಹೊರಡಿ.. ನಾನ್ಯಾಕೆ ತಡೀಲಿ?''

''ಹಾಗಲ್ಲ, ಇಲ್ಲಿ ಏನೂ ಕೆಲಸವಿಲ್ಲವಲ್ಲ...ಯಾರೂ ಸ್ನೇಹಿತರಿಲ್ಲ..''

''ಹೇಮನ್ನ ನೋಡೋಕೆ ಹೋಗುಲ್ವಾ!''

''ಇಲ್ಲ, ನನಗೆ ಅವಳಲ್ಲಿ ಹೆಚ್ಚು ಸಲುಗೆ ಇಲ್ಲ, ಏನೂ ಮಾತಾಡೋದಿರುಲ್ಲ..'' ನಾನು ಇರಲೇ ಬೇಕು ಅಂತಿದ್ರೆ ಇರ್ತೀನಿ. ನಾಳೆ ಹೊರಡ್ತೀನಿ..'' ಅವಳು ತಲೆಯಾಡಿಸಿದಳು.

ಹೊರಗೆ ದೀವಾನಸದ ಮೇಲೆ ಮಲಗಿದ್ದ ಚಿದಾನಂದನಿಗೆ ಇನ್ನು ನಿದ್ದೆ ಹತ್ತಿರಲಿಲ್ಲ, ಹೆಜ್ಜೆಯ ಸಪ್ಪಳ ಕೇಳಿಸಿತು. ಕತ್ತಲೆಯಲ್ಲಿ ಯಾರೆಂದು ತಕ್ಷಣಕ್ಕೆ ಗೊತ್ತಾಗಲಿಲ್ಲ, ''ಯಾರು? ಎನ್ನುತ್ತಾ ಗಾಬರಿಯಿಂದ ಎದ್ದು ಕುಳಿತ. ''ನಾನು'' ಎಂದು ಪಿಸುದನಿಯಲ್ಲಿ ಹೇಳಿ, ಶ್ವೇತಾ ಅವನ

ಮೇಲೆ ಒರಗಿದಳು. ಕೈಗಳು ಅವನನ್ನು ಬಲವಾಗಿ ಹಿಡಿದು ಅಪ್ಪಿಕೊಂಡವು.

"ಏನ್ಮಾಡ್ತಿದೀರಿ?..ಬಿಡಿ.." ಅವನು ಅವಳನ್ನು ಸರಿಸಲು ನೋಡಿದ. ಅವಳು ಮತ್ತೂ ಬಲವಾಗಿ ತಬ್ಬಿಕೊಂಡು, ಅವನ ಮುಖದ ಮೇಲೆ ಮುತ್ತಿನ ಮಳೆಯನ್ನು ಕರೆದಳು. ಕೈಗಳು ಅವನ ದೇಹದ ಮೇಲೆ ಸರಿದಾಡಿದವು.. ಕೊಸರಿಕೊಂಡು ಏಳಲು ಪ್ರಯತ್ನಿಸಿದವನನ್ನು ತಡೆದಳು. "ಒಂಟಿತನ ಸಾಕಾಗಿದೆ. ಈ ಸಂಗ ಬೇಕೆನಿಸಿದೆ..." ಎನ್ನುತ್ತಾ ಅವನನ್ನು ಪ್ರಚೋದಿಸಿದಳು. "ಚಿದಾನಂದ..ಪ್ಲೀಸ್..ನನ್ನಾಸೆಯನ್ನು ಪೂರೈಸಿ..." ಆತುರವನ್ನು ತೋರಿದಳು.

"ಪ್ಲೀಸ್..ಶ್ವೇತಾ.. ಇದು ಸರಿಯಲ್ಲ.." ಅವನೆಂದ..ಬಹಳ ಕಷ್ಟಪಟ್ಟು

"ಸರಿ, ತಪ್ಪು ಯಾವುದೂ ನನಗೆ ಗೊತ್ತಿಲ್ಲ. ನನಗೆ ನೀವು ಬೇಕು.. ನನ್ನ ಆಸೆಯನ್ನು ಪೂರೈಸಿ.." ಎನ್ನುತ್ತಾ ಅವನಿಗೆ ಮಾತನಾಡಲು ಅವಕಾಶ ಕೊಡದಂತೆ, ಅವನನ್ನು ತನ್ನ ಜಾಲಕ್ಕೆ ಎಳೆದುಕೊಂಡಳು.. ಚಿದಾನಂದ ಹೆದರಿದ. ಬೆವತು ಹೋದ. ಮೊಟ್ಟ ಮೊದಲ ಬಾರಿಯ ಹೆಣ್ಣಿನ ಸಹವಾಸ ಅವನಲ್ಲಿ ಗೊಂದಲವನ್ನುಂಟು ಮಾಡಿತ್ತು.. ನಿಧಾನವಾಗಿ ಅವಳ ಆಸೆಗೆ ಪ್ರತಿಕ್ರಿಯಿಸಿದ.. ಆದರೂ ಮುಜುಗರ ಸಂಕೋಚಗಳಿಂದ ಮೌನಿಯಾದ. ಅವನು ತಬ್ಬಿಬ್ಬುಗೊಂಡಿರುವನೆಂದು, ಅನುಭವದಿಂದ ತಿಳಿದ ಶ್ವೇತಾ, ತಾನೇ ಹೇಳಿದಳು.

"ಥ್ಯಾಂಕ್ಸ್ ಚಿದಾನಂದ್...ಬೇಸರವೆಲ್ಲಾ ನೀಗಿ ಹೋಯ್ತು.. ಆದರೆ ನೀವು ಎಂಜಾಯ್ ಮಾಡ್ಲಿಲ್ಲ.. ಗಂಡಸಾಗಿ ಯಾಕೆ ಭಯಗೊಂಡಿದ್ರಿ?"

"ನಾನು...ಯಾವ ಹೆಣ್ಣಿನ ಜೊತೆಯೂ ..ಹೀಗೆ..." ತೊದಲಿದ.

"ನನಗೆ ಗೊತ್ತಾಯ್ತು.." ಅವಳು ಕಿಲ ಕಿಲ ನಕ್ಕಳು.

"ಇದು ತಪ್ಪಲ್ವಾ?.." ಅವನು ಮುಗ್ಧನಂತೆ ಕೇಳಿದ.

"ಏನು ತಪ್ಪು..?.. ಹಸಿವು ನೀರಡಿಕೆಯಂತೆ ಇದೂ ಕೂಡಾ ಒಂದು ಅಗತ್ಯ ಅಂತ ನನ್ನ ಅನಿಸಿಕೆ. ನಾನಂತೂ ಎಂಜಾಯ್ ಮಾಡ್ದೆ.. ನಿಮಗ್ಯಾಕೆ ಅಪರಾಧಿ ಮನೋಭಾವ..? ಚೈತ್ರ ನಿಮ್ಮನ್ನು ಬಯಸಿದ್ಲು ಅಂತ ನಂಗೊತ್ತು. ಅವಳೊಂದಿಗೆ ನಿಮ್ಮ ಸಂಬಂಧ ಇದ್ದರೂ ನನಗೆ ಏನೂ ಅನ್ನಿಸುಲ್ಲ."

"ಅವಳು ನನ್ನ ತಂಗಿ. ಅವಳನ್ನು ಎಂದೂ ಆ ರೀತಿಯಿಂದ ನಾನು ನೋಡಲಿಲ್ಲ."

"ನಂಗೊತ್ತು, ಚೈತ್ರಾ ನಂಗೆ ಹೇಳಿದ್ಲು.. ಅವಳು ಈಗ ಹಳೆಯದನ್ನೆಲ್ಲಾ ಮರೆತು ಭುಜಂಗನ ತೋಳ್ತೆಕ್ಕೆಯಲ್ಲಿ ಸುಖವನ್ನು ಅನುಭವಿಸುತ್ತಿದಾಳೆ.. ನಾನ್ಯಾಕೆ ವಂಚಿತಳಾಗ್ಬೇಕು?"

"ಅಂದರೇ..? ನಿಮಗೆ ಗೊತ್ತು ಅವಳು ಯಾವ ತಪ್ಪನ್ನು ಮಾಡಿಲ್ಲ."

"ಯಾಕೆ ಮಾಡಿಲ್ಲ! ನಿಮ್ಮನ್ನು ಬಯಸಿದ್ಲು.. ರಾಜೀವನ್ನ ಮದುವೆಯಾದ್ಲು, ರಾಜೀವನ ಜೊತೆ ಸಂಬಂಧ ಇರ್ಲಿಲ್ಲ ಅಂತ ಅವಳು ಹೇಳಿದ್ಲು...ನಾವು ನಂಬಿದೆವು.."

"ಆ ವಿಷಯವೆಲ್ಲಾ ಗೊತ್ತೇ ಇದೆ. ಈಗ್ಯಾಕೆ ಆ ವಿಷಯ?"

"ಅವಳು ನಂಗೆ ಮೋಸ ಮಾಡಿದ್ದು, ರಾಜೀವನಿಂದ ಹಣ ಸಿಕ್ಕ ಮೇಲೆ ನಂಗೆ, ನನ್ನ ಅಣ್ಣನಿಗೆ ಸ್ವಲ್ಪ ಸ್ವಲ್ಪ ಕೊಡ್ತೀನಿ ಅಂತ ಅಂದಿದ್ದು, ಈಗ ಎಲ್ಲವನ್ನೂ ಭುಜಂಗನಿಗೆ ಕೊಟ್ಟಿದಾಳೆ.. ಇದು ಅನ್ಯಾಯ ಅಲ್ವಾ?.. ನನಗೆ ಅಣ್ಣ ತಂಗಿ ಇಬ್ಬರು ವಂಚನೆ ಮಾಡಿದ್ರು.."

"ಏನೋ ನಂಗೆ ಗೊತ್ತಿಲ್ಲ.. ನಾನೆಂದೂ ಕೇಳಿಲ್ಲ"

"ಕೇಳ್ಬೇಕಾಗಿತ್ತು ಚಿದಾನಂದ್.. ಈ ಹಣದಲ್ಲಿ ನಿಮಗೂ, ನನಗೂ ಪಾಲು ಇದೆ.. ಭುಜಂಗನಿಗೆ ಏನು ಹಕ್ಕು ಇದೆ?.. ಅವನು ಹಣದಾಸೆಗೇ ಚೈತ್ರನ್ನ ಮದುವೆಯಾಗಿರಬಹುದು.."

"ನನಗೆ ಆ ಹಣ ಬೇಕಾಗಿಲ್ಲ....ಭುಜಂಗನಿಗೂ ಹಣದಾಸೆ ಇಲ್ಲ, ನಂಗೊತ್ತು.."

"ನನಗೆ ಬೇಕಾಗಿದೆ, ಕೇಳಿದ್ರೆ, ರಾಜೀವನ ತಾಯಿಗೆ ವಾಪಸ್ಸು ಕೊಡ್ಬೇಕು ಅಂತ ಇದೀನಿ ಅಂತಂದ್ಲು.. ನಿಮಗೆ ಆ ಕೆಲಸವನ್ನು ವಹಿಸಿದಾಳಂತೆ.. ಸುಳ್ಳು ಹೇಳಿದಾಳೇನೋ..."

"ಹೂಂ, ಆದರೆ ಅವರು ಇಲ್ಲಿಲ್ಲ, ಬೇರೆ ಊರಿಗೆ ಹೊರಟು ಹೋಗಿದಾರೆ.. ಬಿಡಿ ಈಗ ಆ ಮಾತೆಲ್ಲಾ ಯಾಕೆ?... ಅದು ಅವಳಿಗೆ ಸೇರಿದ್ದು.. ನಂಗಂತೂ ಬೇಕಾಗಿಲ್ಲ.."

"ಏನೋ ಮಾತು ಮಾತಿಗೆ ಹೇಳ್ದೆ..." ಎನ್ನುತ್ತಾ ಅಲ್ಲಿಯೇ ಅವನ ಮಗ್ಗುಲಲ್ಲಿ ಮಲಗಿದಳು. ಅವನ ಕೈಯನ್ನು ತನ್ನ ಎದೆಯ ಮೇಲೆ ಇರಿಸಿಕೊಂಡಳು. ಅವನು ಚಿಂತೆಯಲ್ಲಿ ಮುಳುಗಿ ಹೋಗಿದ್ದ. ಅವಳು ಆರಾಮವಾಗಿ ಗೊರಕೆ ಹೊಡೆಯಲು ಪ್ರಾರಂಭಿಸಿದಾಗ, ಮತ್ತೂ ಕಸಿವಿಸಿಗೊಂಡ.

ಬೆಳಿಗ್ಗೆ ಅವನಿಗೆ ಎಚ್ಚರವಾದಾಗ, ಅವಳು ಮಗ್ಗುಲಲ್ಲಿ ಇರಲಿಲ್ಲ, ರಾತ್ರಿಯ ಅನುಭವಗಳು ನಿಧಾನವಾಗಿ ಅರಿವಿಗೆ ಬಂದವು. ಮುಂದೇನು ಮಾಡಬೇಕೆಂದು ತೋಚದೇ ಹಾಗೇ ಮಲಗಿದ್ದ. ಅವಳು ಬಿಸಿ ಬಿಸಿಯಾದ ಕಾಫಿಯ ಕಪ್‌ಗಳನ್ನು ಹಿಡಿದುಕೊಂಡು ಬಂದು ಎಬ್ಬಿಸಿದಳು. ಕಣ್ಣುಗಳನ್ನು ಬಿಟ್ಟು ನೋಡಿದ. ಗಡಿಬಿಡಿಯಿಂದ ಎದ್ದು ಕೂತ.

"ಗುಡ್ ಮಾರ್ನಿಂಗ್ ಚಿದಾನಂದ್. ಏಳಿ ಕಾಫಿ ತಗೊಳ್ಳಿ.." ಲವಲವಿಕೆಯಿಂದ ಮುಗುಳ್ನಗುತ್ತಿದ್ದವಳನ್ನೇ ಗಮನಿಸಿದ.. ಸ್ನಾನ ಮಾಡಿ, ಶುಭ್ರವಾದ ಬೇರೆ ಬಟ್ಟೆಯನ್ನು ಧರಿಸಿದ್ದಳು. ಮಂದಹಾಸ ಬೀರಿದ.. "ಅಬ್ಬಾ ಮೂಡ್ ಸರಿಯಾಗಿದೆ ಅಂತಾಯ್ತು" ಎಂದಳು.

"ಯಾಕೆ.. ಚೆನ್ನಾಗಿ ಕಾಣ್ತೆದೀರಿ... ಅದಕ್ಕೇ ನೋಡ್ದೆ "ಎಂದು ಕುಳಿತು ಕಾಫಿಯ ಬಟ್ಟಲನ್ನೆತ್ತಿಕೊಂಡ.

"ಒಂದು ರಾತ್ರಿಯ ಅನುಭವದಲ್ಲಿ ನಾನು ಸುಂದರಿಯಾಗ್ಬಿಟ್ಟೆ, ಇದನ್ನೇ ಮಾಯೆ ಅನ್ನೋದು.. ಇನ್ಮೇಲೆ ನೋಡ್ತಿರಿ.. ನಿಮಗೆ ಒಂಟಿತನ ಕಷ್ಟ ಅಂತನ್ನಿಸುತ್ತೆ.."

"ನಾನೊಂದು ತೀರ್ಮಾನಕ್ಕೆ ಬಂದಿದೀನಿ..." ಕಾಫಿಯನ್ನು ಹೀರುತ್ತಾ ಹೇಳಿದ. ತಲೆಯಾಡಿಸಿದಳು. ನಾನೆಂದೂ, ಮುಖ ತೊಳೆಯದೇ ಕಾಫಿಯನ್ನು ಕುಡಿದವನಲ್ಲ, ನನ್ನಿಂದ ಏನೇನನ್ನೋ ಮಾಡಿಸ್ತಿದೀರಿ...ನೀವು.." ಮುಖ ಗೊಂದಲದ ಗೂಡಾಗಿತ್ತು.

"ಅದಕ್ಕೇ? ಆತ್ಮಹತ್ಯೆ ಮಾಡ್ಕೊಳ್ತೀರಾ?" ಗೊಳ್ ಎಂದು ನಕ್ಕಳು.

“ಇಲ್ಲ, ನಿಮ್ಮನ್ನು ಮದುವೆ ಆಗ್ತೀನಿ. ಶಿಸ್ತಿನಿಂದ ಜೀವನ ನಡೆಸ್ತೀನಿ...”

“ಶಿಸ್ತು ಸಂಯಮ ಎಲ್ಲಾ, ನೆನ್ನೆ ರಾತ್ರಿಯಲ್ಲಿ ಎಲ್ಲೋ ಹಾರಿ ಹೋಯಿತು.. ಪರವಾಗಿಲ್ಲ.. ಆದರೆ ನನಗೆ ಮದುವೆಯಾಗುವ ಮನಸ್ಸಿಲ್ಲ.. ನನಗೆ ಬ್ರಹ್ಮಚಾರಿಯ ಸಹವಾಸ ಬೇಕು. ಗಂಡನ ಅಧಿಕಾರಯುತವಾದ ಸಹವಾಸ ಬೇಡ. ನನಗೆ ಬೇಕಾದಾಗ, ನಾನು ಪಡೆಯುವಂತಿರಬೇಕು. ಅದೇ ನನಗೆ ಇಷ್ಟ.” ಅವನ ಕೆನ್ನೆಯನ್ನು ಹಿಂಡಿದಳು.

“ಇದಕ್ಕೇ ನಾನು ಒಪ್ಪದಿದ್ದರೆ.. ಹಾಗೆಲ್ಲಾ ಇರುಕ್ಕೆ ಆಗುತ್ತಾ?” ಕೇಳಿದ.

“ಒಪ್ಪದೇ ಇರುವ ಛಾನ್ಸೇ ಇಲ್ಲ, ನಾನು ಮೇನಕೆಯಂತೆ.. ನೋಡ್ತಿರಿ. ಒಂದಲ್ಲ ಒಂದು ದಿನ ನಾನು ಭುಜಂಗನನ್ನು ನನ್ನ ಬಲೆಗೆ ಬೀಳಿಸಿಕೊಳ್ಳುವವಳೇ..” ಅವಳು ಅಟ್ಟಹಾಸದಿಂದ ನಕ್ಕಾಗ ಅವನು ಬೆದರಿದ. ‘ಹಾಗೆ ಮಾಡ್ಬೇಡಿ’ ಎನ್ನುವ ನೋಟವಿತ್ತು ಕಣ್ಣುಗಳಲ್ಲಿ.

“ಹೆದರ್ಬೇಡಿ, ತಮಾಷೆಗೆ ಅಂದೆ...ಭುಜಂಗ ಹೇಮಳ ಸಹವಾಸ ಮಾಡಿರಬಹುದು. ಈಗ ಚೈತ್ರಳ ಗಂಡನಾಗಿದಾನೆ. ನನಗೆ ಅಂಥವನು ಬೇಕಿಲ್ಲ...” ಆದರೂ ಚಿದಾನಂದ ಆತಂಕಗೊಂಡಿದ್ದ. ಎಲ್ಲೋ ಇವಳ ಮಾನಸಿಕ ಆರೋಗ್ಯ ಸರಿಯಾಗಿಲ್ಲದಿರಬಹುದು ಅಂತಂದುಕೊಂಡ. ಮೈ ಸಣ್ಣಗೆ ನಡುಗಿತು. ತಾನೆಂಥಾ ಅವಿವೇಕಿಯಾದೆ ಎಂದು ಪರಿತಪಿಸಿದ.

“ನನ್ನ ಮಾತಿಗೆ ಹೆದರಿ ನಡುಗ್ತಿದೀರಾ..? ಅಷ್ಟು ಕೆಟ್ಟ ಹೆಣ್ಣು ನಾನಲ್ಲ.. ನೀವು ನನಗೆ ಒಲಿಯದಿದ್ದರೂ ಸರಿ. ನಾನೇ ನಿಮ್ಮನ್ನು ಒಲಿಸಿಕೊಳ್ತೀನಿ..” ಎಂದು ಹೇಳಿ ಅವನ ಕೆನ್ನೆಗಳನ್ನು ಹಿಂಡಿ, ಕಾಫಿಯ ಕಪ್‌ಗಳನ್ನೆತ್ತಿಕೊಂಡು ಅಡಿಗೆ ಮನೆಯ ಕಡೆಗೆ ನಡೆದಳು. ನೋಯುತ್ತಿದ್ದ ಕೆನ್ನೆಗಳನ್ನು ಬೆರಳಿನಿಂದ ಉಜ್ಜಿಕೊಂಡ. ಇವಳ ಕಾಮದಾಸೆಗೆ ತಾನು ಒಪ್ಪಬಾರದಾಗಿತ್ತೆನಿಸಿತ್ತು. ಬೆಳಿಗ್ಗೇನೇ ಎದ್ದು ಊರಿಗೆ ಹೊರಟು ಬಿಟ್ಟಿದ್ರೆ ಚೆನ್ನಾಗಿತ್ತು. ‘ಇವಳ ಕೈಲಿ ಸಿಕ್ಕಿ ಬಿದ್ನಲ್ಲ’ ಅಂತ ಹಲುಬಿದ. ಬ್ರೆಡ್ ಟೋಸ್ಟ್‌ಗಳನ್ನು ಮಾಡಿ ಟೀಯನ್ನು ತಯಾರಿಸಿದಳು. ಚಿದಾನಂದ ಸ್ನಾನ ಮಾಡಿ ಬಂದ. ಇಬ್ಬರೂ ಕುಳಿತು ತಿಂಡಿಯನ್ನು ತಿಂದರು.

“ನನ್ಮೇಲೆ ಕೋಪಾನೋ? ತಿರಸ್ಕಾರಾನೋ.. ಏನೋ ಗಹನವಾಗಿ ಯೋಚನೆ ಮಾಡುತ್ತಿರುವಂತಿದೆ.” ಮೋಹಕ ನಗೆಯನ್ನು ಎಸೆದಳು.

“ನಾನು ಈಗಲೇ ಊರಿಗೆ ಹೊರಟು ಬಿಡೋಣ ಅಂತಂದ್ಕೊಂಡಿದೀನಿ.”

“ಹೋಗ್ಲೇ ಬೇಕು ಅಂತಿದ್ರೆ ಹೋಗಿ. ಆದರೆ ನೀವು ಇನ್ನು ಒಂದೆರಡು ದಿನಗಳು ಇದ್ರೂ, ನಂಗೆ ಬೇಸರವಿಲ್ಲ.”

“ಹಾಗಲ್ಲ, ನನ್ನ ಹತ್ರ ಬೇರೆ ಸೆಟ್ ಬಟ್ಟೆಗಳಿಲ್ಲ..” ಅವಳು ನಕ್ಕಳು.

“ಇದು ದೊಡ್ಡ ಸಮಸ್ಯೇನಾ?.. ಕೊಂಡು ಕೊಂಡ್ರಾಯ್ತು.”

“ಅಷ್ಟೆಲ್ಲಾ ನನ್ನ ಹತ್ರ ಹಣವೂ ಇಲ್ಲ..”

“ಈಗ್ಲಾದ್ರೂ ಹಣ ಮಾಡುವ ಯೋಚನೆ ಮಾಡಿ ಚಿದಾನಂದ್.. ಚೈತ್ರಳ ಹತ್ರ ಹಣ ಹಾಗೇ ಬಿದ್ದಿದೆ. ಕೇಳಿ ಕೊಡಬಹುದು.. ಮಜವಾಗಿರಬಹುದು..”

"ಬೇಡ, ನಂಗೆ ಆ ಹಣ ಬೇಡ.." ಖಡಾ ಖಂಡಿತವೆಂಬಂತೆ ಹೇಳಿದ.

"ಆ ಹಣ ಬೇಡ; ಈ ಹಣ ಬೇಡ, ನಿಮಗೆ ಬೇಡವಾದ್ರೆ ನನಗಾದ್ರೂ ಕೊಡಿಸಿ. ನಾನು ಏನಾದ್ರೂ ಬಿಸಿನೆಸ್ ಮಾಡ್ತೀನಿ. ನಿಮಗೂ ಕಮಿಷನ್ ಕೊಡ್ತೀನಿ."

"ನನಗೆ ಅದೆಲ್ಲ ತಿಳಿಯುಲ್ಲ, ನನಗೆ ಕಮಿಷನ್ ಬೇಡ, ನಾನು ಕೇಳುಲ್ಲ"

"ಸರಿ ಬಿಡಿ, ನೀವು, ನೀವೂ ಉದ್ಧಾರವಾಗುಲ್ಲ; ನನ್ನನ್ನೂ ಉದ್ಧಾರವಾಗುಕ್ಕೆ ಬಿಡುಲ್ಲ. ಆದರೆ ನಾನು ಹಣವನ್ನು ಪಡೆಯದೇ ಬಿಡುವುದಿಲ್ಲ.. ಅಷ್ಟನ್ನು ಚೈತ್ರಾ ಒಬ್ಬಳೇ ಅನುಭವಿಸಲು ನಾನು ಬಿಡುವುದಿಲ್ಲ, ಈ ಚರ್ಚೆ ಸಾಕು. ಎಲ್ಲಾದ್ರೂ ತಿರುಗಾಡಿ ಬರೋಣ ಬನ್ನಿ"

"ನೆನ್ನೆ ಮೊನ್ನೆ ಎಲ್ಲಾ ಕಾಲು ನೋವು ಇತ್ತು. ತಿರುಗಾಡಿದ್ರೆ ಜಾಸ್ತಿ ಆಗುಲ್ವಾ!"

"ನೋವು ಸ್ವಲ್ಪ ಕಡಿಮೆ ಆಗಿದೆ. ಮನೇಲಿ ಅಡಿಗೆ ಸಾಮಾನುಗಳಿಲ್ಲ, ಎಲ್ಲವನ್ನೂ ತಂದು ಅಡಿಗೆ ಮಾಡುವ ಸಹನೆ ನನಗಿಲ್ಲ. ಹೋಟೆಲ್ಲಿನಲ್ಲಿ ಊಟ ಮಾಡಿ ಬರೋಣ."

ಇಬ್ಬರೂ ಷಾಪಿಂಗ್ ಸೆಂಟರ್‌ನಲ್ಲಿ ಸುತ್ತಾಡಿದರು. ಶ್ವೇತಾ ಅವನಿಗೆಂದು ಎರಡು ಸೆಟ್ ಬಟ್ಟೆಗಳನ್ನು ಕೊಂಡಳು. ನಂತರ ಸಮೀಪದಲ್ಲಿದ್ದ ಹೋಟೆಲ್ಲಿಗೆ ಹೋದರು. ಅವನು ತಂದಿದ್ದ ಹಣದಲ್ಲಿ ಸಾಕಷ್ಟು ಖರ್ಚಾಗಿತ್ತು. ನಂತರ ಮನೆಗೆ ವಾಪಸ್ಸಾದರು.

ಶ್ವೇತಾಳಿಗೆ ಚಿದಾನಂದನ ಸಹವಾಸ ಪ್ರಿಯವಾಗಿತ್ತು. ಅವನನ್ನು ಒಬ್ಬನೇ ಮಲಗಲು ಬಿಡದೇ ಅವನ ಮಗ್ಗುಲಲ್ಲಿ ಮಲಗಿ, ತನ್ನ ಆಸೆಯನ್ನು ತೀರಿಸಿಕೊಂಡಳು. ಚಿದಾನಂದ ಯಾಂತ್ರಿಕವಾಗಿ ಅವಳ ಆಸೆಗೆ ಪ್ರತಿಕ್ರಿಯಿಸಿದ್ದ. ಅವಳ ಕಾಮಚೇಷ್ಟೆಗಳಿಗೆ ಮಣಿದಿದ್ದ.

ಆ ರಾತ್ರಿ ಅವಳು ಬೇಡ ಎಂದು ಹೇಳಿದರೂ, ಊರಿಗೆ ವಾಪಸ್ಸು ಹೊರಟ.

"ನನ್ನ ವರ್ತನೆಯಿಂದ ನಿಮಗೆ ಅಸಹ್ಯವಾಗಿರಬಹುದು. ಅದಕ್ಕೇ ಹೊರಟು ಬಿಟ್ರಾ? ನೀವು ಇನ್ನು ಒಂದೆರಡು ದಿನಗಳು ಇರಬಹುದಾಗಿತ್ತು ಎಂದಳು."

"ಇಲ್ಲಿದ್ದು ಏನು ಮಾಡಲಿ! ಕೈಯಲ್ಲಿ ಕೆಲಸವಿಲ್ಲ, ಜೇಬಿನಲ್ಲಿ ಕಾಸಿಲ್ಲ, ಅಲ್ಲಿ ಏನಾದ್ರೂ ಉಪಾಯ ಸಿಗುತ್ತದೆ. ಅವರುಗಳು ಫೋನು ಮಾಡಿ ವಿಚಾರಿಸುವ ಮೊದಲು ನಾನು ಹೊರಟು ಬಿಡುವುದು ಒಳ್ಳೆಯದು. ಇಲ್ಲದಿದ್ರೆ ಅಪಾರ್ಥ ಮಾಡಿಕೊಳ್ತಾರೆ ಅಷ್ಟೇ.." ಎಂದು ಹೇಳಿ ಹೊರಟೇ ಬಿಟ್ಟ, ಅವಳು ಮತ್ತೆ ಬಲವಂತ ಮಾಡಲಿಲ್ಲ.

* * *

ಊರಿಗೆ ವಾಪಸ್ಸಾದ ಚಿದಾನಂದ ಮೊದಲಿನಂತಿಲ್ಲ ಎನ್ನುವುದನ್ನು ಗಮನಿಸಿದಳು ಮಂದಾಕಿನಿ. "ಏನಾಯ್ತೋ ಚಿದೂ, ಶರತ್‌ನೇನಾದ್ರೂ ನೋಡೋಕೆ ಹೋಗಿದ್ಯಾ?" ಆತಂಕದಿಂದ ಪ್ರಶ್ನಿಸಿದಳು.

"ಇಲ್ಲಮ್ಮ ನಂಗೂ ಅವನಿಗೂ ಏನು ಸಂಬಂಧ?"

"ಮತ್ಯಾಕೋ ಮಂಕಾಗಿದೀಯ?"

"ಇಲ್ಲಿ ಎಷ್ಟು ದಿನಾಂತ ಇರೋದಮ್ಮ.. ನಾನು ಬೇರೆ ಕೆಲಸಾನ ಹುಡುಕ್ತೀನಿ."

"ಭುಜಂಗ, ನಿನ್ನನ್ನ ಇಲ್ಲಿಗೆ ಕರೆಸ್ಕೊಂಡ್ನಲ್ಲ ಆ ವಿಷಯ ಏನಾಯ್ತು?"

"ಮದುವೆಯಾಯ್ತು. ಎಲ್ಲವನ್ನೂ ಮರೆತ್ಬಿಟ್ಟ ಅಂತ ಕಾಣುತ್ತೆ."

"ಹಾಗೇನೂ ಇಲ್ಲ ಮದುವೆಯಾದ ಹೊಸದು.. ಹೆಂಡತಿ ಜೊತೆ ಕಾಲ ಕಳೀತಿದಾನೆ. ಅಕ್ಕನ ಹತ್ರ ನಾನು ಮಾತಾಡ್ತೀನಿ. ಅವಳಿಗೂ ಗೊತ್ತಿರುತ್ತೆ."

"ಏನೂ ಬೇಡಮ್ಮ. ನಂಗೆ ಈ ಕೆಲಸ ಕಾರ್ಯಗಳಲ್ಲಿ ಆಸಕ್ತಿಯೂ ಇಲ್ಲ, ಅನುಭವವೂ ಇಲ್ಲ, ಏನಾದ್ರೂ ವ್ಯಾಪಾರ ಮಾಡ್ತೀನಿ.. ಇಲ್ದಿದ್ರೆ ಹೊರಗಡೆ ಕೆಲ್ಸಕ್ಕೆ ಸೇರಿಕೊಳ್ತೀನಿ. ಈ ಗದ್ದೆ ತೋಟದ, ವ್ಯವಸಾಯ ನಂಗೆ ಗೊತ್ತಿಲ್ಲ, ತಿಳಿದುಕೊಳ್ಳುವ ಸಹನೆ, ಆಸಕ್ತಿ ನನಗಿಲ್ಲ"

"ಈ ಮಾತನ್ನು ಮೊದಲೇ ಯೋಚಿಸ್ಬೇಕಾಗಿತ್ತು. ಈಗ ಹೀಗೆ ಹೇಳಿದ್ರೆ ? ಭುಜಂಗನ ಹತ್ರ ನೀನೇ ಮಾತಾಡು.. ನಾನಂತೂ ಇಲ್ಲಿಂದ ಎಲ್ಲಿಗೂ ಬರಲ್ಲ"

"ಇಲ್ಲೇನಿದೆ ಅಂತ ಇಲ್ಲಿ ಇರ್ಬೇಕು.?"

"ಇಲ್ಲಿ ಚೈತ್ರ ಇದಾಳೆ. ಅಕ್ಕನ ಮನೆ ಇದೆ. ನನ್ನ ಒಂದು ಹೊತ್ತಿನ ಊಟಕ್ಕೆ ಕೊರತೆ ಇಲ್ಲ.." ಅಕ್ಕಂಗೆ ಮನೆಕೆಲಸಗಳಲ್ಲಿ ಸಹಾಯ ಮಾಡ್ತೀನಿ."

"ಚೈತ್ರನ ಹಂಗಿನಲ್ಲಿರ್ತೀಯ!.. ಅವಳಿಗೆ ನಿನ್ನ ಬಗ್ಗೆ ಯಾವ ಗೌರವವೂ ಇಲ್ಲ, ಅವಳು ನಿನ್ನ ಸ್ವಂತ ಮಗಳಲ್ಲ "ನಿನ್ನ ಅಕ್ಕನಿಗೂ ಕ್ರಮೇಣ ಬೇಸರಬರಬಹುದು."

"ಅವಳಿಗೆ ತಿಳುವಳಿಕೆ ಸಾಲದು. ಈಗ ಬದಲಾಗ್ತಾ ಇದಾಳೆ.. ಒಂದಲ್ಲ ಒಂದು ದಿನ ನನ್ನನ್ನೇ ತಾಯಿ ಅಂತ ಒಪ್ಕೋತಾಳೆ ನೋಡ್ತಿರು.." ಭುಜಂಗನೂ ಒಪ್ಪಿಸ್ತಾನೆ.

"ನಿನಗೆ ಭ್ರಮೆ. ಅವಳು ನಿನ್ನನ್ನ ತಾಯಿ ಅಂತ ಒಪ್ಕೊಳುಲ್ಲ, ನನ್ನನ್ನ ಅಣ್ಣ ಅಂತ ತಿಳ್ಕೊಳುಲ್ಲ.. ನಮ್ಮ ಪಾಡಿಗೆ ನಾವು ಎಲ್ಲಾದ್ರೂ ಇರೋಣ. ಇವರುಗಳ ಸಹವಾಸವೇ ಬೇಡ."

"ಏನಾಯ್ತೋ ನಿಂಗೆ? ನೀನೇ ಅವಳಿಗೆ ಯಾವ್ಯಾವದೋ ಸಹಾಯ ಮಾಡ್ದೆ ಅಂತ ಹೇಳ್ದೆ ಈಗೇನಾಯ್ತು! ಅವಳು ಭುಜಂಗನ್ನ ಮದುವೆಯಾದದ್ದು ನಿಂಗೆ ಸಹಿಸ್ತಿಲ್ವಾ!"

"ಅನುಕೂಲಸ್ಥರ ಮಗಳಾಗಿ ಬೆಳೆದಳು. ಆಗಲೂ ನಮಗೆ ಉಪಯೋಗವಿರಲಿಲ್ಲ, ಈಗ ಅನುಕೂಲಸ್ಥರ ಮನೆಯನ್ನು ಸೇರಿದಾಳೆ. ನಮಗೆ ಬಂದ ಲಾಭವೇನು! ನೀನು ಇವಳನ್ನು ಹೆತ್ತು ಕೊಟ್ಟಿದ್ದಕ್ಕೆ ಎರಡು ಮೂರು ಲಕ್ಷ ರೂಪಾಯಿಗಳನ್ನಾದ್ರೂ ಇಸ್ಕೋ ಬೇಕಾಗಿತ್ತು. ನಮ್ಮ ಬಡತನ ನೀಗಿ ಹೋಗ್ತಿತ್ತು. ನೀನು ಕಷ್ಟ ಪಟ್ಟಿದ್ದಷ್ಟೇ ಆಯ್ತು..."

"ಚಿದೂ..! ಏನೇನೋ ಮಾತಾಡ್ಬೇಡ.. ನಿನ್ನ ಅಪ್ಪ ಒಪ್ಪಿದ್ದಿದ್ರೆ, ಅವರು ನಿನ್ನನ್ನು ಓದಿಸಿರುತ್ತಿದ್ರು. ವಿದ್ಯಾವಂತನಾಗಿರ್ತಿದ್ದೆ. ನಿನ್ನಪ್ಪ ಕಲ್ಲು ಹಾಕಿ ಬಿಟ್ರು. ಆಪತ್ಕಾಲದಲ್ಲಿ ಅವರು ನನಗೆ ಸಹಾಯ ಮಾಡಿದಾರೆ. ಅದನ್ನು ಹಣಕ್ಕಿಂತ ಹೆಚ್ಚು ಅಂತ ಭಾವಿಸಿದೀನಿ."

"ಈ ವಿಷಯವೆಲ್ಲಾ ಈಗ ಚೈತ್ರಂಗೆ ಗೊತ್ತಲ್ಲ, ಅವಳ್ಯಾಕೆ ಸಹಾಯ ಮಾಡ್ಬಾರ್ದು?

ರಾಜೀವನಿಂದ ಸಿಕ್ಕ ಹಣ ಬೇಕಾದಷ್ಟಿದೆ. ನಂಗೆ ಒಂದ್ಯೆದು ಲಕ್ಷ ರೂಪಾಯಿ ಕೊಟ್ರೆ ಸಾಕು. ನಾನು ವ್ಯಾಪಾರ ಮಾಡ್ತೀನಿ. ಸಾಲ ಅಂತ ಕೊಟ್ಬಿಡ್ರಿ"

"ಹಣ ಕೆಟ್ಟದು ಕಣೋ ಚಿದು. ಹಣದಿಂದ ಸಂಬಂಧ ಕೆಟ್ಟು ಹೋಗುತ್ತೆ."

"ಈಗ ಏನು ಉಳಿದಿದೆ? ಯಾವ ಸಂಬಂದ?.. ನನ್ನ ರಕ್ತ ಹಂಚಿಕೊಂಡಿಲ್ಲ."

"ನಿಂಗೆ ಏನೋ ಆಗಿದೆ. ಯಾರೋ ನಿನ್ನ ತಲೆಯನ್ನು ಕೆಡಿಸಿದಾರೆ.. ಎಲ್ಲಿ ಬೇಕಾದ್ರು ಹೋಗು ಕೆಲಸವನ್ನು ಹುಡುಕು. ನನ್ನನ್ನು ಕರೆಸ್ಕೋ.. ನಿಂಗೆ ಬೇಕಾಗಿದ್ರೆ."

"ನೋಡಿದ್ಯಾ ನಿಂಗೂ ನನ್ನನ್ನ ಕಂಡ್ರೆ ತಿರಸ್ಕಾರ. ಓದಿಸ್ಲಿಲ್ಲ, ಸಂಪಾದನೆ ಇಲ್ಲ, ಆಸ್ತಿ ಪಾಸ್ತಿ ಇಲ್ಲ, ಸಿರಿವಂತನಲ್ಲ, ನಂಗೂ ನಾಲ್ಕು ಜನರ ತರಹ ಬಾಳ್ಬೇಕು ಅಂತ ಆಸೆ ಕಣಮ್ಮಾ, ಅದು ತಪ್ಪಾ!"

"ಹಾಸಿಗೆ ಇದ್ದಷ್ಟು ಕಾಲನ್ನು ಚಾಚಬೇಕು.." ತಾಯಿಯ ಮಾತುಗಳನ್ನು ಕೇಳಿಸಿಕೊಳ್ಳುವ ಸಹನೆ ಇಲ್ಲದೇ ಎದ್ದು ಹೋಗಿದ್ದ. ಅರ್ಥಂಬರ್ಥ ಮಾತುಗಳನ್ನು ಕೇಳಿಸಿಕೊಂಡ ವೈದೇಹಿ ತಂಗಿಯ ಬಳಿಗೆ ಬಂದಳು.

"ಏನಂತೆ ನಿನ್ನ ಮಗನ ಗೊಣಗಾಟ...? ಮದುವೆಯ ವಯಸ್ಸಾಗಿದೆ. ಯಾವ್ದಾದ್ರೂ ಹುಡುಗೀನ ಹುಡುಕಿ ಮದುವೆ ಮಾಡು. ಬೇಸರ ಕಳೆಯುತ್ತೆ.. ದಾರಿಗೆ ಬರ್ತಾನೆ." ನಕ್ಕಳು.

"ಇವನಿಗ್ಯಾರು ಹೆಣ್ಣನ್ನು ಕೊಡ್ತಾರ್ಯೇ ಅಕ್ಕಾ.. ವಿದ್ಯಾವಂತನೆ! ಸಂಪಾದಿಸ್ತಾನೆಯೇ? ಸರಿಯಾದ ಒಂದು ನೆಲೆ ಇಲ್ಲ.. ಅದೇ ಬೇಸರ ಅವನಿಗೆ, ಅದನ್ನೇ ಗೊಣಗಿದ. "

"ನಮ್ಮ ಜಮೀನು, ತೋಟ ಗದ್ದೆಗಳನ್ನು ನೋಡ್ಕೊಳ್ತಾನೆ ಅಂತ ಭುಜಂಗನೇ ಹೇಳ್ದ.. ಇವನ ಕೈಲಿ ಆಗುಲ್ವಂತಾ?.. ಮೈ ಬಗ್ಗಬೇಕಲ್ಲ"

"ಅನುಭವ ಏನಿದೆ?.. ನಿಧಾನವಾಗಿ ಹೊಂದ್ಕೋತಾನೆ.. ಸಮಯ ಬೇಕು. ನಾನ್ಹೇಳ್ತೀನಿ." ಮಂದಾಕಿನಿ ಮೆತ್ತಗೆ ನುಡಿದಳು.

"ಮಳೆ ಗಾಳಿ ಚಳಿ ಅಂತ ಲೆಕ್ಕಿಸದೇ, ಕೂಲಿ ಕೆಲಸದವರೊಂದಿಗೆ ಏಗ್ಬೇಕು. ಅದೆಲ್ಲ ಆಗುತ್ಯೇ? ಅದೆಂಥದೋ ಪಿಸಿಯೋ ಅಂತ ತಿರುಗಾಡಿಕೊಂಡಿ, ಹರಟೆ ಹೊಡೆದುಕೊಂಡು ಮಾಡೋ ಕೆಲಸ ಆದ್ರೆ ಸರಿಯೇನೋ.. ಭುಜಂಗನ ಹಾಗೆ ಆಸಕ್ತಿ ಇರ್ಬೇಕು..ಶ್ರಮ ಪಡ್ಬೇಕು.... ಬಲವಂತಕ್ಕೆ ಮಾಡುವ ಕೆಲಸ ಅಲ್ಲ, ಇದು."

"ಎಲ್ಲರೂ ಅವನ ಹಾಗೆ ಇರೋಕೆ ಆಗುತ್ತಾ ಅಕ್ಕಾ! ನಿನ್ನ ಮಗಳಿಗೇ ಈ ಊರು ಹಿಡಿಸ್ಲಿಲ್ಲ..."

"ನನ್ನ ಮಗಳ ಮಾತನ್ನೆತ್ತ ಬೇಡ. ಅವಳು ನಂಗೆ ಕೈ ಕೊಟ್ಳು.. ಈಗ ನಂಗೆ ಯಾರ ಮೇಲೂ ನಂಬಿಕೆ ಇಲ್ಲ.. ನಮ್ಮ ಭಾಗದ ಆಸ್ತಿಯನ್ನೆಲ್ಲಾ ಭುಜಂಗನಿಗೇ ಬರೆದುಕೊಟ್ಟು ಬಿಡ್ತೀನಿ. ಅವನು ಜೀವನ ಪರ್ಯಂತ ನಮ್ಮನ್ನು ನೋಡ್ಕೋತಾನೆ. ಆ ನಂಬಿಕೆ ನನಗಿದೆ."

"ಏನೋ ನಿನ್ನಿಷ್ಟ ಆಸ್ತಿ ನಿನ್ನದು; ನಿರ್ಧಾರ ನಿನ್ನದು. ನಾನೇನು ಹೇಳ್ಲಿ!"

"ಅದೇನೋ ದಿಟ. ನಿಂಗೆ ಈ ಜಮೀನು, ವ್ಯವಸಾಯ, ಹಣಕಾಸು ಯಾವುದೂ ತಿಳಿಯದು. ಮೆಣಸಿನ ಪುಡಿ, ಚಟ್ನಿಪುಡಿ, ಹಪ್ಪಳ, ಸಂಡಿಗೆ ಇದು ಮಾತ್ರ ಗೊತ್ತು."

"ಹಂಗಿಸಿ ಮಾತಾಡ್ಬೇಡ.. ಏನೋ ನಂಗೆ ಬಡತನ. ನೀನು ಶ್ರೀಮಂತೆ.. ನಾನು ಇಲ್ಲಿ ನನ್ನ ಮಗ, ಮಗಳು ಇದಾರೆ ಅಂತ ಇದೀನಿ. ಇಲ್ದಿದ್ರೆ ಎಂದೋ ಹೊರಟು ಹೋಗ್ತಿದ್ದೆ."

"ನೀನು ಹೋಗ್ಲಿ ಅಂತ ನಾನು ಹೇಳಲಿಲ್ವೇ.. ನಿಂಗೆ ಎರಡು ಹೊತ್ತು ಊಟ ಹಾಕುವುದು ನಂಗೆ ಏನೂ ಕಷ್ಟವಿಲ್ಲ, ಅದ್ಸರಿ, ಮಗಳೂ ಮಗಳೂ ಅಂತೀಯಲ್ಲ.. ಅವಳಿಗೆ ನಿನ್ನ ಮೇಲೆ ಅಕ್ಕರೆಯೂ ಇಲ್ಲ, ಗೌರವವೂ ಇಲ್ಲ, ನಿಜ ತಾನೇ... ನಿಂಗ್ಯಾಕೆ ಅಕ್ಕರೆ?"

"ನಾನು ಸಾಕಲಿಲ್ಲ, ಬೆಳೆಸಲಿಲ್ಲ, ಅಕ್ಕರೆ ಬರಲು ಹೇಗೆ ಸಾಧ್ಯ?"

"ಆಗ ಈಗ ಹೋಗಿ ಮಾತನಾಡಿಸು.. ತವರಿನವರು ವಿಚಾರಿಸಲಿಲ್ಲ ಅಂತ ಅವಳಿಗೂ ಅನ್ನಿಸಬಾರ್ದು. ಸಾವಿತ್ರಿಯೂ ಗೊಣಗಬಾರ್ದು, ನಿನ್ನ ಮಗಳು ಬೇಗ ಬಸಿರಿಯಾದ್ರೆ.. ನಿಂಗೆ ಕೈ ತುಂಬಾ ಕೆಲಸ ಇರುತ್ತೆ. ಆದರೆ ಒಂದು ಬೇಜಾರು ಮಂದಾ...ನಂಗಿಂತ ಮುಂಚೆ ನೀನೇ ಅಜ್ಜಿಯಾಗಿ ಬಿಡ್ತೀಯ...ನನ್ನ ಹೊಟ್ಟೇಲಿ ಕಿವಿಚಿದ ಹಾಗಾಗುತ್ತೆ ಕಣೇ." ನಕ್ಕಂತೆ ಮಾಡಿದಳು.

"ಏನೇನೋ ಆಡ್ತೀಯಲ್ಲೇ ಅಕ್ಕಾ...ಆ ಮಗೂಗೆ ನೀನೂ ಅಜ್ಜಿಯೇ ತಾನೇ...?

"ಏನೇನೋ ಅಲ್ಲ, ಬಸಿರಿ, ಬಯಕೆ, ಆರತಿ, ಬಾಣಂತನ, ಮೊಮ್ಮಗುವಿನ ಲಾಲನೆ ಪಾಲನೆ. ಮುದ್ದಾಟ ಎಲ್ಲಾ ನಿಂದೇ ಜವಾಬ್ದಾರಿ. ಹೌದು ತಾನೇ?" ನಂದೇನಿದೆ?"

"ಹೇಮಂಗೂ ಬೇಗ ಮದುವೆ ಮಾಡಿ ಬಿಡು.. ನೀನೂ ಅಜ್ಜಿ ಆಗಬಹುದು."

"ಅವಳು ಮದುವೆಯಾಗ್ತಾಳೋ ಬಿಡ್ತಾಳೋ.. ಇನ್ನು ಮೊಮ್ಮಗುವಿನ ಚಿಂತೆ. ಅದೇನೋ ಗಾದೆ ಹೇಳ್ತಾರಲ್ಲ ಹಾಗೆ..." ವೈದೇಹಿ ಪೆಚ್ಚು ಮುಖದಿಂದ ನುಡಿದಳು, ಮಾತು ನಿಂತಿತು.

* * *

"ಯಾಕೆ ಒಂಥರಾ ಇದೀರಲ್ಲ ಚಿದಾನಂದ್. ಹುಶಾರಾಗಿದೀರಿ ತಾನೆ?...ಅಥವಾ ಇಲ್ಲಿಯ ಜೀವನ ಶೈಲಿ ಬೇಸರ ಹುಟ್ಟಿಸಿದೆಯೋ..." ಭುಜಂಗ ಕೇಳಿದ.

"ಹಾಗೇನಿಲ್ಲ, ಇಲ್ಲಿಗೆ ಹೊಂದಿಕೊಳ್ಳಲು ಸ್ವಲ್ಪ ಸಮಯಬೇಕು.."

"ನಿಮಗೆ ಗದ್ದೆ ತೋಟದ ಉಸ್ತುವಾರಿ ಕೆಲಸ ಹಿಡಿಸ್ಲಿಲ್ಲ ಅಂತಂದ್ರೆ ಬೇಡ ಬಿಡಿ, ಬೇರೆ ಏನು ಮಾಡ್ಬೇಕು ಅಂತಿದೀರಿ..?"

"ಬೇರೆ ಏನನ್ನಾದ್ರೂ ಮಾಡೋಕೆ ನನ್ನ ಕೈಲಿ ಏನಿದೆ!... ಕೆಲಸಾನ ಹುಡುಕೋಣ ಅಂತ ಅಂದ್ಕೊಂಡಿದೀನಿ."

"ಸರಿ, ನಿಮ್ಮಿಷ್ಟ...ನನ್ನದೊಂದು ಸಲಹೆ...ಹೋಟೆಲ್ ನಡೆಸುವ ಇಚ್ಛೆ ಇದ್ದರೆ ಹೇಳಿ. ನಾನು ಅನುಕೂಲ ಮಾಡಿಕೊಡ್ತೀನಿ."

"ಬೇಡ ಬಿಡಿ. ಖರ್ಚು ಬೀಳುತ್ತೆ. ನನ್ಹತ್ರ ಹಣವಿಲ್ಲ."

"ಖರ್ಚಿನ ಬಗ್ಗೆ ಚಿಂತಿಸ್ಬೇಡಿ. ನಿಮಗೊಂದು ಉದ್ಯೋಗವನ್ನು ಕಟ್ಟಿಸಿಕೊಡುವ ಇಚ್ಛೆ ನನಗೆ...ನೀವೂ ನಮ್ಮವರೇ..." ಆತ್ಮೀಯವಾಗಿ ಹೇಳಿದರೂ ಚಿದಾನಂದ ಉತ್ಸಾಹಗೊಳ್ಳಲಿಲ್ಲ.

"ನೋಡೋಣ. ಯೋಚಿಸ್ಬಿಟ್ಟು ಹೇಳ್ತೀನಿ."

"ಯಾಕೆ ಚಿದಾನಂದ್? ನನ್ನ ಸಲಹೆ ನಿಮಗೆ ಹಿಡಿಸಲಿಲ್ವಾ!..

"ನಂಗೆ ಏನು ಹೇಳ್ಬೇಕೋ ಗೊತ್ತಾಗ್ತಿಲ್ಲ. ನಾನು ಒಂದು ಫಜೀತಿಯಲ್ಲಿ ಸಿಕ್ಕಿ ಹಾಕಿಕೊಂಡು ಬಿಟ್ಟಿದೀನಿ..." ಕೈ ಕೈ ಹಿಸುಕಿಕೊಳ್ಳುತ್ತಾ ಆಕಾಶದ ಕಡೆ ನೋಡಿದ.

"ಫಜೀತೀನಾ?....ಹೇಳೋದಾದ್ರೆ ಹೇಳಿ.. ಸಹಾಯ ಮಾಡ್ತೀನಿ. ಏನಾಯ್ತು?"

"ನೀವು ಯಾರಿಗೂ ತಿಳಿಸುಲ್ಲ ಅಂತಂದ್ರೆ ಹೇಳ್ತೀನಿ..." ಪೆಚ್ಚು ಮುಖ ಮಾಡಿದ.

"ಹೇಳಿ. ನಾನು ಯಾರಿಗೂ ಹೇಳುಲ್ಲ." ಆಶ್ವಾಸನೆ ನೀಡಿದ.

"ಚಿದಾನಂದ ತಲೆ ತಗ್ಗಿಸಿ, ತನ್ನ ಹಾಗೂ ಶ್ವೇತಾಳ ನಡುವೆ ನಡೆದ ದೇಹ ಸಂಬಂಧದ ಬಗ್ಗೆ ತಿಳಿಸಿದ, ಇದರಲ್ಲಿ ನನ್ನ ತಪ್ಪು ಏನೂ ಇರಲಿಲ್ಲ. ಅವಳೇ ಬಲವಂತ ಪಡಿಸಿದಳು. ವಿಧಿ ಇಲ್ಲದೇ, ನಾನು ಅವಳ ಆಸೆಗೆ ಪ್ರತಿಕ್ರಿಯಿಸಿದೆ. ಆ ಸಮಯದಲ್ಲಿ ಬೇರೇನೂ ಗೊತ್ತಾಗ್ಲಿಲ್ಲ. ಆದರೆ ನನ್ನಿಂದ ಅಚಾತುರ್ಯ ನಡೆದು ಹೋಯಿತು."

"ಶ್ವೇತಾ ಇಂಥಾ ಹೆಣ್ಣು ಅಂತ ನಾನಂದುಕೊಂಡಿರಲಿಲ್ಲ. ಈ ವಿಷಯ ಪಲ್ಲವಿಗೆ ತಿಳಿಯಬಾರದು. ಆದಷ್ಟೂ ಅವಳಿಂದ ದೂರ ಇದ್ದು ಬಿಡಿ. ಅವಳ ಜೊತೆಗೆಂದು ನಿಮ್ಮನ್ನು ಕಳಿಸಿ ನಾನು ತಪ್ಪು ಮಾಡಿದೆ...ಆದದ್ದಾಗಿ ಹೋಯ್ತು. ಮರೆತು ಬಿಡಿ."

"ನಮ್ಮಿಂದ ತಪ್ಪಾಗಿದೆ. ನಾನು ನಿಮ್ಮನ್ನು ಮದುವೆಯಾಗ್ತೀನಿ ಅಂತ ಹೇಳಿದೆ. ಆದರೆ ಅವಳಿಗೆ ಮದುವೆಯಾಗುವ ಮನಸ್ಸಿಲ್ಲ"

"ಸರಿ, ನಿಮ್ಮ ಪಾಡಿಗೆ ನೀವು ಇದ್ದು ಬಿಡಿ. ಎಲ್ಲವನ್ನು ಮರೆತು ಬಿಡಿ. ಸುಮ್ಮನಾಗ್ತಾಳೆ.."

"ಇದನ್ನೆಲ್ಲ ಅಷ್ಟು ಸುಲಭವಾಗಿ ಮರೆಯುಕ್ಕೆ ಆಗುತ್ತಾ ಭುಜಂಗ್...ಯಾರಿಗಾದ್ರೂ ತಿಳಿದರೆ, ನಾನು ಬಲಾತ್ಕಾರ ಮಾಡಿದೀನಿ ಅಂತ ಅಂದ್ಕೊಳ್ತಾರೆ..."

"ಹಾಗೆ ಹೇಳುವುದು ಸುಲಭವಲ್ಲ. ಆದರೂ ನಿಮ್ಮಿಂದ ಅಚಾತುರ್ಯ ನಡೆದಿದೆ. ಶ್ವೇತನ್ನ ಒಪ್ಪಿಸಿದರೆ ನೀವು ಮದುವೆಯಾಗಲು ಸಿದ್ಧರಾಗಿದೀರಾ?"

"ಅವಳು ನನ್ನನ್ನು ಈ ಪರಿಸ್ಥಿತಿಯಲ್ಲಿ ಒಪ್ತಾಳೋ ಇಲ್ಲವೋ ಅಂತ..."

"ಆ ಚಿಂತೆ ನಿಮಗೆ ಬೇಡ.. ನಿಮ್ಮನ್ನು ಒಂದು ನೆಲೆಗೆ ತಂದು ನಿಲ್ಲಿಸುವ ಜವಾಬ್ದಾರಿ ನನ್ನದು...ನಾನು ನಿಮ್ಮನ್ನು ಇಲ್ಲಿಗೆ ಕರೆಸಿಕೊಂಡಿದೀನಿ..." ಎನ್ನುತ್ತಾ ಭುಜವನ್ನು ತಟ್ಟಿದ. ಇಬ್ಬರೂ ಬೇರೆ ಬೇರೆ ವಿಷಯಗಳನ್ನಾಡುತ್ತಾ ಮನೆಗೆ ಬಂದರು. ಸಾವಿತ್ರಿ ಕೊಟ್ಟ ತಿಂಡಿ ಕಾಫಿಯನ್ನು ಮುಗಿಸಿ, ಚಿದಾನಂದ ಅತ್ತ ನಡೆದ. ಭುಜಂಗ ಪಲ್ಲವಿ ಇದ್ದೆಡೆಗೆ ಬಂದ. ಚಿದಾನಂದನ ಬಗ್ಗೆ ಮಾತಾಡಿದ. "ಪಲ್ಲವೀ ಚಿದಾನಂದನಿಗೆ ಈ ಊರ್ನಲ್ಲಿ ಇರುಕ್ಕೆ ಅಷ್ಟು ಇಷ್ಟ ಇಲ್ಲ ಅಂತ ಅನ್ಸುತ್ತೆ.

ನಾನು ಕರೆಸಿ ತಪ್ಪು ಮಾಡಿದೆ. ಏನ್ಮಾಡ್ಬೇಕು ಅಂತ ಗೊತ್ತಾಗ್ತಿಲ್ಲ.'' ಕಿರಿಕಾಡಿದಳು.

''ಹಾಗಂತ ಹೇಳಿದ್ನಾ...ಕೃತಘ್ನ. ಎಲ್ಲೂ ಇರುಕ್ಕೆ ಆಗುಲ್ಲ ಅವನ ಕೈಲಿ..''

''ಸ್ವಲ್ಪ ಅರ್ಥ ಹಾಗೇ ಇತ್ತು. ನೇರವಾಗಿ ಏನನ್ನೂ ಹೇಳಲಿಲ್ಲ. ಅವನು ಶ್ವೇತನ್ನ ಪ್ರೀತಿಸ್ತಿದಾನೆ ಅಂತ ಹೇಳ್ದ. ಅವಳನ್ನೇ ಮದುವೆಯಾಗ್ತೀನಿ..ಅಂತ ಆಸೆ ಪಟ್ಟ..ನಂಗೆ ಆಶ್ಚರ್ಯ ಆಗುತ್ತೆ.''

''ಶ್ವೇತಾ! ಈ ಊರ್ನಲ್ಲಿ ಇರೋಕೆ ಖಂಡಿತಾ ಒಪ್ಪುಲ್ಲ. ಇವನಿಗ್ಯಾಕೆ ಅವಳ ಸಹವಾಸ? ಅವಳು ಎಂಥಾ ಹೆಣ್ಣು ಅಂತ ಇವನಿಗೆ ಗೊತ್ತಿಲ್ಲ. ಅವಳು ಶರತ್‌ನ ಸಹವಾಸ ಮಾಡಿ ಪ್ರೆಗ್ನೆಂಟ್ ಕೂಡ ಆಗಿದ್ಲು. ಅವನು ಜೈಲಿಗೆ ಹೋದ್ಮೇಲೆ ಅಬಾರ್ಷನ್ ಮಾಡಿಸ್ಕೊಂಡಿದಾಳೆ.. ಅವಳಿಂದ ದೂರ ಇರು ಅಂತ ಹೇಳ್ಬೇಕಾಗಿತ್ತು..ನೀವು..''

''ನಂಗೇನು ಗೊತ್ತಿತ್ತು ಇದೆಲ್ಲಾ.. ಅಲ್ಲದೇ ಇದು ಅವನ ಪರ್ಸನಲ್ ವಿಷಯ. ನೀನೇ ಅವನಿಗೆ ಹೇಳಿಬಿಡು...ನಂಗೆ ಮುಜುಗರವಾಗುತ್ತೆ.''

''ಅವನು ಗಂಡಸು. ಅವನ ಹತ್ರ ನಾನ್ಹೇಗೆ ಮಾತಾಡ್ಲೀ!''

''ಒಂದ್ವೇಳೆ ಅವನು ಶ್ವೇತಾಳನ್ನು ಮದುವೆಯಾದರೆ.. ಅವನಿಗೆ ಮುಂದೆ ತೊಂದರೆ ಆಗಬಹುದು ಅಂತೀಯ?..''

''ಅವಳು ಇವನನ್ನು ಬಿಟ್ಟು ಓಡಿ ಹೋಗ್ತಾಳೆ ಅಷ್ಟೇ..''

''ಇವನೇ ಅನುಕೂಲವಂತನಾದರೆ, ಇವನೊಡನೆ ಬಾಳ್ವೆಮಾಡಬಹುದು ಅಲ್ವಾ!...ಅವಳಿಗೆ ಬೇರೆ ಗಂಡು ಸಿಗುವುದು ಕಷ್ಟ ಅಲ್ವಾ!''

''ಏನು? ಅವಳ ಬಗ್ಗೆ ಬಹಳ ಅನುಕಂಪವಿರುವಂತಿದೆ.. ನನಗೆ ಅವಳ ಸ್ವಭಾವ ಚೆನ್ನಾಗಿ ಗೊತ್ತು.. ನಿಮಗೆ ಇವೆಲ್ಲಾ ಯಾಕೆ?...ಅಷ್ಟ್ಯಾಕೆ ಆಸಕ್ತಿ?''

''ಚಿದಾನಂದನನ್ನು ಒಂದು ನೆಲೆಗೆ ತಂದು, ಅತ್ತೆಗೆ ಅನುಕೂಲ ಮಾಡಿಕೊಡೋಣ ಅಂತ ಅಂದ್ಕೊಂಡಿದ್ದೆ.. ಬೇರೆ ಯಾವ ಆಸಕ್ತಿ ಇರುತ್ತೆ...?''

''ನೀವೇ ಎಲ್ಲವನ್ನೂ ನೋಡ್ಕೊಳ್ತಿದ್ರಲ್ಲ...ಹೇಗೋ ಆಗುತ್ತೆ. ಎಲ್ರನ್ನೂ ಕಳಿಸಿ.''

''ಅದು ಆಗಿನ ಮಾತು. ಈಗ ನಾನು ಮನೆ ಅಳಿಯನಲ್ಲ, ಚಿದಾನಂದ ತಂಗಿಯ ಮಗ. ಹೇಮಾ ಇಲ್ಲೇ ಇದ್ದಿದ್ರೆ ಆ ಮಾತೇ ಬೇರೆ ಆಗ್ತಿತ್ತು...ಈಗ ಹಾಗಲ್ಲ''

''ಹೇಮನ ನೆನಪಾಗ್ತಾ ಇದೆಯಾ?'' ಹೆದರಿಸುವಂತೆ ನೋಡಿದಳು.

''ಅವಳನ್ನು ನೆನೆಸಿಕೊಳ್ಳುಕ್ಕೆ ಸಮಯ ಎಲ್ಲಿದೆ?...ನೀನೇ ತುಂಬಿ ಹೋಗಿದೀಯ..'' ನಕ್ಕ.

''ಸಮಯ ಇದ್ದರೂ, ನಿಮಗೆ ಅವಳ ನೆನಪು ಬರಬಾರದು...ಅಷ್ಟು ಪ್ರೀತೀನ ನಾನು ಕೊಡ್ತೀನಿ...'' ನನ್ನ ಪ್ರೀತಿ ಎಂದೂ ಕಡಿಮೆ ಆಗುವುದಿಲ್ಲ.. ಅತ್ತಿತ್ತ ಹೋಗಲು ಬಿಡುವುದಿಲ್ಲ..''

''ನನ್ಮೇಲೆ ನಂಬಿಕೆ ಇಲ್ವಾ ನಿಂಗೆ...ನೀನಾಗೇ ಕಳ್ಸಿದ್ರೂ ನಾನು ಹೋಗುಲ್ಲಮ್ಮಾ'' ನಕ್ಕ.

"ಹೇಮನ ಮದುವೆ ಆದಷ್ಟು ಬೇಗ ನೆರವೇರಿ ಬಿಟ್ರೆ ನಂಗೆ ನೆಮ್ಮದಿ..." ಅವಳೂ ನಗುತ್ತಾ ನುಡಿದಾಗ, ಅವನು ಅವಳ ಕೆನ್ನೆಗಳನ್ನು ಹಿಂಡಿದ.

"ನೀನು ತುಂಬಾ ಸ್ವಾರ್ಥಿ ಪಲ್ಲವೀ...ನಿನ್ನ ಗಂಡನ್ನ ಬೇರೆ ಯಾರೂ ಕಣ್ಣೆತ್ತಿ ನೋಡಬಾರದು ಅಂತೀಯಲ್ಲ, ಮೂರು ನಾಲ್ಕು ತಿಂಗಳ ಕೆಳಗೆ, ನೀನ್ಯಾರು ಅಂತ ನಿಂಗೆ ಗೊತ್ತಿರ್ಲಿಲ್ಲ.."

"ಅದು ಹಾಗೇನೇ.. ಈಗ ನೀವು ನನ್ನವರು. ನನ್ನ ಹೊರತು ಬೇರೆ ಯಾರ ದೃಷ್ಟಿಯೂ ನಿಮ್ಮ ಮೇಲೆ ಬೀಳಬಾರದು. ಆದಷ್ಟು ಬೇಗ ನಮಗೊಂದು ಮಗುವಾಗಿ ಬಿಟ್ಟರೆ ನಮ್ಮಿಬ್ಬರ ಪ್ರೀತಿ ಗಟ್ಟಿಯಾಗುತ್ತೆ." ಅವಳೂ ಅವನ ಗಲ್ಲವನ್ನು ಹಿಂಡಿದಳು.

"ಪ್ರೀತಿ, ಮಗು ಅಂತ ಎಷ್ಟೆಲ್ಲಾ ಮಾತಾಡ್ತೀಯಲ್ಲ, ತುಂಬಾ ಧೈರ್ಯ ಕಣೇ. ನಿಂಗೆ ಗಂಡಸಾಗಿ ನಂಗೇ ನಾಚಿಕೆ ಆಗುತ್ತೆ..."

"ನಾನು ನಾಚ್ಕೊಂಡ್ರೆ ಶ್ವೇತಾನೋ, ಹೇಮಾನೋ ನಿಮ್ಮನ್ನು ಸೆಳೆದುಕೊಳ್ತಾರೆ ಅಷ್ಟೇ."

"ಒಂದು ವೇಳೆ ನಮಗೆ ಮಗುವಾಗದಿದ್ದರೂ, ನನ್ನ ನಿನ್ನ ಪ್ರೀತಿ ಎಂದಿಗೂ ಕಡಿಮೆ ಆಗಬಾರದು.." ಯಾವ ಕಾಲಕ್ಕೂ ಆದರ್ಶ ದಂಪತಿಗಳಾಗಿರ್ಬೇಕು ನಾವಿಬ್ಬರೂ..."

"ಛೀ...ಬಿಡ್ತು ಅನ್ನಿ. ನಮಗೆ ಮಗುವಾಗಲೇ ಬೇಕು. ನಮ್ಮ ಪ್ರೀತಿ ಸಾರ್ಥಕಗೊಳ್ಳಲೇ ಬೇಕು..." ಇಲ್ಲದಿದ್ರೆ ಅದೆಂಥಾ ಬಾಳು?"

"ತಮಾಷೆಗೆ ಅಂದೆ ಕಣೇ...ಹತ್ತು ಮಕ್ಕಳನ್ನು ಹುಟ್ಟಿಸುವ ತಾಕತ್ತು ನನ್ನಲ್ಲಂತೂ ಇದೆ. ನೀನು ಸುಸ್ತಾಗಬಾರದು.. ಹತ್ತು ಮಕ್ಕಳಿರಲವ್ವಾ ಮನೆ ತುಂಬಾ...ಹೆರಬೇಕಮ್ಮ ನೀನು ಮಾತ್ರ. ಅವಳ ದೇಹವನ್ನು  ತೂಗಾಡಿಸಿದ."

"ಅದ್ಯಾಕೆ ಹಾಗಂತೀರಿ?.. ಹತ್ತಲ್ಲ, ಹನ್ನೆರಡು ಮಕ್ಕಳನ್ನು ಹೆರುವ ಶಕ್ತಿ ನನಗಿದೆ. ಹಾಗೆ ಹೇಳಿದವಳು ಇದ್ದಕ್ಕಿದ್ದಂತೆ ಸುಮ್ಮನಾಗಿ ಬಿಟ್ಟಳು.

"ಯಾಕೆ ಪಲ್ಲವೀ ಸುಮ್ಮನಾಗೀ ಬಿಟ್ಟೆ!, ಹೆದರಿ ಬಿಟ್ಯಾ?.." ತಲೆ ಚುಂಬಿಸಿದ.

"ಯಾಕೋ ಏನೋ ಇದ್ದಕ್ಕಿದ್ದಂತೆ ಭಯ ಆಯ್ತು. ಏನೋ ಅನುಮಾನ ಬಂತು. ನನ್ನ ಸ್ವಂತ ತಾಯಿಗೆ ಮಕ್ಕಳಾಗಲಿಲ್ಲ, ಗರ್ಭಕೋಶದಲ್ಲಿ ಏನೋ ತೊಂದರೆ ಇತ್ತಂತೆ. ಹಾಗೆ ನನಗೂ ಏನಾದ್ರೂ ತೊಂದರೆ ಇದ್ದರೇ...ಮಕ್ಕಳಾಗ್ದೇನೇ ಇದ್ರೆ?"

"ಸುಮ್ಮನೇ ಏನೇನೋ ಯೋಚಿಸ್ಬೇಡ...ಯಾವ ತೊಂದರೆಯೂ ಇಲ್ಲ"

"ಹಾಗೆ ನೀವು ಹೇಳ್ತೀರಿ.. ನನ್ನನ್ನ ಒಂದ್ಸಾರಿ ಲೇಡಿ ಡಾಕ್ಟರರ ಬಳಿಗೆ ಕರ್ಕೊಂಡು ಹೋಗಿ.. ಅವರು ಎಲ್ಲಾ ಸರಿಯಾಗಿದೆ ಅಂತ ಹೇಳಿದ್ಮೇಲೇ ನನಗೆ ನೆಮ್ಮದಿ.."

"ಸುಮ್ಸುಮ್ನೇ ಯಾರಾದ್ರೂ ಡಾಕ್ಟರ ಬಳಿಗೆ ಹೋಗ್ತಾರಾ?..ಮದುವೆಯಾಗಿ ಒಂದು ಪಕ್ಷ ಕೂಡಾ ಕಳೆದಿಲ್ಲ, ಎರಡು ತಿಂಗಳು ಕಳೀಲಿ...ಅಷ್ಟರಲ್ಲಿ ನೀನು ಗರ್ಭವತಿಯಾಗಿರುವ ಸೂಚನೆ ಗೊತ್ತಾಗಬಹುದು. ಆಗ ಡಾಕ್ಟರ ಬಳಿಗೆ ಹೋಗೋದು.. ಅಷ್ಟೆ.." ನಗಿಸಲು ನೋಡಿದ.

"ಎರಡು ತಿಂಗಳಾ!..ಅಷ್ಟೊಂದು ದಿನಗಳು ಕಾಯ್ಬೇಕಾ? ಬೇಡಾರೀ..."

"ಪಲ್ಲವೀ...ಗರ್ಭಿಣಿ ಆದ್ಮೇಲೂ ಒಂಭತ್ತು ತಿಂಗಳು ತುಂಬೋವರೆಗೂ ಕಾಯ್ಬೇಕು. ಗೊತ್ತು ತಾನೇ...?ವಾಂತಿ, ವಾಕರಿಕೆ, ಬಯಕೆ.. ಸುಸ್ತು ಸಂಕಟ...ದಪ್ಪ ಹೊಟ್ಟೆ ಗೊತ್ತಾ? ಆಮೇಲೆ ಹೆರಿಗೆ.."

"ಗೊತ್ತು, ಒಂದೊಂದು ದಿನವನ್ನು ನಾನು ಎಂಜಾಯ್ ಮಾಡ್ಬೇಕು. ನನ್ನ ಅನುಭವಗಳನ್ನು ನಿಮ್ಮ ಹತ್ರ ಹೇಳ್ಕೋಬೇಕು...ಅಮ್ಮಂಗೆ ಎಷ್ಟು ಆಸೆ ಇತ್ತೊ...ಅವಳಿಗೆ ನಿರಾಸೆ ಆಗಿ ಹೋಯ್ತು.. ಇಲ್ದಿದ್ರೆ ನಾನು ಅವಳ ಹೊಟ್ಟೇಲೀ ಹುಟ್ಟದೆ, ಯಾರದ್ದೋ ಹೊಟ್ಟೇಲಿ ಮಿಸುಕಾಡ್ದೆ.."

"ಯಾರ ಹೊಟ್ಟೇಲಿ ಬೆಳೆದ್ರೇನು ನೀನು ಅವರ ಮಗಳೇ ತಾನೇ...?"

"ಇಲ್ಲ, ಅಮ್ಮ ನನ್ನನ್ನು ತನ್ನ ಬಸಿರ್ನಲ್ಲಿ ಇಟ್ಟುಕೊಂಡು ಬೆಳೆಸ್ಬೇಕಿತ್ತು. ಒಂದೊಂದು ಕ್ಷಣದ ಸುಖದ ಅನುಭವಗಳನ್ನು ಪಡಬೇಕಾಗಿತ್ತು. ಅವಳಿಗೆ ವಂಚನೆಯಾಗಿ ಹೋಯ್ತು. ನನಗೆ ಹಾಗೆ ವಂಚನೆ ಆಗಬಾರದು.. ನನಗೆ ಹಾಗೆ ಆಗುಲ್ಲ ಅಲ್ವಾ ಭುಜಂಗ್.. ಹಾಗಾಗುಕ್ಕೆ ನೀವು ಬಿಡುಲ್ಲ ಅಲ್ವಾ..." ಅವಳು ಹಿಸ್ಟೀರಿಯಾ ಬಂದವಳಂತೆ ಬಡಬಡಿಸುತ್ತಾ ಅವನನ್ನು ಅಲುಗಾಡಿಸತೊಡಗಿದಳು. ಅವನು ಅವಳನ್ನು ರಭಸದಿಂದ ತಳ್ಳಿದ.

"ಪಲ್ಲವೀ ತಾಳ್ಮೆ ಇರಲಿ...ಹಾಗೇನೂ ಆಗುಲ್ಲ...ಬೇಕಾದ್ರೆ ನಿನ್ನ ನೆಮ್ಮದಿಗೋಸ್ಕರ ನಾನು ನಿನ್ನನ್ನು ಡಾಕ್ಟರ ಹತ್ರ ಆದಷ್ಟು ಬೇಗ ಕರ್ಕೊಂಡು ಹೋಗ್ತೀನಿ. ಆದರೆ ಈ ವಿಷಯ ಯಾರಿಗೂ ಗೊತ್ತಾಗಬಾರದು. ತಮಾಷೆ ಆಗುತ್ತೆ." ಅವಳು ತಲೆಯಾಡಿಸಿದಳು. ಅವನು ಚಿಂತಿತನಾದ.

"ಇವಳ ತಲೆಯಲ್ಲಿ ಈ ಸಂಶಯ ಯಾಕೆ ಹೊಕ್ಕಿತು...? ಮಂದಾಕಿನಿ ಏನಾದರೂ ಹೇಳಿರಬಹುದೇ...? ನನ್ನ ಮುದ್ದಿನ ಮಡದಿಗೆ ಯಾವ ಚಿಂತೆಯೂ ಇರಬಾರದು. ಇವಳು ಸದಾಕಾಲ ಖುಷಿಯಾಗಿರುವಂತೆ ಇಟ್ಟುಕೊಳ್ಳಬೇಕೆಂದುಕೊಂಡ. ಹೆಚ್ಚು ಹೆಚ್ಚು ಹೊತ್ತು ಅವಳೊಡನೆ ಕಾಲ ಕಳೆಯಬೇಕೆಂದುಕೊಂಡ. ತಾಯಿಯೊಡನೆ ಮಾತನಾಡಿದ.

"ಅಮ್ಮಾ, ನಾನು ಪಲ್ಲವಿ ಎಂಟು ಹತ್ತು ದಿನ ಹೊರಗೆಲ್ಲಾದ್ರೂ ತಿರುಗಾಡಿ ಬರೋಣ ಅಂತ ಅಂದ್ಕೊಂಡಿದೀವಿ..ಇಲ್ಲಿ ಚಿದಾನಂದನಿಗೆ ಎಲ್ಲಾ ಹೇಳಿರ್ತೀನಿ. ಏನೂ ಕಷ್ಟವಾಗುಲ್ಲ"

"ನಾನೇ ಹೇಳೋಣ ಅಂತಿದ್ದೆ ಹನಿಮೂನ್‌ಗೆ ಹೋಗ್ಬನ್ನಿ ಅಂತ...ಆದರೆ ಪಲ್ಲವಿಗೆ ಇಷ್ಟವಿದೆಯೋ ಇಲ್ವೋ ಅಂತ ಅಂದ್ಕೊಂಡೆ... ಈಗ ಯಾವ ಭಯವೂ ಇಲ್ಲ ತಾನೇ?"

"ಅವಳಾಗಿಯೇ ಏನೂ ಕೇಳಲಿಲ್ಲ, ನಾನೇ ಅಂದ್ಕೊಂಡಿದೀನಿ...ಮಳೆಗಾಲ ಪ್ರಾರಂಭವಾದ ಮೇಲೆ ಹೋಗುಕ್ಕೆ ಆಗುಲ್ಲ... ಈಗ ಭಯ ಯಾಕೆ? ನಾನಿರ್ತೀನಲ್ಲ."

"ಹೂಂ. ಹೋಗ್ಬನ್ನಿ, ಈ ಕಡೆಯ ಚಿಂತೆ ಬೇಡ. ಹೇಗೋ ನಡೆಯುತ್ತೆ. ಪಟ್ಟಣದಲ್ಲಿ ಬೆಳೆದ ಹುಡುಗಿ...ಈ ಸಣ್ಣ ಊರ್ನಲ್ಲಿ ಬೇಜಾರಾಗುಲ್ವಾ!...ಆಗಾಗ್ಗೆ ಕರ್ಕೊಂಡ್ಹೋಗು"

"ಅಲ್ಲಿಂದ ಬಂದ್ಮೇಲೆ, ಅವಳಿಗೆ ಅಡಿಗೆ ಕೆಲಸಾನೆಲ್ಲಾ ಹೇಳ್ಕೊಡು, ಅವಳಿಗೆ ಏನೂ ಬರುಲ್ಲವಂತೆ... ಮನೆ ಕೆಲಸವೆಲ್ಲಾ ಕಲೀಬೇಕು...ನಿನ್ನಾಗೇ ಅಡಿಗೆ ಮಾಡ್ಬೇಕು."

"ಸಮಯ ಬಂದರೆ ಎಲ್ಲಾ ತಾನಾಗಿಯೇ ಬರುತ್ತೆ. ಈಗ ಆರಾಮವಾಗಿರಲಿ."

"ಯಾಕಮ್ಮ ಅವಳನ್ನು ಅಡಿಗೆ ಮನೆಗೆ ಸೇರಿಸುಕ್ಕೆ ಬೇಜಾರಾ? ಅಜ್ಜಿ ಏನಾದ್ರೂ ಅಂದ್ರಾ?"

"ಅಜ್ಜೀನೂ ಅಂದಿಲ್ಲ; ಅಪ್ಪನೂ ಅಂದಿಲ್ಲ...ನನಗೆ ಅನ್ನಿಸಿದ್ದನ್ನ ಹೇಳ್ದೆ. ನಿನ್ನ ತಂಗಿ ವಿಜಯನಿಗೆ ಏನು ಬರ್ತಿತ್ತು?.. ಮದುವೆಯಾದ್ಮೇಲೆ ಕಲಿತಿದ್ದು ತಾನೇ?.."

"ಮದುವೆಯಾಗಿ ಐದು ವರ್ಷಗಳಾಗ್ತಾ ಬಂತು...ಅವಳ ಅತ್ತೆ ಇನ್ನೂ ಅಜ್ಜಿಯಾಗಿಲ್ಲ. ಅವರದ್ದೇನೂ ತಕರಾರು ಇಲ್ವಂತಾ?.." ಇದ್ದಕ್ಕಿದ್ದಂತೆ ಕೇಳಿದ.

"ಇಲ್ದೇ ಇರುತ್ತಾ?.. ಗಂಡು ಹುಡುಗ ನಿನಗ್ಯಾಕೆ ಇದೆಲ್ಲಾ.." ಅದೆಲ್ಲಾ ಹೆಂಗಸರ ವಿಚಾರ.

"ಗಂಡು ಹುಡುಗ ಸರಿ. ಆದರೆ ನಂಗೆ ಈಗ ಮದುವೆಯಾಗಿದೆ. ಒಂದು ವೇಳೆ ಪಲ್ಲವಿಗೆ ಮಕ್ಕಳಾಗದಿದ್ರೆ ನಿಂಗೆ ಬೇಸರವಾಗುತ್ತೇನಮ್ಮಾ?"

"ಥೂ ಹೋಗೋ...ಇದನ್ನೆಲ್ಲಾ ಯಾಕೆ ಕೇಳ್ತೀಯ? ಆಗುತ್ತೆ ಬಿಡು...ನಿಧಾನವಾಗಿ. ಇನ್ನ ಮೊನ್ನೆ ಮೊನ್ನೆ ಮದುವೆಯಾಗಿದೆ."

"ಯಾಕಮ್ಮಾ...ನಿಂಗೆ ಅಜ್ಜಿ ಆಗುವ ಆಸೆ ಇಲ್ವಾ?"

"ನಿಮ್ಮ ಅಜ್ಜಿಗೆ ಮುತ್ತಜ್ಜಿಯಾಗುವ ಆಸೆ. ಕನಕಾಭಿಷೇಕವನ್ನು ಮಾಡಿಸಿಕೊಳ್ಳುವ ಆಸೆ...ನಿಮ್ಮ ಅಪ್ಪನಿಗೆ ಮೊಮ್ಮಕ್ಕಳನ್ನು ಮುದ್ದಾಡುವ ಆಸೆ.."

"ಸರಿ ಬಿಡು...ನಿಂಗೂ ಪಲ್ಲವಿಗೆ ಬಾಣಂತನ ಮಾಡುವ ಆಸೆ ಅನ್ನು.."ನಕ್ಕ.

"ನಾನ್ಯಾಕೆ ಮಾಡಲಿ? ಅವರಮ್ಮ ಮಂದಾಕಿನಿ ಇದಾಳಲ್ಲ..ನಿನ್ನ ಹೆಂಡತಿ ದೊಡ್ಡ ಊರಿನವಳು. ಫ್ಯಾಷನ್ನು.....ಬಸಿರು, ಬಾಣಂತನ ಬೇಕೋ ಇಲ್ಲವೋ..?...ತಾಯಿಯೂ ನಗುತ್ತಾ ನುಡಿದಾಗ ಅವನು ಉತ್ತರಿಸಲಿಲ್ಲ, ಅವನ ಧ್ಯಾನ ಮಂದಾಕಿನಿಯ ಮೇಲಿತ್ತು. ಪಲ್ಲವಿಗೆ ಆಕೆಯನ್ನು ಕಂಡರೆ ಅಷ್ಟಕ್ಕಷ್ಟೇ....ಬಾಣಂತನ ಹೇಗೆ ನಡೆಯುತ್ತೋ ಮನದಲ್ಲೇ ನಕ್ಕೊಂಡ. ಈಗಲಿಂದ ಈ ಚಿಂತೆ ಯಾಕೆ? ಪಲ್ಲವಿ ಬಸಿರಿ ಅಂತ ಗೊತ್ತಾದ್ಮೇಲೆ ಅವಳನ್ನು ಒಪ್ಪಿಸಿದ್ರಾಯ್ತು ಅಂತಂದುಕೊಂಡ.. ಪಲ್ಲವಿ ತಾಯಿ! ತಾನು ತಂದೆ! ಆ ಅನಿಸಿಕೆ, ಮೈಯನ್ನು ನವಿರೇಳಿಸಿತು.

* * *

ಹತ್ತು ದಿನಗಳ ಹನಿಮೂನ್ ಪ್ರವಾಸವನ್ನು ಮುಗಿಸಿಕೊಂಡು, ಹಿಂದಿರುಗುವಾಗ, ಬೆಂಗಳೂರಿನಲ್ಲಿ ಒಂದೆರಡು ದಿನಗಳ ಮಟ್ಟಿಗೆ ಉಳಿಯುವುದೆಂದುಕೊಂಡರು.

"ಒಂದ್ಸಾರಿ ವಾಪಸ್ಸು ನಮ್ಮೂರಿಗೆ ಹೊರಟು ಹೋದರೆ, ಮತ್ತೆ ತಕ್ಷಣಕ್ಕೆ ಬರುಕ್ಕೆ ಆಗುಲ್ಲ, ಹೋಟೆಲ್ಲಿನಲ್ಲಿದ್ದುಕೊಂಡು, ಸುತ್ತಾಡಿ ಬರೋಣ. ಎಷ್ಟೋ ಸಾರಿ ಬೆಂಗಳೂರಿಗೆ ಬಂದಿದೀನಿ. ಆದರೆ ಸರಿಯಾಗಿ ಏನನ್ನೂ ನೋಡಿಲ್ಲ" ಪಲ್ಲವಿಯೊಡನೆ ಹೇಳಿದ.

"ಸರಿ, ಹಾಗೇ ಮಾಡೋಣ...ಹಾಗೆ ನನ್ನನ್ನು ಯಾವುದಾದ್ರೂ ಸ್ಪೆಷಲಿಸ್ಟ್ ಡಾಕ್ಟರ ಬಳಿಗೆ ಕರ್ಕ್ಕೊಂಡು ಹೋಗಿ.. ನಾನು ಅವರ ಹತ್ರ ಮಾತಾಡ್ಬೇಕು."

“ಏನೇ ಪಲ್ಲವಿ ಗುಡ್ ನ್ಯೂಸಾ...? ಮದುವೆಯಾಗಿ ಒಂದು ತಿಂಗಳಾಗಿದೆ ಅಷ್ಟೇ...”

“ಏನೋ ಗೊತ್ತಿಲ್ಲ, ಅದನ್ನು ಡಾಕ್ಟರು ಹೇಳಲಿ. ನನಗೆ ತಾಯಿಯಾಗುವ ಅರ್ಹತೆ ಇದೆಯೋ ಇಲ್ವೋ ಅಂತ ತಿಳ್ಕೋಬೇಕು..ನಾನು.”

“ಇಲ್ದೇ ಏನು? ನಾವಿಬ್ರೂ ಸ್ಟ್ರಾಂಗ್ ಆಗಿ ಇದೀವಲ್ಲ..” ತೋಳು ತಟ್ಟಿಕೊಂಡ.

“ಅದನ್ನು ಡಾಕ್ಟರು ಹೇಳಲಿ...ನನ್ನನ್ನ ಕರ್ಕೊಂಡು ಹೋಗ್ತೀರೋ ಇಲ್ವೋ...”

“ಹೋಗೋಣ ಅದಕ್ಕೇನಂತೆ. ಹೇಮನ್ನ ಕೇಳಿದ್ರೆ, ಸರಿಯಾದ ಡಾಕ್ಟರ್ ಯಾರಿದಾರೆ ಅಂತ ಹೇಳ್ತಾಳೆ...”

“ಹೇಮಾನಾ? ಅವಳಿಗ್ಯಾಕೆ ಇದೆಲ್ಲ ತಿಳಿಯಬೇಕು?...ನನಗಿಷ್ಟವಿಲ್ಲ..”

“ಅವಳೂ ಸ್ತ್ರೀ ರೋಗ ತಜ್ಞೆಯಾಗ್ತಾಳೆ...ಅವಳು ಡಾಕ್ಟರು.. ಅವಳಿಗೆ ತಿಳಿದರೆ ಏನೀಗ! ಪರಿಚಯದವರೊಬ್ಬರು ಇದ್ದರೆ, ಬೇರೆ ಡಾಕ್ಟರೂ ಸರಿಯಾಗಿ ನೋಡ್ತಾರೆ...ಹೌದಲ್ವಾ!”

“ಅದೇನೋ ಸರಿ...ಆದರೆ ಅವಳ ಹತ್ರ ಎಲ್ಲವನ್ನು ಹೇಗೆ ಹೇಳೋದು?..”

“ಏನನ್ನು ಹೇಳೋದೇ ಬೇಡ. ನಮಗೊಬ್ಬ ಡಾಕ್ಟರನ್ನ ಪರಿಚಯ ಮಾಡಿಕೊಡು ಅಂತ ಹೇಳಿದ್ರೆ ಸಾಕು...”

“ಮಾಡ್ತಾಳೆ ಅಂತೀರಾ! ನಂಗ್ಯಾಕೋ ಅನುಮಾನ...”

“ಅನುಮಾನ ಪಟ್ಕೊಂಡ್ರೆ ಪ್ರಯೋಜನವಿಲ್ಲ ಪಲ್ಲವೀ...ಯಾರನ್ನಾದ್ರೂ ನಂಬಲೇಬೇಕು ಅಲ್ವಾ!... ಅವಳ ಸಹಾಯವನ್ನು ಕೇಳಿದ್ರೆ ಏನೀಗ?..” ಈಗ ನಮಗೆ ಡಾಕ್ಟರ ಅಗತ್ಯವಿದೆ... ಅಪಾಯಿಂಟ್ಮೆಂಟ್ ತಗೋಬೇಕು...ಗಂಟೆ ಗಟ್ಟಲೆ ಕಾಯಬೇಕು... ಪರಿಚಯದವರಿದ್ದರೆ ಇದೆಲ್ಲಾ ಬೇಗ ಬೇಗ ಆಗುತ್ತೆ...ಸುಲಭವಾಗಿ ಆಗುತ್ತೆ. ಯೋಚಿಸು ಪಲ್ಲವೀ...” ಕಡೆಗೂ ಒಪ್ಪಿಸಿದ.

ಭುಜಂಗ ಹಾಗೂ ಪಲ್ಲವಿಯನ್ನು ಸ್ವಾಗತಿಸಲು ಶ್ವೇತಾ ಏರ್‌ಪೋರ್ಟ್‌ಗೆ ಬಂದಿದ್ದಳು. ಅವಳನ್ನು ಕಂಡು ಇಬ್ಬರಿಗೂ ಆಶ್ಚರ್ಯವಾಗಿತ್ತು. “ಚಿದಾನಂದ ಫೋನು ಮಾಡಿದ್ದರು. ಡೆಲ್ಲಿ ಪ್ರವಾಸ ಹೇಗಿತ್ತು?” ಎಂದು ಅವಳು ಮುಗುಳ್ನಗುತ್ತಾ ಪ್ರಶ್ನಿಸಿದಾಗ, ಪಲ್ಲವಿಯ ಮುಖ ಕೆಂಪಾಗಿತ್ತು. ಹನಿಮೂನ್‌ನ ಅನುಭವಗಳು ನೆನಪಾಗಿ ರೋಮಾಂಚನಗೊಂಡಳು. ಶ್ವೇತಾ ಬಲವಂತ ಮಾಡಿ ಇಬ್ಬರನ್ನು ತನ್ನ ಮನೆಗೆ ಕರೆದೊಯ್ದಳು.

“ನಾನು ನಿಮ್ಮೂರಿಗೆ ಬಂದಿದ್ದಾಗ, ನನಗೆ ಆದರಾತಿಥ್ಯ ಮಾಡಿದ್ದನ್ನು ಮರೆಯುವಂತೆಯೇ ಇಲ್ಲ, ಈಗ ನೀವುಗಳು ನನ್ನ ಅತಿಥಿಗಳು...” ಅವಳು ಬಲವಂತ ಪಡಿಸಿದಾಗ, ಭುಜಂಗ ಹೆಂಡತಿಯ ಕಡೆ ನೋಡಿದ.

“ಅವಳ ಕಡೆ ಯಾಕೆ ನೋಡ್ತೀರಿ!... ಅವಳು ನನ್ನ ಹಳೆಯ ಸ್ನೇಹಿತೆ. ಅವಳಿಗೆ ನಮ್ಮ ಮನೆಯಲ್ಲಿ ಇರುವುದು ಕಷ್ಟವಾಗುವುದಿಲ್ಲ, ಅವಳೊಂದಿಗೆ ನೀವೂ ಇರಬೇಕಾಗುತ್ತದೆ. ಇಲ್ಲಿ ಸಧ್ಯಕ್ಕೆ ನಾನೊಬ್ಬಳೇ...ಫ್ಲಾಸ್ಕಿನಲ್ಲಿ ಬಿಸಿ ಕಾಫಿ ಇದೆ ಮೊದಲಿಗೆ ಕೊಟ್ಟು ಬಿಡ್ತೀನಿ. ಕೇಟರಿಂಗ್‌ನೋರಿಗೆ

ಊಟಕ್ಕೆ ಆರ್ಡರ್ ಕೊಟ್ಟಿದೀನಿ. ಅವರು ಬರೋವರ್ಗೂ ಮಾತಾಡೋಣ..'' ಅವಳು ಡೈನಿಂಗ್ ಟೇಬಲ್ ಬಳಿಗೆ ಹೋದಾಗ, ಪಲ್ಲವಿ ಗಂಡನಿಗೆ ಸಂಜ್ಞೆ ಮಾಡಿದಳು.

"ನೀನು ಇಲ್ಲಿರುವುದು ಒಳ್ಳೆಯದು. ನಾನು ಊಟವಾದ ಮೇಲೆ, ಹೇಮನ್ನ ಕಂಡು ಮಾತನಾಡ್ಕೊಂಡು ಬರ್ತೀನಿ.'' ಪಲ್ಲವಿ ಸುಮ್ಮನೇ ತಲೆಯಾಡಿಸಿದಳು. ಶ್ವೇತಾ ತಂದಿತ್ತ ಕಾಫಿಯನ್ನು ಬಿಸ್ಕತ್ತಿನೊಂದಿಗೆ ಕುಡಿದರು. ಸ್ವಲ್ಪ ಹೊತ್ತಿನಲ್ಲೇ ಊಟವೂ ಬಂದಿತು. ಮೂವರೂ ಮಾತನಾಡುತ್ತಾ ಊಟ ಮಾಡಿದರು.

ಊಟದ ನಂತರ ಭುಜಂಗ ಹೊರಟ. "ನೀವಿಬ್ರೂ ಹರಟೆ ಹೊಡೀರಿ. ನಾನು ಹೇಮನ್ನ ನೋಡ್ಕೊಂಡು ಬರ್ತೀನಿ'' ಎನ್ನುತ್ತಾ ಬಾಗಿಲನ್ನು ದಾಟಿದ. ಅವನತ್ತ ಮರೆಯಾದ ಕೂಡಲೇ ಶ್ವೇತಾ ನಗುತ್ತಾ ಕೇಳಿದಳು.

"ಇನ್ನೂ ನಿನ್ನ ಗಂಡನಿಗೆ ಹೇಮನ್ನ ಮರೆಯುಕ್ಕೆ ಆಗಿಲ್ವಾ!''

"ಹೇಗೆ ಮರೀತಾರೆ.'' ಸೋದರತ್ತೆಯ ಮಗಳು ಅವಳು..''

"ಹೋಗ್ಲೀ...ನಿನ್ನ ಹನಿಮೂನ್ ಹೇಗಿತ್ತು? ಮಜವಾಗಿತ್ತಾ ? ಅನುಭವಗಳನ್ನು ಹೇಳೇ.. ಸ್ನೇಹಿತೆಯನ್ನು ಒತ್ತಾಯ ಮಾಡಿದಳು. ಪಲ್ಲವಿ ನಾಚುತ್ತಾ ತನ್ನ ಅನುಭವಗಳನ್ನು ಹೇಳಿಕೊಂಡು, ಫೋಟೋಗಳನ್ನು ತೋರಿಸಿದಳು.

"ನೀನೇ ಅದೃಷ್ಟವಂತೆ ಕಣೇ...ಭುಜಂಗನಂಥ ರಸಿಕ ಗಂಡ ನಿನಗೆ ಸಿಕ್ಕಿದಾರೆ. ಈ ಫೋಟೋದಲ್ಲಿ ಎಷ್ಟು ಹ್ಯಾಂಡ್ಸಮ್ ಆಗಿದಾರೇ...ಎನ್ನುತ್ತಾ ಅವಳು ಮತ್ತೆ ಮತ್ತೆ ಅದೇ ಫೋಟೋವನ್ನು ನೋಡಿದಾಗ, ಪಲ್ಲವಿ ಆ ಫೋಟೋವನ್ನು ಕಿತ್ತುಕೊಂಡಳು.

"ಅಷ್ಟೊಂದು ನೋಡ್ಬೇಡ...ಅವರಿಗೆ ದೃಷ್ಟಿ ಆಗುತ್ತೆ...ಅದ್ಸರಿ. ನಿನ್ನ ಸ್ವಭಾವ ಇನ್ನು ಬದಲಾಗಿಲ್ವಾ?....ಮದುವೆ ಮಾಡ್ಕೊಂಡು ಆರಾಮವಾಗಿರು... ಬೇರೆ ಗಂಡಸರ ಮೇಲೆ ಕಣ್ಣು ಹಾಕ್ಬೇಡ.''

"ನಿನ್ನ ಖುಷೀನ ನೋಡಿದ್ರೆ ಮದುವೆ ಆಗೋಣ ಅಂತ ಅನ್ಸುತ್ತೆ. ಆದರೆ ಯಾಕೋ ಮದುವೆಯ ಬಂಧನ ಬೇಡ ಅಂತ ಅನ್ಸುತ್ತೆ...'' ಹಗುರವಾಗಿ ನಕ್ಕಳು.

"ಏನು ಬೇಕಾದ್ರೂ ಮಾಡ್ಕೋ..ಆದರೆ ನನ್ನ ಗಂಡನ ಎದುರಿಗೆ ಚೆಲ್ಲು ಚೆಲ್ಲಾಗಿ ಆಡ್ಬೇಡ...ಅವರಿಗೆ ಮುಜುಗರವಾಗುತ್ತೆ..''

"ನಿನ್ನ ಗಂಡ ವಿಶ್ವಾಮಿತ್ರ ಋಷಿ..ನಾನು ತಪೋಭಂಗ ಮಾಡಿ ಬಿಡ್ತೀನಿ ಅನ್ನೋ ಭಯಾನ?...''

"ಭುಜಂಗ ಅಂಥೋರಲ್ಲ..ನೀನು ಹೀಗೆಲ್ಲಾ ಮಾತಾಡೋದು ನನಗೆ ಇಷ್ಟವಾಗುಲ್ಲ..ನಾವು ಹೋಟೆಲ್ಲಿಗೆ ಹೊರಟು ಹೋಗ್ತೀವಿ ಅಷ್ಟೇ...''

"ಎಷ್ಟು ಕೆಟ್ಟೋಳು ನೀನು. ರಾಜೀವನ್ನ ಮದುವೆಯಾದ ಸಮಯದಲ್ಲಿ ನನ್ನ ಸಹಾಯ ನಿನಗೆ ಬೇಕಾಗಿತ್ತು. ನನ್ನ ಮಾತುಗಳು ಇಷ್ಟವಾಗುತ್ತಿತ್ತು.. ಈಗ ಯಾವುದೂ ಬೇಡಾ ಅಲ್ವಾ?''

ಶ್ವೇತಾ ಹಂಗಿಸಿ ಕೇಳಿದಳು.

"ಏನೋ ಒಂಥರಾ, ಗಾಬರಿ, ಆತಂಕ ಆಗುತ್ತೆ ಕಣೇ..ಮದುವೆಗೆ ಮುಂಚೆ ಹಾಯಾಗಿದ್ದೆ ಈಗ ಭುಜಂಗನ್ನ ಎಲ್ಲಿ ಕಳೆದುಕೊಂಡು ಬಿಡ್ತೀನೋ ಅನ್ನೋ ಭಯ ಕಾಡುತ್ತೆ."

"ಯಾಕೇ, ಯಾರಾದ್ರೂ ರಾಜೀವನ ಬಗ್ಗೆ ಕೇಳಿದ್ರಾ?..."

"ಇಲ್ಲ ಕೇಳಿಲ್ಲ ಮಂದಾಕಿನಿಗೆ, ಚಿದಾನಂದನಿಗೆ ನನ್ನ ಬಗ್ಗೆ ಎಲ್ಲಾ ಗೊತ್ತಲ್ಲ..ನನ್ನ ಅತ್ತೆ ಮಾವನಿಗೆ ಹೇಳಿದರೆ ಏನಾಗುತ್ತೋ ಅಂತ ಆತಂಕ ಆಗುತ್ತೇ ಕಣೇ..."

"ಹಾಗೇನೂ ಆಗುಲ್ಲ ಭುಜಂಗ ನಿನ್ನ ಕಡೆ ಇರೋವರ್ಗೂ ಏನೂ ಭಯವಿಲ್ಲ.." ಹಾಗೆ ಹೇಳಿ ಸ್ನೇಹಿತೆಗೆ ಸಮಾಧಾನ ಮಾಡಿದರೂ ಒಳಗೊಳಗೇ ಖುಷಿಯಾಗಿತ್ತು.. ಅಷ್ಟರಲ್ಲಿ ಭುಜಂಗ ಫೋನು ಮಾಡಿದ್ದ. ಶ್ವೇತಾ ಪಲ್ಲವಿಯನ್ನು ಕರೆದಳು.

"ಈಗಲೇ ಶ್ವೇತಾಳ ಜೊತೆ, ಮೆಡಿಕಲ್ ಕಾಲೇಜಿನ ಬಳಿಗೆ ಬಾ...ಹೇಮಾಳ ಹತ್ರ ಮಾತಾಡಿದೀನಿ. ಅವಳು ನಿನ್ನನ್ನು ತನ್ನ ಪರಿಚಯದ ಡಾಕ್ಟರೊಬ್ಬರ ಬಳಿಗೆ ಕರೆದುಕೊಂಡು ಹೋಗ್ತಾಳೆ.." ಪಲ್ಲವಿಯ ಮುಖ ಚಿಕ್ಕದಾಗಿತ್ತು. ನಂತರ ಭುಜಂಗ ಶ್ವೇತಾಳಿಗೆ, ಕಾಲೇಜಿನ ಬಳಿಗೆ ಪಲ್ಲವಿಯನ್ನು ಕರೆದುಕೊಂಡು ಬರುವಂತೆ ಹೇಳಿದ.

"ಹೇಮಾಳನ್ನು ನೋಡೋಕೆ ನೀನ್ಯಾಕೇ ಹೋಗ್ಬೇಕು. ಬರುಕ್ಕಾಗುಲ್ಲ ಅಂತ ನೀನು ಹೇಳ್ಬೇಕಾಗಿತ್ತು..." ದಬಾಯಿಸಿದಳು.

"ನಾನು ಪ್ರೆಗ್ನೆಂಟ್ ಆಗಿರಬಹುದು ಅನ್ನೋ ಅನುಮಾನ ಭುಜಂಗನಿಗೆ, ಅದಕ್ಕೇ ಡಾಕ್ಟರ ಬಳಿಗೆ ಕರ್‍ಕೊಂಡು ಹೋಗ್ತಾರಂತೆ.." ಪಲ್ಲವಿ ತಲೆ ತಗ್ಗಿಸಿ ನುಡಿದಳು. ಶ್ವೇತಾ ಅಚ್ಚರಿಯಿಂದ ಅವಳ ಗಲ್ಲವನ್ನೆತ್ತಿದಳು. ಹಾಗೇ ಅಸೂಯೆಯ ಕಿಡಿಯೊಂದು ಕೆಂಪಾಗಿ ಆರಿತು.

"ನೀನು...ಪ್ರೆಗ್ನೆಂಟಾ! ಇಷ್ಟು ಬೇಗ?...ಮದುವೆಗೆ ಮೊದಲೇ ಏನಾದ್ರೂ ಸಂಬಂಧ ಇತ್ತೇನೆ?"

"ಥೂ ಹಾಗೆಲ್ಲಾ ಏನೂ ಇರ್ಲಿಲ್ಲ ಆದರೆ ಮದುವೆಯಾದ ರಾತ್ರಿಯಿಂದ ನಾವು ಅನೇಕ ಬಾರಿ ಹತ್ತಿರವಾಗಿದೀವಿ.. ಅವರಿಗೆ ಬೇಗ ತಂದೆಯಾಗ್ಬೇಕು ಅನ್ನೋ ಆಸೆ..."

"ಬೇಗ ಆಗ್ಬೇಕು ಅಂತಂದ್ರೆ! ಒಂಭತ್ತು ತಿಂಗಳವರೆಗಾದ್ರೂ ಕಾಯಬೇಕಲ್ಲ..ಮದುವೆಯಾದರೆ ಸಾಕು ಅಂತ ಕಾಯ್ತಿದ್ನಾ ಈ ಪುಣ್ಯಾತ್ಮ...ರಸಮಯ ರಾತ್ರಿ, ರಸಿಕ ಗಂಡ....ಇನ್ನೇನು?"

"ಅತ್ತೆಗೆ ಅಜ್ಜಿ ಆಗ್ಬೇಕು ಅನ್ನೋ ಹಂಬಲ...ಅಜ್ಜಿಗೆ ಕನಕಾಭಿಷೇಕದ ಆಸೆ.. ನಾನೇನು ಮಾಡ್ಲಿ?.." ಭುಜಂಗನ ಆಸೆಗೆ ನಾನ್ಯಾಕೆ ಕಲ್ಲು ಹಾಕ್ಲಿ?"

"ಬೇಗ ಮುದುಕಿಯಾಗಿ ಹೋಗ್ತೀಯ ಅಷ್ಟೇ...ನಿಂಗೂ ಬೇಕೇನೋ ಈ ಸುಖ...?"

"ಆದರೂ, ತಾಯ್ತನ ಅಂತಂದ್ರೆ ಒಂಥರಾ ಥ್ರಿಲ್ಲಿಂಗ್ ಆಗಿರುತ್ತೆ ಅಲ್ವಾ!"

"ನಂಗೇನೇ ಗೊತ್ತು!...ಎರಡೇ ತಿಂಗಳಿಗೆ ಅಬಾರ್ಷನ್ ಮಾಡಿಸ್ಕೊಂಡೆ...ಇಲ್ದಿದ್ರೆ ಇಷ್ಟು

ಹೊತ್ತಿಗೆ ನಾನು ತಾಯಿಯಾಗಿರ್ತಿದ್ದೆ. ಆದರೆ ತಂದೆ ಯಾರು ಅಂತ ಯಾರಾದ್ರೂ ಕೇಳಿದ್ರೆ ಅಂತ ಹೆದರ್ಬಿಟ್ಟೆ. ಈಗ ನಂಗೂ ಪ್ರೆಗ್ನೆಂಟ್ ಆಗ್ಬೇಕು ಅಂತ ಆಸೆಯಾಗ್ತಿದೆ ಕಣೇ..."

"ಶರತ್ ಬಗ್ಗೆ ತಿಳಿದೂ, ನೀನು ಅವನ ಸಹವಾಸ ಮಾಡ್ಬಾರ್ದಾಗಿತ್ತು.."

"ಏನೋ ಆಗಿ ಹೋಯ್ತು...ಆಗ ನಂಗೆ ಯಾವ ಬೇಸರವೂ ಇರಲಿಲ್ಲ..." ಶ್ವೇತಾ ನಿಟ್ಟುಸಿರನ್ನು ಬಿಟ್ಟಾಗ ಪಲ್ಲವಿ ಅವಳನ್ನೇ ನೋಡಿದಳು. ಇಬ್ಬರೂ ಸಿದ್ಧರಾಗಿ, ಮೆಡಿಕಲ್ ಕಾಲೇಜಿಗೆ ಹೊರಟರು. ದಾರಿಯುದ್ದಕ್ಕೂ ಹಳೆಯ ನೆನಪುಗಳನ್ನು ಮೆಲುಕು ಹಾಕಿದರು.

* * *

ಹೇಮಾ ಪರಿಚಯದ ನಗೆಯನ್ನು ತೂರಿ, 'ಬನ್ನಿ' ಎಂದು ಹೇಳಿ, ಒಳಗಿನ ರೂಮಿಗೆ ಕರೆದೊಯ್ದಳು...ಅಲ್ಲಿದ್ದ ತನ್ನ ಪರಿಚಯದ ಸೀನಿಯರ್ ಡಾಕ್ಟರಿಗೆ ಪರಿಚಯ ಮಾಡಿಕೊಟ್ಟಳು. ಆಕೆ, ಭುಜಂಗ ಹಾಗೂ ಪಲ್ಲವಿಯೊಡನೆ ಮಾತನಾಡುವಾಗ, ಶ್ವೇತಾ ಹೇಮಾ ಇಬ್ಬರೂ ಹೊರಗಡೆಗೆ ಬಂದರು. ಸ್ವಲ್ಪ ಹೊತ್ತಿನ ನಂತರ ಭುಜಂಗನೂ ಹೊರಕ್ಕೆ ಬಂದ. ಡಾಕ್ಟರು ಪಲ್ಲವಿಯೊಡನೆ ಮುಖ್ಯವಾದ ವಿಷಯಗಳನ್ನು ಕೇಳಿ ತಿಳಿದುಕೊಂಡು, ಒಳಗಿನ ರೂಮಿಗೆ ಕರೆದೊಯ್ದು ಪರೀಕ್ಷಿಸಿದಳು...ಮುಗುಳ್ನಗುತ್ತಾ ಪ್ರಶ್ನಿಸಿದವಳಿಗೆ, ಪಲ್ಲವಿ ಸಮಾಧಾನದಿಂದ ಉತ್ತರಿಸಿದಳು. ತನ್ನ ಭೀತಿಗೆ ಕಾರಣವನ್ನು ತಿಳಿಸಿದಳು.

"ಏನೂ ಸಮಸ್ಯೆ ಇರುವಂತೆ ಅನ್ನಿಸುವುದಿಲ್ಲ....ಮದುವೆಯಾಗಿ ಎರಡು ತಿಂಗಳುಗಳು ಕೂಡಾ ಕಳೆದಿಲ್ಲ ಅಂತೀರಿ. ಇಷ್ಟು ಬೇಗ ಗರ್ಭಧರಿಸುವ ಆತುರ ಯಾಕೆ? ನಿಧಾನವಾಗಿ ಆಗಲಿ ಬಿಡಿ. ದಂಪತಿಗಳು ಆನಂದದಿಂದ ಕಾಲ ಕಳೆಯಿರಿ.." ಡಾಕ್ಟರೆಂದಳು.

"ಏನೂ ಸಮಸ್ಯೆ ಇಲ್ಲದಿದ್ದ ಮೇಲೆ, ನಾನೇಕೆ ಗರ್ಭಿಣಿಯಾಗಿಲ್ಲ? ಮದುವೆಯಾದ ರಾತ್ರಿಯಿಂದ ನಾವಿಬ್ಬರೂ ಅನೇಕ ಸಾರಿ ಒಟ್ಟಾಗಿದ್ದೇವೆ." ಪಲ್ಲವಿ ಕೇಳಿದಳು.

"ಒಮ್ಮೊಮ್ಮೆ ನಿಧಾನವಾಗುತ್ತದೆ. ಐದಾರು ವರ್ಷಗಳ ನಂತರ ಗರ್ಭಧರಿಸಿರುವ ಮಹಿಳೆಯರಿದಾರೆ. ಇನ್ನೂ ಎರಡು ತಿಂಗಳು ನೋಡೋಣ. ಒಂದು ವೇಳೆ, ಗರ್ಭಿಣಿಯಾಗದಿದ್ದರೆ, ಆಮೇಲೆ ಏನು ಮಾಡಬಹುದು ಅಂತ ಯೋಚಿಸೋಣ..."

"ಇಲ್ಲ ಡಾಕ್ಟರ್...ಅದೇನು ಸಲಹೆ, ಚಿಕಿತ್ಸೆ ಹೇಳ್ತೀರೋ ಅದನ್ನು ಈಗಲೇ ಹೇಳಿಬಿಡಿ.. ಒಂದೊಂದು ದಿನವೂ ನನಗೆ ತಳಮಳ ಆಗುತ್ತೆ.." ಎಂದಳು.

"ಹಾಗೆಲ್ಲಾ ತಳಮಳಗೊಳ್ಳುವುದು ಆರೋಗ್ಯಕ್ಕೆ ಒಳ್ಳೆಯದಲ್ಲ, ಮಾನಸಿಕ ಆರೋಗ್ಯವೂ ಕೂಡ ಗರ್ಭಧರಿಸುವಲ್ಲಿ ಸಹಾಯಕವಾಗುತ್ತದೆ. ತಾಳ್ಮೆ ಮುಖ್ಯ. ಕೆಲವು ಸುಲಭವಾದ ಯೋಗಾಸನಗಳಿವೆ. ಅದನ್ನು ಕಲಿತು, ದಿನಾ ಮಾಡಿ. ಫಲಕಾರಿಯಾಗುತ್ತದೆ."

"ನಾವು ಇರುವುದು ಸಣ್ಣ ಊರು. ಅಲ್ಲಿ ಹೆಚ್ಚು ಅನುಕೂಲಗಳಿಲ್ಲ, ಅಲ್ಲದೇ ನಾನು ಮತ್ತೆ ಮತ್ತೆ ಬರಲು ಆಗುವುದಿಲ್ಲ, ಅಲ್ಲದೇ ಈ ವಿಷಯಗಳನ್ನೆಲ್ಲ ನನ್ನ ಅತ್ತೆಯೊಡನೆ ಹೇಳಲಾಗುವುದಿಲ್ಲ, ಏನೇ ಪರೀಕ್ಷೆ ಇದ್ದರೂ, ಸ್ಕ್ಯಾನಿಂಗ್ ಇದ್ದರೂ ಎಲ್ಲವನ್ನೂ ಈಗಲೇ ಮಾಡಿ

ಬಿಡಿ. ನನ್ನ ಮನಸ್ಸಿಗೆ ಸಮಾಧಾನವಾಗುತ್ತದೆ..'' ಕೇಳಿಕೊಂಡಳು.

``ಸರಿ, ನಿಮಗೇ ಆತುರವಿದ್ದರೆ, ನಾನು ಹೆಚ್ಚಿಗೆ ಹೇಳುವುದಿಲ್ಲ, ನಾನು ನಿಮ್ಮ ಪತಿಯೊಡನೆ ಮಾತನಾಡ್ತೀನಿ. ಸ್ಕ್ಯಾನಿಂಗ್ ಮಾಡಿಸಿ. ರಕ್ತ ಪರೀಕ್ಷೆಯನ್ನು ಮಾಡಿಸಿ..'' ಎಂದು ಹೇಳಿ ಪಲ್ಲವಿಯನ್ನು ಆಚೆಗೆ ಕಳಿಸಿದಳು. ಪಲ್ಲವಿಯ ಹಠ ಬೇಸರವನ್ನುಂಟು ಮಾಡಿತ್ತು. ನಂತರ ಭುಜಂಗನನ್ನು ಕರೆಸಿ, ವಿಶದವಾಗಿ ಮಾತನಾಡಿದಳು.

``ನಿಮ್ಮ ಪತ್ನಿಯ ಮನಸ್ಸಿಗೆ ಏನೋ ಸಂಶಯ ಅಂಟಿಕೊಂಡಿರುವಂತಿದೆ. ಆಕೆಯ ಸಮಾಧಾನಕ್ಕಾಗಿಯಾದರೂ ಸ್ಕ್ಯಾನಿಂಗ್ ಮಾಡಬೇಕು.. ಅಥವಾ ನೀವು ಆಕೆಯ ಹತ್ತಿರ ಆತಂಕಕ್ಕೆ ಏನೂ ಕಾರಣವಿಲ್ಲ ಎಂದು ಹೇಳಿ ಧೈರ್ಯ ತುಂಬಬೇಕು..''

``ಇಲ್ಲ ಡಾಕ್ಟರ್, ಒಮ್ಮೊಮ್ಮೆ ನನಗೂ ಬೇಸರವಾಗುವ ಹಾಗೆ ಮಾತನಾಡಿ ಬಿಡ್ತಾಳೆ. ಅವಳಿಗೆ ತಾನೇ ಗರ್ಭಿಣಿಯಾಗಿ, ಮಗುವನ್ನು ಹೊತ್ತು, ಹೆರಬೇಕೆಂಬ ಆಸೆ ಬಲವಾಗಿದೆ. ಅವಳ ಬಾಡಿಗೆ ತಾಯಿ ನಮ್ಮೊಂದಿಗೆ ಇದಾರೆ. ಆಕೆಯ ಹತ್ತಿರ ಮಾತನ್ನೂ ಕೂಡಾ ಆಡುವುದಿಲ್ಲ''

``ಇದೇ ರೀತಿ ಮುಂದುವರೆದರೆ, ಅದೇ ಒಂದು ದೊಡ್ಡ ಸಮಸ್ಯೆಯಾಗಿ ಬಿಡಬಹುದು. ನಾನು ಹೇಮಾಳೊಂದಿಗೆ ಮಾತನಾಡ್ತೀನಿ. ನೀವು ಮುಂದೆ ಏನು ಮಾಡ್ಬೇಕು ಅಂತ ಅವಳು ತಿಳಿಸ್ತಾಳೆ.'' ಆಕೆ ಮಾತು ಮುಗಿಸುವ ಆತುರವನ್ನು ತೋರಿದಳು.

ನಂತರ ಹೇಮಾ ಭುಜಂಗನೊಡನೆ ಮಾತನಾಡಿದಳು. ``ಪಲ್ಲವಿಯ ಸಮಾಧಾನಕ್ಕಾಗಿ ನಾನು ಕೆಲವು ಪರೀಕ್ಷೆಗಳಿಗೆ ಬರೆದುಕೊಡ್ತೀನಿ.. ಹಾಗೇ ಕೆಲವು ವಿಟಮಿನ್ ಮಾತ್ರೆಗಳನ್ನು ತೆಗೆದುಕೊಳ್ಳಲಿ, ಆದಷ್ಟು ಮನಸ್ಸು ಸಮಾಧಾನದಿಂದಿರಲಿ. ಮಂದಾಕಿನಿಯನ್ನು ನೋಡಿದರೆ, ಇವಳ ಮನಸ್ಸು ಅಸ್ತವ್ಯಸ್ತಗೊಳ್ಳುತ್ತದೆ ಅಂತಾದ್ರೆ, ಅವರನ್ನು ಊರಿಗೆ ಕಳಿಸಿ ಬಿಡು.. ಪಲ್ಲವಿ ಸರಿ ಹೋಗ್ತಾಳೆ..''

``ಅವರನ್ನು ಎಲ್ಲಿಗೆ ಕಳಿಸಲಿ ಹೇಮಾ!..ಈಗ ಚಿದಾನಂದನನ್ನು ನಾನು ನನ್ನ ಸಹಾಯಕ್ಕೆ ಅಂತ ಕರೆಸಿಕೊಂಡಿದೀನಿ! ಅವರು ಒಬ್ಬರೇ ಎಲ್ಲಿರ್ತಾರೆ!''

``ಪಲ್ಲವಿಯನ್ನು ಮದುವೆಯಾಗೋಕೆ ಮುಂಚೆ ನೀನು ಇದನ್ನೆಲ್ಲಾ ಯೋಚಿಸ್ಬೇಕಾಗಿತ್ತು ಭುಜೀ...ಬರೀ ಪ್ರೀತಿಸಿದರೆ ಸಾಲದು'' ಅವಳ ಮಾತು ಅಹಿತವಾಗಿತ್ತು.''

``ಇಷ್ಟಕ್ಕೆಲ್ಲ ನೀನೇ ಕಾರಣ.'' ನಗುತ್ತಾ ಹೇಳಿದ. ಪಲ್ಲವಿಗೆ ಮಕ್ಕಳಾಗದಿದ್ದರೆ ನನಗೆ ಯಾವ ಚಿಂತೆಯೂ ಇಲ್ಲ, ಆದರೆ ಅವಳ ಆತಂಕ ನನಗೆ ಭಯವನ್ನು ಹುಟ್ಟಿಸುತ್ತೆ ಹೇಮಾ...ಈಗ ನೀನೇ ಸರಿಯಾದ ಸಲಹೆಯನ್ನು ಕೊಡ್ಬೇಕು.. ಪಲ್ಲವಿ ನಗು ನಗುತ್ತಾ ಇರ್ಬೇಕು. ನನಗೆ ಅದು ಮುಖ್ಯ...'' ಎನ್ನುತ್ತಾ ಅವಳ ಕೈಗಳನ್ನು ಹಿಡಿದ.

``ಅದಕ್ಕೇ ಈ ಪರೀಕ್ಷೆಗಳನ್ನು ಮಾಡಿಸು ಅಂತ ಹೇಳಿದ್ದು, ನಮ್ಮ ಪ್ರಕಾರ ಅವಳಿಗೆ ಯಾವ ಸಮಸ್ಯೆಯೂ ಇಲ್ಲ, ರಿಪೋರ್ಟ್ ಬಂದ ಮೇಲೆ ಅವಳಿಗೇ ಗೊತ್ತಾಗುತ್ತೆ.'' ಅವಳೂ ವಿಶ್ವಾಸದಿಂದ ಅವನ ಕೈಗಳನ್ನು ಒತ್ತಿದಳು.

"ನಾಳೆ ಇದೆಲ್ಲವನ್ನು ಮಾಡಿಸಿಬಿಡು. ನಾನು ರಿಪೋರ್ಟ್‌ಗಳನ್ನು ನೋಡಿ, ನಾನು ನಿಂಗೆ ಫೋನು ಮಾಡ್ತೀನಿ." ಎಂದಳು. ಅವನು ಸಮಾಧಾನದಿಂದ "ಥ್ಯಾಂಕ್ಸ್" ಎಂದ.

"ಭುಜೀ...ನೀನು ನಿನ್ನ ಹೆಂಡ್ತಿಗೋಸ್ಕರ ಒದ್ದಾಡ್ತೋದನ್ನ ನೋಡಿದ್ರೆ ನಂಗೆ ಹೊಟ್ಟೆಕಿಚ್ಚಾಗುತ್ತೇ ಕಣೋ...ಅಷ್ಟೊಂದು ಪ್ರೀತಿಸ್ಲೇ ಬೇಕಾ?" ಕೃತಕವಾಗಿ ನಕ್ಕಳು.

"ನೀನು ಹೊಟ್ಟೆ ಉರಿ ಪಡ್ಲಿ ಅಂತಲೇ ನಾನು ಅವಳನ್ನು ಪ್ರೀತಿಸುಕ್ಕೆ ಶುರು ಮಾಡಿದ್ದು. ಅದಕ್ಕೆ ತಕ್ಕ ಹಾಗೇ ನೀನೂ ಕೈ ಕೊಟ್ಟೆ...ಎಲ್ಲಿದಾರೆ ನಿನ್ನ ಬಾಯ್‌ಫ್ರೆಂಡ್. ಅವರನ್ನು ಪರಿಚಯ ಮಾಡಿಸಿಕೊಡುಲ್ವಾ!" ಮಾತಿನ ದಿಕ್ಕನ್ನು ಬದಲಾಯಿಸಿದ.

"ಸಧ್ಯಕ್ಕೇ ಡೆಲ್ಲೀಲೇ ಇದಾನೆ. ಈ ಸಾರಿ ಬಂದಾಗ ನಾನು ಅವನನ್ನು ಊರಿಗೇ ಕರ್‍ಕೊಂಡು ಬರ್ತೀನಿ, ಅವಳೂ ಮಂದವಾಗಿ ಮುಗುಳ್ನಗುತ್ತಾ ಹೇಳಿದಳು. ಅಮ್ಮ ಒಪ್ಕೋತಾಳೆ ಅನ್ನೋ ನಂಬಿಕೆ ನನಗಿಲ್ಲ, ನೀನು ಒಪ್ಪಿಸಬೇಕು. ಪ್ರಾಮಿಸ್ ಮಾಡಿದೀಯ, ನೆನಪಿಸಿದಳು.

* * *

ಭುಜಂಗ ಪಲ್ಲವಿಯನ್ನು ಕರೆದುಕೊಂಡು ವಾಪಸ್ಸು ಹೊರಟುಹೋಗಿದ್ದ. ಹೇಮಾ ಮೆಡಿಕಲ್ ರಿಪೋರ್ಟ್‌ಗಳನ್ನು ತೆಗೆದುಕೊಂಡು ನೋಡಿದಳು. ತನ್ನ ಸೀನಿಯರ್ ಡಾಕ್ಟರ ಬಳಿ ಮಾತನಾಡಿದಳು. ಪಲ್ಲವಿಯ ಗರ್ಭಕೋಶದಲ್ಲಿ ಸಣ್ಣ ಸಮಸ್ಯೆ ಇರುವುದನ್ನು ಗಮನಿಸಿದರು. ಹೇಮಾಳಿಗೆ ಒಳಗೊಳಗೇ ಖುಷಿಯಾಗಿತ್ತು.

ಪಲ್ಲವಿಗೆ ಇರುವುದು ಒಂದೇ ಅಂಡಾಶಯ. ಅದರಿಂದ ಸರಿಯಾದ ಸಮಯದಲ್ಲಿ ಅಂಡಾಣುಗಳು ಬಿಡುಗಡೆಯಾಗುತ್ತಿಲ್ಲ, ಇದು ಸ್ವಲ್ಪ ಮಟ್ಟಿನ ಸಮಸ್ಯೆ...ಇದಕ್ಕೆ ಕಾರಣ ಅವಳ ಮಾನಸಿಕ ಒತ್ತಡವೇ ಇರಬಹುದು. ಅದನ್ನು ಅವಳಿಗೆ ತಿಳಿಸಬೇಕು...ಅನಂತರ ಸೂಕ್ತವಾದ ಸಲಹೆಗಳನ್ನು ಕೊಡೋಣ. ಅದು ಕೆಲಸ ಮಾಡಬಹುದು. ಅವಳ ಮಾನಸಿಕ ಒತ್ತಡಕ್ಕೆ ನಾನಾ ಕಾರಣಗಳಿರಬಹುದು. ಅದನ್ನೆಲ್ಲಾ ಪೂರ್ತಿ ಹೇಳುವಂತೆ ಮಾಡಬೇಕು. ಆಗ ಅವಳ ಹೃದಯ ಹಗುರವಾಗುತ್ತದೆ. ಮನಸ್ಸಿನ ತುಂಬಾ ಒತ್ತಡವನ್ನು ಹೇರಿಕೊಂಡು, ಗರ್ಭಿಣಿಯಾದರೆ ಅದು ಅವಳಿಗೂ ಒಳ್ಳೆಯದಲ್ಲ, ಒಡಲಲ್ಲಿ ಬೆಳೆಯುವ ಶಿಶುವಿಗೂ ಒಳ್ಳೆಯದಲ್ಲ, ಅವರನ್ನು ಕರೆಸಿ, ವಿವರವಾಗಿ ವಿವರಿಸಿ ಹೇಳ್ತೀನಿ." ಹೇಮಾ ತಲೆಯಾಡಿಸಿ, ಹೊರಬಂದಳು. ಆದರೆ, ಅದೇ ದಿನ ಭುಜಂಗನಿಗೆ ಫೋನು ಮಾಡಲಿಲ್ಲ, ಈ ವಿಷಯವನ್ನು ಅವನಿಗೆ ಹೇಗೆ ತಿಳಿಸುವುದು!...ಅವನ ಮನಸ್ಸೂ ಕುಗ್ಗಿ ಹೋಗುತ್ತದೆ.. ತಾನೇ ಒಂದು ದಿನದ ಮಟ್ಟಿಗೆ ಊರಿಗೆ ಹೋಗಿ ಬರುವುದೆಂದುಕೊಂಡಳು."

* * *

ಶ್ವೇತಾ, ಹೇಮಾಳಿಗೆ ಫೋನು ಮಾಡಿ, ತಾನು ಅವಳನ್ನು ಅರ್ಜೆಂಟಾಗಿ ಕಂಡು ಮಾತನಾಡಬೇಕೆಂದು ಹೇಳಿದಾಗ, ಹೇಮಾ ಅಚ್ಚರಿಗೊಂಡಳು. ತನಗೆ ಶ್ವೇತಾಳೊಂದಿಗೆ ಹೆಚ್ಚು ಬಳಕೆ ಇಲ್ಲ, ತನ್ನ ಹತ್ತಿರ ಏನು ಮಾತಿರಬಹುದು. ಯಾವುದಾದರೂ, ಆರೋಗ್ಯಕ್ಕೆ ಸಂಬಂಧಿ

ಸಿದ ವಿಷಯವಿರಬೇಕೆಂದುಕೊಂಡಳು. ಶ್ವೇತಾ, ಹೇಳಿದ್ದ ಸಮಯಕ್ಕೆ ಸರಿಯಾಗಿ ಬಂದಳು. ಹೇಮಾ ಗಂಭೀರವನ್ನು ನಟಿಸಿ, ಕಾರಣವನ್ನು ಕೇಳಿದಳು. ಶ್ವೇತಾ ಮುಜುಗರಗೊಳ್ಳದೇ ತನ್ನ ವಿಷಯವನ್ನು ತಿಳಿಸಿದಳು.

"ಶರತ್ ಅಂತ ಒಬ್ಬ ಹುಡುಗನ್ನ ನಾನು ಪ್ರೀತಿಸಿದ್ದೆ. ಅವನ ಮಗುವಿಗೆ ತಾಯಿಯಾಗುವ ಸಾಧ್ಯತೆಯೂ ಬಂದಿತ್ತು. ಅಷ್ಟರಲ್ಲಿ ಅವನೊಂದು ಕೊಲೆ ಕೇಸಿನಲ್ಲಿ ಅಪರಾಧಿಯಾಗಿ ಜೈಲು ಸೇರಿಬಿಟ್ಟ. ಅವನನ್ನು ಮದುವೆಯಾಗುವುದು ಸಾಧ್ಯವಿರಲಿಲ್ಲವಾದುದರಿಂದ ಯಾರಿಗೂ ತಿಳಿಯದಂತೆ ಅಬಾರ್ಷನ್ ಮಾಡಿಸ್ಕೊಂಡೆ.. ಈಗ ಮಗು ಬೇಕು ಎನ್ನುವ ಹಂಬಲ ಜಾಸ್ತಿಯಾಗ್ತಿದೆ.. ನಾನು ಒಂದು ಮಗುವನ್ನು ಹೆರಬೇಕು. ಅದಕ್ಕೆ ಸಂಬಂಧಿಸಿದಂತೆ, ನನಗೆ ಸಲಹೆ ಕೊಡ್ತೀರಾ?.."

"ವೆರಿ ಸಿಂಪಲ್, ಮದುವೆಯಾಗಿ...ಗಂಡನೊಡನೆ ಸಂಸಾರ ಮಾಡಿ, ಮಗುವಾಗುತ್ತೆ."

"ನನಗೆ ಮದುವೆಯಾಗುವ ಇಚ್ಛೆ ಇಲ್ಲ, ಆದರೆ ತಾಯಿಯಾಗುವ ಆಸೆ ಇದೆ."

"ಇಂಥದಕ್ಕೆ ನಾನು ಸಲಹೆಯನ್ನು ಕೊಡುವುದಿಲ್ಲ, ಅದು ಅನೈತಿಕ ಸಂಬಂಧ ಅಂತ ಅನ್ನಿಸಿಕೊಳ್ಳುತ್ತೆ. ನಿಮಗೆ ಬೇರೆ ಯಾವ ಬಾಯ್‌ಫ್ರೆಂಡೂ ಇಲ್ವಾ!..."

"ಇಲ್ಲ, ಶರತ್‌ನ ನಂತರ ನಾನು ಯಾರನ್ನೂ ಪ್ರೀತಿಸಲಿಲ್ಲ, ಆದರೆ ಭುಜಂಗನನ್ನು ನೋಡಿದ ಮೇಲೆ ನಾನು ಅವರನ್ನು ಪ್ರೀತಿಸ್ತಿದೀನಿ ಅನ್ನೋ ಭಾವನೆ ಶುರುವಾಗಿದೆ..."

"ನಾನ್ಸೆನ್ಸ್.. ಅವನಿಗೆ ಮದುವೆಯಾಗಿದೆ. ಪಲ್ಲವಿ ಅವನ ಪತ್ನಿ..ಅವಳು ನಿಮ್ಮ ಸ್ನೇಹಿತೆ.. ಗೊತ್ತು ತಾನೇ..ಏನು ಮಾತಾಡ್ತಿದೀರಿ ನೀವು..?"

"ಆ ಕಾರಣದಿಂದ ನಾನು ನನ್ನ ಪ್ರೀತಿಯನ್ನು ಒಳಗೊಳಗೇ ಅದುಮಿಟ್ಟುಕೊಂಡಿದೀನಿ. ಅವರು ಪಲ್ಲವಿಯನ್ನು ಅತಿಯಾಗಿ ಪ್ರೀತಿಸ್ತಾರೆ. ಆಗ ನನ್ನ ಆಸೆಗಳು ಕೆರಳುತ್ತವೆ."

"ಆದಷ್ಟು ಬೇಗ ಮದುವೆಯಾಗಿ. ಈ ಪ್ರೀತಿಯನ್ನು ಮರೆಯಬಹುದು."

"ನನಗೆ ಮದುವೆ ಬೇಡ. ಆದರೆ ಬೇರೆಯದೇ ಒಂದು ಆಸೆ ಇದೆ. ಭುಜಂಗನ ಮಗುವಿಗೆ ತಾಯಿಯಾಗುವಂತೆ...ಅದಕ್ಕೇ ಏನಾದ್ರೂ ಸಲಹೆ ಕೊಡ್ತೀರಾ?..ಭುಜಂಗ ನಿಮಗೆ ಹತ್ತಿರದವರು. ಅವರ ಹತ್ರ ಮಾತಾಡ್ತೀರಾ?"

"ಶ್ವೇತಾ...ನಿಮಗೆ ನಾಚಿಕೆ ಆಗುಲ್ವಾ?...ಇಂಥದಕ್ಕೆಲ್ಲ ಭುಜಂಗ ಒಪ್ಪುವುದಿಲ್ಲ, ನಾನು ಒಪ್ಪಿಸಲು ಸಾಧ್ಯವಿಲ್ಲ, ಪಲ್ಲವಿಗೆ ಗೊತ್ತಾದ್ರೆ ಏನಂದುಕೊಳ್ತಾಳೆ..? ಹೀಗೆಲ್ಲಾ ಮಾತಾಡ್ಬೇಡಿ.."

"ಪಲ್ಲವಿ ಮೊದಲಿನಂತೆ ಇದ್ದಿದ್ರೆ ನಾನೇ ಅವಳ ಹತ್ರ ಮಾತಾಡ್ತಿದ್ದೆ."

"ನೋಡಿ ಶ್ವೇತಾ, ಯಾವ ಹೆಂಡತಿಯೂ, ಗಂಡನನ್ನು ಬೇರೆ ಹೆಂಗಸಿನ ಬಳಿಗೆ ಕಳಿಸಲು ಒಪ್ಪುವುದಿಲ್ಲ...ಇಂಥಾ ಆಲೋಚನೆ ನಿಮಗ್ಯಾಕೆ ಬಂತು?..ನೀವು ಪಲ್ಲವಿಯ ಸ್ನೇಹಿತೆ ಅಂತ ಸುಮ್ಮನಿದೀನಿ...ಇಲ್ದಿದ್ರೆ ಹೊರಗೆ ದಬ್ತಿದ್ದೆ..." ಶ್ವೇತಾ ನಕ್ಕಂತೆ ಮಾಡಿದಳು.

"ನಿಮಗೆ ಭುಜಂಗನ್ನ ಕಳ್ಕೊಂಡೆ ಅಂತ ಅನ್ನಿಸುಲ್ವಾ!...ಅವರನ್ನು ನೀವು ಪ್ರೀತಿಸಲೇ ಇಲ್ವಾ!

ಅವರು ಪಲ್ಲವಿಯ ಜೊತೆ ಇರುವುದನ್ನು ಕಂಡಾಗ ನಿಮಗೆ ಏನೂ ಅನ್ನಿಸುಲ್ವಾ!'' ಕೆಣಕಿದಳು.

''ಇಲ್ಲ, ತಟ್ಟನೆ ನುಡಿದಳು. ಆದರೆ ಮನದಲ್ಲೆಲ್ಲೋ ಸುಳ್ಳು ಎಂಬ ದನಿ ಒಳಗೊಳಗೇ ಕೇಳಿದಂತಾಗಿತ್ತು.'' ನನಗೀಗ ಸ್ವಲ್ಪ ಮುಖ್ಯವಾದ ಕೆಲಸವಿದೆ. ನೀವಿನ್ನು ಹೊರಡಬಹುದು'' ಎಂದಳು. ಶ್ವೇತಾ ಸಪ್ಪಗಿನ ಮುಖವನ್ನು ಹೊತ್ತು ನಡೆದಳು. ಅವಳನ್ನು ಕಳಿಸಿ, ಕ್ಯಾಂಟೀನಿಗೆ ಬಂದು ಒಂದು ಕಪ್ ಕಾಫಿಯನ್ನು ಕುಡಿದು, ತನ್ನ ರೂಮಿಗೆ ಬಂದು ಮಂಚದ ಮೇಲೆ ಉರುಳಿಕೊಂಡಳು. ಶ್ವೇತಾಳ ಮಾತುಗಳು ವಿಚಿತ್ರವೆನಿಸಿತ್ತು. ಮನಸ್ಸು ಕಲಕಿತ್ತು. ಮೊಬೈಲ್ ಫೋನು ರಾಗ ಹಾಡಿತು. ಅತ್ತಲಿಂದ ಅವಳ ಬಾಯ್‌ಫ್ರೆಂಡ್ ಗಿರೀಶ ಮಾತಾಡಿದ್ದ, ಮಾತನ್ನು ಮುಗಿಸಿ, ಅವಳು ಮೊದಲಿಗೆ ಭುಜಂಗನಿಗೆ ಫೋನು ಮಾಡಿದಳು.

* * *

ಭುಜಂಗ, ಸೀದಾ ಹೇಮಾ ಇದ್ದ ಹಾಸ್ಟೆಲ್ಲಿಗೆ ಬಂದ. ಕ್ಯಾಂಟೀನಿನಲ್ಲಿ ತಿಂಡಿ ಕಾಫಿಯನ್ನು ಮುಗಿಸಿದ ನಂತರ ಅವಳು ಅವನಿಗೆ ಮೆಡಿಕಲ್ ರಿಪೋರ್ಟ್ಸ್‌ಗಳನ್ನಿತ್ತಳು.

''ಈ ರಿಪೋರ್ಟ್ಸ್‌ಗಳ ಪ್ರಕಾರ ಪಲ್ಲವಿಯಲ್ಲಿ ಯಾವ ದೋಷವೂ ಇಲ್ಲ, ಒಂದೇ ಒಂದು ಸಮಸ್ಯೆ ಎಂದರೆ, ಅವಳು ಬಹಳ ಟೆನ್ಷನ್‌ನಲ್ಲಿರುವಂತೆ ತೋರುತ್ತೆ. ಅವಳು ಬೇಗ ಗರ್ಭಿಣಿ ಆದರೆ, ಅವಳ ಒತ್ತಡವೂ ಕಡಿಮೆ ಆಗಬಹುದು. ಹಾಗೇ, ಬರೀ ಹೆಂಗರಸರಲ್ಲಿ ಮಾತ್ರ ತೊಂದರೆ ಇರುತ್ತೆ ಅಂತ ಹೇಳುಕ್ಕಾಗುಲ್ಲ, ಗಂಡಸಿನಲ್ಲೂ ದೋಷಗಳಿರುತ್ತವೆ. ಆದ್ದರಿಂದ ನೀನೂ ಒಬ್ಬ ಸ್ಪೆಷಲಿಸ್ಟ್‌ನ ಕನ್ಸಲ್ಟ್ ಮಾಡಿ, ಪರೀಕ್ಷೆ ಮಾಡಿಸಿಕೊಳ್ಳುವುದು ಒಳ್ಳೆಯದು. ಭುಜಂಗನ ಮುಖ ಕೆಂಪಾಯಿತು. ನಾಚಿಕೊಂಡ.

''ಏಯ್...ಏನು ಹೇಳ್ತಿದೀಯ ನೀನು. ನನ್ನಲ್ಲಿ ಏನು ತೊಂದರೆ ಇರುತ್ತೆ?''

''ಇರಲೇ ಬೇಕು ಅಂತೇನಿಲ್ಲ, ನಾನು ಒಬ್ಬ ಡಾಕ್ಟರಾಗಿ ಮಾತ್ರವಲ್ಲ, ಸ್ನೇಹಿತೆಯಾಗಿ ಈ ಸಲಹೆ ಕೊಡ್ತೀನಿ. ಇದರಿಂದ ನಿನಗೂ, ನಿನ್ನ ಹೆಂಡತಿಗೂ ನಿರಾಳವಾಗುತ್ತೆ...ಎಂದು ಹೇಳಿ, ಅವನು ನೋಡಬೇಕಾದ, ಡಾಕ್ಟರಿಗೆ ಫೋನು ಮಾಡಿ, ಭುಜಂಗನನ್ನು ಕಳಿಸುತ್ತಿರುವುದಾಗಿ ತಿಳಿಸಿದಳು.

''ಭುಜೀ ಬೇಜಾರು ಮಾಡ್ಕೋ ಬೇಡ್ವೋ....ಇದೆಲ್ಲಾ ಸುಮ್ಮನೇ ಅಷ್ಟೇ..'' ಎಂದಳು.

''ಇದರ ಅಗತ್ಯ ಇಲ್ಲ ಅಂತ ನಂಗನ್ನಿಸುತ್ತಮ್ಮ...ಪಲ್ಲವಿಗೆ ತಿಳುವಳಿಕೆ ಇಲ್ಲ..ಮಗು ಬೇಕು ಅಂತ ತಲೆ ಕೆಡಿಸ್ಕೊಂಡಿದಾಳೆ...ಏನಾದ್ರೂ ಆಪರೇಷನ್ ಮಾಡಿ, ಅವಳಿಗೆ ಬೇಗ ಮಗುವಾಗುವಂತೆ ಮಾಡು ಮತ್ತೆ.. ನೀನು ಕೇಳಿದಷ್ಟು ಹಣ ಕೊಡ್ತೀನಿ ನಾನು...''

''ಹ್ಞಾಂ...ನೀನು ಹಣ ಅನ್ನುತ್ತುಲ್ಲ ನೆನಪಿಗೆ ಬಂತು.. ನಾನು ಬ್ಯಾಂಕಿನಲ್ಲಿ ಲೋನ್‌ಗೆ ಅಪ್ಲೈ ಮಾಡಿದೀನಿ...ನೀನು ಷೂರಿಟಿ ನಿಂತ್ಕೋತೀಯಾ?''

''ಬ್ಯಾಂಕ್‌ನಲ್ಲಿ ಸಾಲ ಮಾಡ್ತಿದೀಯೇನೆ? ಅಂಥಾ ಖರ್ಚೇನಿದೆ ನಿಂಗೆ?''

''ನಾನು ಫಾರಿನ್ನಿಗೆ ಹೋಗಿ ಓದ್ಬೇಕು...ಬರೀ ಡಿಗ್ರಿ ಯಾತಕ್ಕೂ ಸಾಲದು..''

"ನೋಡಿದ್ಯಾ? ಅದಕ್ಕೇ ಅತ್ತೆ ಗಲಾಟೆ ಮಾಡೋದು...ಏನೂ ಬೇಡ...ಮದುವೆಯಾಗಿ ಬಿಡು. ಇಷ್ಟು ಸಾಕು ಓದಿದ್ದು..."

"ಗಿರೀಶ್ ಕೂಡ ಹೋಗ್ತಿದಾನೆ...ನಾನೂ ಹೋಗ್ಬೇಕು.."

"ಮತ್ತೆ ಮದುವೆ?"

"ಹೋಗುಕ್ಕೆ ಮುಂಚೆ ಮದುವೆ ಆಗ್ತೀನಿ.. ಇನ್ನೂ ಸಮಯ ಇದೆ. ವಿದೇಶದ ಯೂನಿವರ್ಸಿಟಿಯಲ್ಲಿ ಅಪ್ಲೈ ಮಾಡ್ತಿದೀನಿ.."

"ಏನೋಮ್ಮ, ನಂಗೆ ಇದೆಲ್ಲಾ ಅರ್ಥ ಆಗುಲ್ಲ. ನೀನೂ ಹೊರಟು ಹೋದರೆ ಪಲ್ಲವಿಗೆ ಸಲಹೆ ಹೇಳೋರು ಯಾರು?"..

"ನಾನು ಹೊರಡೋಕ್ಮುಂಚೆ ಪಲ್ಲವಿ ಖಂಡಿತಾ ಪ್ರೆಗ್ನೆಂಟ್ ಆಗಿರ್ತಾಳೆ.. ನೀನು ನನ್ನ ಪಲ್ಲವಿಯ ಥರ ಟೆನ್ಷನ್ ಮಾಡ್ಕೋ ಬೇಡ. ಹೆಲ್ತ್‌ಗೆ ಒಳ್ಳೇದಲ್ಲ. ಈಗ ಜಾಣ ಮರಿ ಥರ ಡಾ॥ ಜಮದಗ್ನಿ ಬಳಿಗೆ ಹೋಗಿ, ನಿಮ್ಮ ದಾಂಪತ್ಯದ ಸಮಸ್ಯೆಗಳನ್ನು ಹೇಳು.. ಅವರು ನಿಂಗೆ ಸಲಹೆಗಳನ್ನು ಕೊಡ್ತಾರೆ. ನಾನೂ ಮಾತನ್ನಾಡಿರ್ತೀನಿ." ಭುಜಂಗ ವಿವರಗಳನ್ನು ತಿಳಿದುಕೊಂಡು ಡಾ॥ ಜಮದಗ್ನಿಯವರನ್ನು ಕಾಣಲು ಹೋದ.

ಅವರು ಎಲ್ಲಾ ವಿವರಗಳನ್ನು ಕೇಳಿ ತಿಳಿದುಕೊಂಡ, ಪರೀಕ್ಷೆ ಮಾಡಿಸಲೆಂದು ಅವನ ವೀರ್ಯಾಣುಗಳನ್ನು ಸಂಗ್ರಹಿಸಿದರು. ನಾಲ್ಕು ದಿನಗಳ ನಂತರ ಬಂದು ರಿಪೋರ್ಟನ್ನು ಪಡೆಯುವಂತೆ ಹೇಳಿದ್ದರು. ಈಗ ಭುಜಂಗನಿಗೆ ನಿಜಕ್ಕೂ ಚಿಂತೆ ಆಗಿತ್ತು. ಒಂದು ವೇಳೆ ತನ್ನಿಂದಾಗಿ, ಪಲ್ಲವಿ ಗರ್ಭಿಣಿ ಆಗದಿದ್ದರೆ, ತಾನು ಅವಳಿಗೆ ಅನ್ಯಾಯ ಮಾಡಿದಂತಾಗುತ್ತದೆ. ಅಲ್ಲದೇ ಈ ವಿಷಯವನ್ನು ಅವಳಿಗೆ ತಿಳಿಸುವುದಾದರೂ ಹೇಗೆ? ಅವಳೆದುರಿಗೆ ತಾನು ದುರ್ಬಲನಾಗಿ ಹೋಗುತ್ತೇನೆಂದು ಅವನ ಮನಸ್ಸು ಕುಗ್ಗಿತು. ಮತ್ತೊಮ್ಮೆ ಹೇಮಾಳನ್ನು ಭೇಟಿಯಾದ.

"ನನ್ನಲ್ಲೇ ಏನಾದ್ರೂ ದೋಷ ಇದ್ದರೆ ಏನೇ ಮಾಡೋದು! ಪಲ್ಲವಿಗೆ ನಾನ್ಹೇಗೆ ಮುಖ ತೋರಿಸ್ಲಿ! ಅವಳಿಗೆ ದ್ರೋಹ ಮಾಡಿದಂತಾಗುಲ್ವಾ!"

"ಹಾಗೇನೂ ಆಗುಲ್ಲ, ಹೆದರ್ಬೇಡ...ಹೇಗೂ ಸಧ್ಯದಲ್ಲೇ ರಿಪೋರ್ಟ್ ಬರುತ್ತಲ್ಲ, ಆಮೇಲೆ ಏನ್ಮಾಡ್ಬೇಕು ಅಂತ ಯೋಚಿಸೋಣ..." ಭುಜಂಗ ಮೌನವನ್ನು ಅವಲಂಬಿಸಿದ.

* * *

ಭುಜಂಗ ಊರಿಗೆ ವಾಪಸ್ಸು ಹೊರಟು ಹೋಗಿದ್ದ. ಹೇಮಾ ಅವನ ಮೆಡಿಕಲ್ ರಿಪೋರ್ಟ್‌ಗಳನ್ನು ತರಿಸಿಕೊಂಡು ನೋಡಿದಳು. ಎಲ್ಲಾ ಸರಿಯಾಗಿತ್ತು. ಹೆಮ್ಮೆ ಎನಿಸಿತ್ತು. ಆ ರಾತ್ರಿ ಭುಜಂಗನೊಡನೆ ಮಾತನಾಡಿ ವಿಷಯವನ್ನು ತಿಳಿಸಿದಳು. ಅವನು ನೆಮ್ಮದಿಯ ನಿಟ್ಟುಸಿರನ್ನು ಬಿಟ್ಟಿದ್ದು ಅವಳಿಗೆ ಕೇಳಿಸಿತ್ತು..

"ಹಾಗಾದ್ರೆ ಯಾವ ಆತಂಕವೂ ಇಲ್ಲ. ಪಲ್ಲವಿಯ ಹತ್ತಿರ ಮಾತಾಡ್ತೀಯ?..ಅವಳಿಗೆ ತಿಳುವಳಿಕೆ ಹೇಳು."

"ಬೇಡ ಭುಜೀ..ಅವಳೀಗ ಯಾರ ಮಾತನ್ನೂ ಕೇಳುವುದಿಲ್ಲ. ಒಂದು ಕೆಲಸ ಮಾಡು. ಇನ್ನೊಂದು ವಾರದ ಬಳಿಕ ಅವಳನ್ನು ಕರ್ಕೊಂಡು ಬಾ.."

"ಯಾಕೆ? ಅವಳಲ್ಲಿ ಏನಾದ್ರೂ ತೊಂದರೆ ಇದೆಯಾ?

"ಹೌದು. ನಾನು ನಿನಗೆ ಅವಳ ರಿಪೋರ್ಟ್ಸ್‌ಗಳ ಬಗ್ಗೆ ಹೇಳಲೇ ಇಲ್ಲ. ಅವಳ ಗರ್ಭಕೋಶದಲ್ಲಿ ಸಣ್ಣ ತೊಂದರೆ ಇದೆ. ಅದನ್ನು ಆಪರೇಷನ್ ಮಾಡಿ ಸರಿ ಪಡಿಸಬಹುದು ಅಂತ ಡಾಕ್ಟರು ಹೇಳಿದಾರೆ. ಏನೂ ಭಯವಿಲ್ಲ"

"ಈಗ ಹೇಳ್ತಾ ಇದೀಯಲ್ಲ ಹೇಮಾ...ಅವತ್ತೇ ಯಾಕೇ ಹೇಳ್ಲಿಲ್ಲ?"

"ನಿನ್ನ ಪರೀಕ್ಷೆನೂ ಮಾಡಿಸ್ಬೇಕಾಗಿತ್ತು. ಒಂದು ವೇಳೆ ನಿನ್ನಲ್ಲೇ ದೋಷ ಇದ್ದಿದ್ದರೆ, ನಮ್ಮ ಡಾಕ್ಟರು ಬೇರೆ ಸಲಹೆಯನ್ನೇ ಕೊಡುತ್ತಿದ್ದರು. ಅದನ್ನೆಲ್ಲಾ ಇನ್ನೆಂದಾದ್ರೂ ನಿಧಾನವಾಗಿ ಮಾತನಾಡೋಣ.. ಮೊದಲು, ನೀನು ಎಲ್ಲಾ ರೀತಿಯಿಂದಲೂ ಸರಿಯಾಗಿದೀಯ ಅಂತ ತಿಳಿದು ಹೆಮ್ಮೆ ಅಂತೆನ್ನಿಸಿತು...ನಮ್ಮ ಭುಜಿ ಪರ್ಫೆಕ್ಟ್..." ನಗುವನ್ನು ಸೇರಿಸಿ ನುಡಿದಳು.

"ಇಂಥೋನು ನಿಂಗೆ ಬೇಡವಾದ ಅಲ್ವಾ?"

"ಪಲ್ಲವಿಗೆ ನಿನ್ನನ್ನು ಬಿಟ್ಟು ಕೊಟ್ಟಿದೀನಿ...ಅವಳಿಗೆ ನಿನ್ನ ಅಗತ್ಯವಿತ್ತು..."

"ಸಾಕು ಸುಮ್ನಿರು..."

"ಆಯ್ತು ಸುಮ್ಮನಿರ್ತೀನಿ. ಪಲ್ಲವಿಗೆ ಈಗಲೇ ಏನನ್ನೂ ಹೇಳ್ಬೇಡ. ಅವಳನ್ನು ಕರ್ಕೊಂಡು ಬಾ. ನಾನು ಎಲ್ಲವನ್ನೂ ಸರಿ ಮಾಡ್ತೀನಿ.."

"ಥ್ಯಾಂಕ್ಸ್ ಕಣೇ ಹೇಮಾ.. ಅವಳು ಚಡಪಡಿಸುವುದನ್ನು ನೋಡಿದ್ರೆ, ನನಗೆ ತುಂಬಾ ಬೇಸರ ಆಗುತ್ತೆ...ನೀನು ಇಲ್ದೇ ಇದ್ದಿದ್ರೆ ಏನು ಮಾಡ್ತಿದ್ನೋ..."

"ಅಷ್ಟೆಲ್ಲಾ ಹೊಗಳ್ಬೇಡ...ನಿನ್ನ ಸಹಾಯವೂ ನಂಗೆ ಬೇಕಾಗಿದೆ. ಬ್ಯಾಂಕ್‌ನಲ್ಲಿ ಕೊಡೋ ಹಣ ಸಾಕಾಗುತ್ತೋ ಇಲ್ವೋ.. ನೀನು ಸಹಾಯ ಮಾಡ್ಬೇಕಾಗುತ್ತೆ..."

"ಆಯ್ತು ವ್ಯವಸ್ಥೆ ಮಾಡ್ತೀನಿ. ಎಷ್ಟು ಬೇಕಾಗಬಹುದು ಅಂತ ಸರಿಯಾಗಿ ಹೇಳು."

"ಆಯ್ತು...ಈಗ ಇಡ್ತೀನಿ.. ನೀನು ಹೊರಡೋಕೆ ಮುಂಚೆ ನಂಗೆ ತಿಳಿಸು.. ಇಲ್ಲಿ ಆಪರೇಷನ್‌ಗೆ ಎಲ್ಲಾ ವ್ಯವಸ್ಥೆನೂ ಮಾಡಿಸಿರ್ತೀನಿ." ಅವಳು ಮಾತನ್ನು ಮುಗಿಸಿದಳು. ಅವನು ರೂಮಿನೊಳಕ್ಕೆ ಬಂದು ಬಾಗಿಲನ್ನು ಭದ್ರ ಪಡಿಸಿದ. ಪಲ್ಲವಿ ಎದ್ದು ಕುಳಿತಳು.

"ಇಷ್ಟೊತ್ತು ಯಾರ ಹತ್ರ ಮಾತಾಡ್ತಿದ್ರಿ?.."

"ಹೇಮಾ ಫೋನು ಮಾಡಿದ್ಲು.. ಅವಳ ಸೀನಿಯರ್ ಡಾಕ್ಟರ್ ನಿನ್ನನ್ನು ಮತ್ತೊಮ್ಮೆ ಚೆಕಪ್‌ಗೆ ಕರ್ಕೊಂಡು ಬರುವಂತೆ ಹೇಳಿದಾರಂತೆ.."

"ನಾನು ಹೋಗುಲ್ಲ...ಕೇಳಿದ್ದೇ ಕೇಳ್ತಾರೆ..ಏನೇನೋ ಮಾಡ್ತಾರೆ.. ಬೇಸರ ಆಗುತ್ತೆ."

"ನಿನಗೆ ಅಲ್ವಾ ಅವರಿಂದ ಸಹಾಯ ಬೇಕಾಗಿರೋದು.. ಬೇಜಾರು ಮಾಡ್ಕೊಂಡ್ರೆ ಹೇಗೇ

ಪಲ್ಲವಿ?...ಮುದ್ದಾದ ಮಗು ನಿಂಗೆ ತಾನೇ ಸಿಗೋದು...?"

"ನಂಗೆ ಮಗುವಾಗುವ ಅರ್ಹತೆ ಇದೆಯೋ ಇಲ್ವೋ..ನಾನೂ ನನ್ನ ಅಮ್ಮನ ಹಾಗೆ ಬಂಜೆಯಾಗಿದ್ರೇ...ನಿಮಗೆ ನಾನು ದ್ರೋಹ ಮಾಡಿದ ಹಾಗಾಗುಲ್ವಾ?.."

"ಮುದುಕಿ ಥರ ಮಾತಾಡ್ಬೇಡ. ಮದುವೆಯಾಗಿ ಮೂರು ತಿಂಗಳು ಕಳೆದಿದೆ ಅಷ್ಟೇ. ನೀನ್ಯಾಕೆ ಗರ್ಭಿಣಿ ಆಗಿಲ್ಲ ಅಂತ ಯಾರೂ ಕೇಳಿಲ್ಲ..ಒಂದು ವೇಳೆ ನನ್ನಲ್ಲೇ ದೋಷವಿದ್ದರೇ..?

"ಇಲ್ಲ ಭುಜಂಗ್, ಹಾಗೆ ಇರುಕ್ಕೆ ಸಾಧ್ಯವೇ ಇಲ್ಲ..ನನಗೆ ವಿಶ್ವಾಸವಿದೆ.."

"ಹಾಗೇ ನನಗೂ ನಿನ್ನ ಮೇಲೆ ತುಂಬಾ ಪ್ರೀತಿ ಇದೆ ಪಲ್ಲವಿ. ಮಗುವಿಗಾಗಿ ಎಲ್ಲಾ ಪ್ರಯತ್ನವನ್ನೂ ಮಾಡೋಣ...ಡಾಕ್ಟರು ಹೇಳಿದಂತೆ ಕೇಳಿದ್ರಾಯ್ತು.. ನಾನು ನಿನ್ನ ಕಡೆಗೆ ಇದೀನಿ.." ಪಲ್ಲವಿ ಅವನ ಎದೆಯಲ್ಲಿ ತನ್ನ ಮುಖವನ್ನು ಹುದುಗಿಸಿ ಅತ್ತಳು.

"ಅಳುವಂಥಾದ್ದು ಏನೂ ಆಗಿಲ್ಲ, ಹೇಮಾ ನಮಗೆ ಸಹಾಯ ಮಾಡ್ತಾಳೆ..."

"ನನ್ನ ಮನಸ್ನಲ್ಲಿ ಅದೇ ಕೊರಗು. ಅವಳನ್ನು ಕೇಳದೇ ಇರುವಂತಾಗಿದ್ದರೇ, ಎಷ್ಟು ಚೆನ್ನಾಗಿರ್ತಿತ್ತು ಅಲ್ವಾ!"

"ಒಂದು ವೇಳೆ ನೀನು ನನಗೆ ಸಿಗದೇ ಇದ್ದಿದ್ದರೇ.. ಅಥವಾ ಹೇಮಾಳನ್ನೇ ಮದುವೆ ಆಗಿದ್ದಿದ್ದರೇ...ಅಥವಾ ಬ್ರಹ್ಮಚಾರಿಯಾಗಿ ಹಾಗೇ ಉಳಿದಿದ್ದರೇ.. ಈ 'ರೇ' ಪ್ರಪಂಚವೇ ಬೇರೆ. ಈಗ ಸುಮ್ಮನೇ ಮಲಗು ಎನ್ನುತ್ತಾ ಅವಳನ್ನು ಬಳಸಿದ. ಅವಳು ಒತ್ತಿಕೊಂಡು ಮಲಗಿದಳು.

"ನೀವು ಎಷ್ಟು ಪ್ರೀತಿ ಮಾಡ್ತೀರಿ.. ನಾನು ಎಷ್ಟು ಅದೃಷ್ಟವಂತೆ. ಆದರೂ ನನಗೆ ತೃಪ್ತಿ ಇಲ್ಲ, ಯಾಕೆ ಹೀಗೆ?..ಅತೃಪ್ತಿ, ಆತಂಕ..ಸಾಕಾಗಿದೆ ನಂಗೆ."

"ನೀನು ತುಂಬಾ ಯೋಚಿಸ್ತೀಯ ಅದಕ್ಕೇ.. ಈ ಯೋಚನೆಗಳನ್ನು ಬಿಡು. ಶಾಂತವಾಗಿರು. ಇನ್ನು ಎಂಟು ಹತ್ತು ದಿನ ಬಿಟ್ಟು ಬೆಂಗಳೂರಿಗೆ ಹೋಗೋಣ....ಡಾಕ್ಟರು ನಿನಗೆ ಶುಭ ಸಮಾಚಾರವನ್ನು ತಿಳಿಸ್ತಾರೆ. ನೋಡ್ತಿರು...ಎನ್ನುತ್ತಾ ಅವಳನ್ನು ಪ್ರಣಯದ ಪ್ರವಾಹದಲ್ಲಿ ತೋಯಿಸಿದ. ಅವಳು ಬೇರೆಲ್ಲವನ್ನು ಮರೆಯುವಷ್ಟು...

* * *

ಹದಿನೈದು ದಿನಗಳು ಕಳೆದು ಹೋದವು. ಪಲ್ಲವಿಗೆ ಗರ್ಭ ನಿಂತಿರಲಿಲ್ಲ, ಅವಳು ನಿರಾಶೆಗೊಂಡಿದ್ದಳು. ಅವಳಿಗೆ ಸಮಾಧಾನ ಹೇಳಿ ಹೇಳಿ ಭುಜಂಗ ಸೋತಿದ್ದ, ತಾಯಿಯೊಡನೆ ಮಾತಾಡಿದ.

"ನಮ್ಮಿಬ್ಬರ ಮದುವೆಯಾಗಿ ನಾಲ್ಕು ತಿಂಗಳಾಗ್ತಾ ಬಂತು.. ಪಲ್ಲವಿ ತಾಯಿಯಾಗುವ ಸೂಚನೆ ಕಂಡು ಬಂದಿಲ್ಲ ಅಂತ ನಿಂಗೇನಾದ್ರೂ ಬೇಸರವೇನಮ್ಮಾ?" ಆಕೆ ಅಚ್ಚರಿಗೊಂಡಳು.

"ಅಯ್ಯೋ, ಇದಕ್ಯಾಕೆ ಬೇಸರ? ನಾಲ್ಕು ತಿಂಗಳೇ ತಾನೇ ಆಗಿರೋದು.. ನಾಲ್ಕು ವರ್ಷ ಕಳೆದಿಲ್ಲವಲ್ಲ, ನನಗೆ ಬೇಸರ ಅಂತ ನಿಂಗ್ಯಾಕೆ ಅನ್ನಿಸ್ತು?.. ಹೀಗ್ಯಾಕೆ ಕೇಳ್ತಿದೀಯ?"

"ಅವಳು ಬೇಸರಗೊಂಡಿದಾಳಮ್ಮ...ಅದಕ್ಕೆ ಪರಿಹಾರ ಏನಾದ್ರೂ ಇದೆಯಾ?"

"ಯೋಚನೆ ಮಾಡುವಂಥಾದ್ದೂ ಏನೂ ಇಲ್ಲ, ನಿಧಾನವಾಗಿ ಆಗುತ್ತೆ...ಹಾಗಂತ ತಿಳುವಳಿಕೆ ಹೇಳಿದ್ರಾಯ್ತು..ನೀನ್ಯಾಕೆ ಹೀಗಾಡ್ತೀಯೋ ಹೆಂಗಸಿನ ಥರ...? ಏನವಸರ ಅವಳಿಗೆ?"

"ನಿಂಗೊತ್ತಿಲ್ಲಮ್ಮ...ಪಲ್ಲವಿ ತುಂಬಾ ಸೂಕ್ಷ್ಮ. ಏನೇನನ್ನೋ ತಲೆಗೆ ತುಂಬ್ಕೊಂಡಿದಾಳೆ.."

"ಇದಕ್ಕೆಲ್ಲ ಡಾಕ್ಟರೇ ಸರಿ. ಬುದ್ಧೀನೂ ಹೇಳ್ತಾರೆ. ಸಲಹೇನೂ ಕೊಡ್ತಾರೆ. ಈ ವಿಷಯಗಳನ್ನು ನಾವು ಹೇಳುವುದೂ ಸರಿ ಅಲ್ಲ...ಏನು ಹೇಳ್ಬೇಕು ಅಂತಲೂ ಗೊತ್ತಿಲ್ಲ.."

"ಹಾಗಾದ್ರೆ ಡಾಕ್ಟರ ಹತ್ರ ಕರ್ಕೊಂಡು ಹೋಗ್ಲೇನಮ್ಮ?.."

"ಇಷ್ಟಕ್ಕೇ ಪೀಠಿಕೇನಾ? ಅವಳಿಗಿಂತ ನಿಂಗೇ ತಂದೆಯಾಗಲು ಆತುರವಾಗಿರುವಂತಿದೆ.." ತಾಯಿ ಕಿಸಿ ಕಿಸಿ ನಕ್ಕಾಗ ಅವನು ತಲೆ ಕೆರೆದುಕೊಂಡ.

"ಹೌದಮ್ಮ ಮನೇಲಿ ಚಿಕ್ಕ ಮಕ್ಕಳು ನಗು ನಗ್ತಾ ಆಡ್ತಾ ಇದ್ದರೆ, ಎಷ್ಟು ಚೆನ್ನಾಗಿ ಇರುತ್ತೆ. ವಾಣಿ ಹುಟ್ಟಿದ್ಮೇಲೆ ಮನೇಲಿ ಪುಟ್ಟ ಮಕ್ಕಳೇ ಹುಟ್ಟಿಲ್ಲ ಅಲ್ವಾ!"

"ವಿಜಯಂಗೆ ಮದುವೆಯಾಗಿ ಮೂರು ವರ್ಷಗಳಾಗ್ತಾ ಬಂತು. ಇನ್ನು ತಾಯಿಯಾಗುವ ಯೋಗ ಬಂದಿಲ್ಲ, ಕೇಳಿದ್ರೆ ಬೇಸರ ಮಾಡ್ಕೋತಾಳೆ ಅಂತ ಕೇಳಿಯೇ ಇಲ್ಲ..ಹೇಮಾ ಇಲ್ಲಿಗೆ ಡಾಕ್ಟರಾಗಿ ಬಂದ್ಮೇಲೆ, ಒಂದ್ಸಾರಿ ಕರ್ಕೊಂಡ್ಬಂದು ನೋಡಿಸ್ಬೇಕು.."

"ಹೇಮಂಗೆ ಅನುಭವ ಕಡಿಮೆ.. ಅವಳಿಗಿಂತ ಹಿರಿಯ ಡಾಕ್ಟರ್ಸ್ ಬೇಕಾದಷ್ಟು ಜನ ಇದಾರೆ. ಅವರ ಹತ್ರಕ್ಕೆ ಕರ್ಕೊಂಡು ಹೋಗ್ಬೇಕು.. ಇನ್ನು ಯಾಕೆ ತಡ ಮಾಡ್ಬೇಕು?"

"ಅವಳ ಗಂಡನ ಮನೆಯವರು ಕಳಿಸಿ ಕೊಡ್ಬೇಕಲ್ಲ, ಅವಳ ಹಣೇಲಿ ಏನು ಬರೆದಿದೆಯೋ? ಅವಳೂ ಅಷ್ಟೆ ಕೇಳಿದ್ರೆ ಸರಿಯಾಗಿ ಹೇಳೋದೇ ಇಲ್ಲ"

"ಹಾಗಂತ ಸುಮ್ನಿರುಕ್ಕೆ ಆಗುತ್ತೇನಮ್ಮ. ನಾನು ಭಾವನ ಹತ್ರ ಮಾತಾಡ್ತೀನಿ. ಈಗ ನಂಗೆ ಆ ಧೈರ್ಯ ಬಂದಿದೆ..ಹೆಂಗಸಿಗೆ ತಾಯಿಯಾಗೋ ಆಸೆ ಹೆಚ್ಚು ಅಂತ ತಿಳೀತಿದೆ.."ನಕ್ಕ

"ಹಾಗೇ ಮಾಡು.. ಅವಳಿಗೂ ಎರಡು ಮಕ್ಕಳಾಗ್ಲಿ.. ಕರೆಸಿ ಬಾಣಂತನ ಮಾಡ್ತೀನಿ.."

"ಹಾಗಾದ್ರೆ ಮುಂದಿನ ವಾರ ನಾನು ಪಲ್ಲವಿ ಬೆಂಗಳೂರಿಗೆ ಹೋಗಿ ಬರ್ತೀವಿ" ಎಂದು ಹೇಳಿ ಎದ್ದ, ಸಾವಿತ್ರಿ ಮಗನನ್ನೇ ವಿಚಿತ್ರವಾಗಿ ನೋಡಿದಳು. ಹೇಮಾನೇ ನನ್ನ ಸೊಸೆ ಅಂತ ಅಂದ್ಕೊಂಡಿದ್ದೆ, ಕಂಡಿರದ ಕೇಳಿರದ ಈ ಪಲ್ಲವಿ ಬಂದು ಇವನನ್ನು ಒಲಿಸಿಕೊಂಡಳು. ಇವಳನ್ನು ವಿಪರೀತ ಹಚ್ಚಿಕೊಂಡಿದಾನೆ. ಮುಂದೆ ಹೇಗೋ.. ಹೆಂಡ್ತಿ ಬಸರಿ ಆಗ್ಲಿಲ್ಲ ಅಂತ ತಲೆ ಕೆಡಿಸ್ಕೊಂಡಿದಾನೆ. ಏನು ಈಗಿನ ಕಾಲದ ಹುಡುಗರೋ.. ಸಂಕೋಚವೇ ಕಡಿಮೆ.. ನಮ್ಮ ಕಾಲದಲ್ಲಿ ಹೀಗಿರಲಿಲ್ಲ.. ಇಂಥ ವಿಷಯಗಳನ್ನು ರಾಜಾ ರೋಷವಾಗಿ ಆಡುಕ್ಕೆ ಇತ್ತೇ? ಅಂಥಾ ಆತುರ ಯಾಕೆ?..ಭುಜಂಗ ಮೋಸ ಹೋದನೆ?" ಮನಸ್ಸು ಕಲಕಿತ್ತು.

"ಸಾತೂ..ಸಾತೂ..." ಅತ್ತೆ ಕೂಗಿದ್ದು ಕೇಳಿಸಿತ್ತು. ಈ ಅತ್ತೆಯಂತೂ, ಒಂದು ಗಳಿಗೆ

ಯೋಚಿಸುಕ್ಕೆ ಬಿಡುಲ್ಲ..ಹೀಗೇ ಆಯ್ತು" ಎಂದು ಗೊಣಗಿಕೊಂಡು ಎದ್ದುಬಂದಳು.

"ಭುಜೀ ಏನು ಹೇಳ್ತಿದ್ದ..?.. ಅವನ ಹೆಂಡ್ತಿ ಬಸಿರೀನೇನೆ?" ಮುಸಿ ಮುಸಿ ನಕ್ಕಿತು.

"ಇಲ್ಲ ಅತ್ತೆ...ಅದೆಲ್ಲ ಅವನಿಗೇನು ಗೊತ್ತಾಗುತ್ತೆ?.. ನಮಗೆ ತಾನೇ ಗೊತ್ತಾಗ್ಬೇಕು."

"ಯಾಕೆ ಗೊತ್ತಾಗುಲ್ಲ? ಅವಳು ಅವನ ಹೆಂಡ್ತೀನೇ ತಾನೆ!.. ಅವಳಿಗೆ ಮಗುವಾದ್ರೆ ಇವನೇ ತಾನೇ ತಂದೆ..." ಮದ್ವೆ ಆದಾಗ್ನಿಂದ ನೋಡಿಲ್ವಾ!.. ಒಂದು ಗಳಿಗೆ ಅವಳಿಂದ ದೂರವಿಲ್ಲ"

"ನೀವೊಬ್ರು ನಿಮಗೆ ಸದಾ ಇದೇ ಚಿಂತೆ..ಅವರಿಗೆ ಬೇಕಾದ ಹಾಗೆ ಅವರಿರ್ತಾರೆ.."

"ಹೌದು ಕಣೇ. ಮರಿ ಮಗು ಹುಟ್ಟಿದರೆ ತಾನೇ ನನಗೆ ಕನಕಾಭಿಷೇಕ ಮಾಡೋದು..." ಅತ್ತೆ ಮುಸಿ ಮುಸಿ ನಕ್ಕಾಗ ಸಾವಿತ್ರಿ ನಗಲಿಲ್ಲ, ಇವರಿಗೆ ಈ ಚಿಂತೆ ಅಂತ ಅಂದುಕೊಂಡಳು.

ಪಲ್ಲವಿಯನ್ನು ಹೇಮಾ ಮುಗುಳ್ನಗುತ್ತಾ ಮಾತನಾಡಿಸಿದಳು. ಅವಳ ಸೀನಿಯರ್ ಡಾಕ್ಟರ್, ಮತ್ತೊಮ್ಮೆ ಅವಳನ್ನು ಕೂಲಂಕುಷವಾಗಿ ಪರೀಕ್ಷೆ ಮಾಡಿದಳು. ಸ್ಕ್ಯಾನಿಂಗ್ ರಿಪೋರ್ಟ್ ಕುರಿತು ಹೇಳಿದಳು.

"ನಿಮ್ಮ ಗರ್ಭಕೋಶದಲ್ಲಿ ಸಣ್ಣ ಸಮಸ್ಯೆ ಇದೆ..." ಪಲ್ಲವಿಯ ಮುಖ ಕಪ್ಪಾಯಿತು. ನೀವು ಹೆದರಬೇಕಾಗಿಲ್ಲ, ಒಂದು ಸಣ್ಣ ಆಪರೇಷನ್‌ನಿಂದ ಸರಿ ಮಾಡ್ತೀವಿ...

"ಆಪರೇಷನ್ ಮಾಡ್ಲೇ ಬೇಕಾ?.. ನಂಗೆ ಭಯ ಆಗುತ್ತೆ.."

"ಭಯ ಪಡುವಂಥದ್ದು ಏನೂ ಇಲ್ಲ, ನಿಮಗೆ ಜ್ಞಾನ ಕೂಡಾ ಹೋಗುಲ್ಲ, ಸ್ವಲ್ಪ ನೋವಿನ ಅನುಭವ ಆಗುತ್ತೆ. ಅರ್ಧ ಮುಕ್ಕಾಲು ಗಂಟೆಗಳಲ್ಲಿ ಎಲ್ಲಾ ಮುಗಿಯುತ್ತೆ." ಪಲ್ಲವಿಯನ್ನು ಒಪ್ಪಿಸಿದಳು. ನಂತರ ಭುಜಂಗನೊಡನೆ ಮಾತನಾಡಿದಳು. ಭುಜಂಗ ಪಲ್ಲವಿಯನ್ನು ಶ್ವೇತಾಳ ಮನೆಗೆ ಕರೆತಂದ. ಖುಷಿ ಖುಷಿಯಿಂದಿದ್ದ ಶ್ವೇತಾಳನ್ನು ಪಲ್ಲವಿ ಕಂಡಳು.

"ಏನೇ ಬಹಳ ಸಂತೋಷದಿಂದ ಇದೀಯ. ಏನೇ ಏನು ವಿಷಯ" ಕೇಳಿದಳು.

"ನಾನು ಪ್ರೆಗ್ನೆಂಟ್", ಇವಳ ಕಿವಿಯಲ್ಲಿ ಸಂತಸದಿಂದ ಉತ್ತರಿಸಿದಳು.

"ಏನೇ ಏನು ಹೇಳ್ತಿದೀಯ...? ಹೇಗಾಯ್ತು...ಯಾರವನು?.."

"ಅದನ್ನೆಲ್ಲ ಕೇಳ್ಬೇಡ...ನೀನು ಈಗ ಯಾಕೆ ಬಂದಿದೀಯ ಚೆಕಪ್‌ಗಾ?"

"ಹೂಂ, ನನಗೆ ಮದುವೆಯಾಗಿಲ್ಲ, ಬೇಡ ಅಂತಂದ್ರೂ, ಗಂಡಸು ಮುಟ್ಟಿದ ಕೂಡಲೇ ಪ್ರೆಗ್ನೆಂಟ್ ಆಗಿ ಬಿಡ್ತಿಯ. ನನ್ನ ಮದುವೆಯಾಗಿ ನಾಲ್ಕು ತಿಂಗಳಾಯ್ತು.. ಇನ್ನು ಯಾವ ಸೂಚನೆಯೂ ಇಲ್ಲ.. ನಂಗೆ ಅದೇ ಚಿಂತೆ ಆಗಿ ಹೋಗಿದೆ ಕಣೇ."

"ನಿನ್ನ ಗಂಡ ನಿನ್ನ ಜೊತೆಯಲ್ಲಿ ಹೇಗಿದಾರೆ!.. ನಿನ್ನ ಫಸ್ಟ್ ನೈಟ್, ಹನಿಮೂನ್ ಎಲ್ಲಾ ರಸಮಯವಾಗಿತ್ತು. ಆದರೂ ರಿಸಲ್ಟ್ ಸೊನ್ನೆ.. ಯಾಕೇ! ಡಾಕ್ಟರು ಏನಂತಾರೆ?"

"ಒಂದು ಸಣ್ಣ ಆಪರೇಷನ್ ಮಾಡ್ತಾರಂತೆ.. ನಂಗೆ ಭಯ ಆಗ್ತಿದೆ ಕಣೇ.."

"ಆಪರೇಷನ್ ಸಕ್ಸಸ್ ಆಗಿದ್ರೆ ಅಂತ್ಲಾ?.. ಡೋಂಟ್ ವರಿ.. ನಾನು ನಿನ್ನ ಮಗುವಿಗೆ ಸರೋಗೇಟ್ ಮದರ್ ಆಗ್ತೀನಿ...ಇನ್ನೊಂದು ವರ್ಷ ಹೀಗೇ ಆರಾಮವಾಗಿರು.."

"ಶ್ವೇತಾ...ಎಷ್ಟು ದಿನ ನಿಂಗೆ ಹೇಳಿಲ್ಲ ನಾನು...ಎಷ್ಟೇ ಕಷ್ಟ ಆದ್ರೂ, ಎಷ್ಟು ಖರ್ಚಾದ್ರೂ ಸರಿ.. ನನ್ನ ಮಗುವನ್ನು ನಾನೇ ಹೊತ್ತು, ನಾನೇ ಹೆರ್ಬೇಕು. ತಮಾಷೆಗೂ ನೀನು ಹೀಗೆಲ್ಲಾ ಮಾತಾಡ್ಬೇಡ.. ನಂಗೆ ಸರಿ ಹೋಗುಲ್ಲ, ಅಳು ಬರುತ್ತೆ."

"ಸಾರಿ ಪಲ್ಲವಿ.. ಜನರಲ್ ಆಗಿ ಹೇಳ್ದೆ..." ಶ್ವೇತಾ ಪೆಚ್ಚಾದಳು.

"ನನ್ನ ಜೊತೆ, ಬಂದು ಇರ್ತೀಯಾ?.. ಒಬ್ಬಳೇ ಆಗಿ ಬಿಡ್ತೀನಿ..."

"ಖಂಡಿತಾ...ನೀನು ಕೇಳ್ದೇ ಇದ್ದಿದ್ರೂ ನಾನು ಬರ್ತಿದ್ದೆ ನೀನು ನನ್ನ ಆಪ್ತ ಗೆಳತಿ ಅಲ್ವಾ?" ಅವಳ ಕೊರಳನ್ನು ಬಳಸಿ ಆಲಂಗಿಸಿದಳು. ಅವಳ ಖುಷಿ, ಅತಿಯಾಗಿದೆ ಎನಿಸಿತ್ತು.

"ನಾನು ಆಪ್ತ ಗೆಳತಿ ತಾನೇ! ಸರಿ ಈಗ್ಲಾದ್ರೂ ಹೇಳು.. ನಿನ್ನ ಮಗುವಿನ ತಂದೆ ಯಾರು ಅಂತ.. ಇದೆಲ್ಲಾ ಯಾವಾಗ ನಡೀತು ಅಂತ...ಈಗ ಎಷ್ಟು ತಿಂಗಳು?"

"ಇನ್ನೆಂದಾದ್ರೂ ಹೇಳ್ತೀನಿ. ಈಗ ಸಸ್ಪೆನ್ಸ್ ಇರ್ಲಿ, ಯಾಕಂದ್ರೆ ನಾನು ಮದುವೆ ಆಗಿಲ್ಲದವಳು. ಮಗುವಿನ ತಾಯಿಯಾಗ್ತಾ ಇರುವವಳು" ಪಲ್ಲವಿ ಅವಳನ್ನೇ ಅಸೂಸೆಯಿಂದ ನೋಡಿದಳು. ಹಾಗೇ ಅವ್ಯಕ್ತ ಅನುಮಾನವೂ ಕಾಡಿತು. ಅವಳ ಮುಖವನನು ನೋಡಿ ಶ್ವೇತಾ ನಕ್ಕಳು.

"ನಿನ್ನ ಗಂಡನ ಕಸಿನ್ ಡಾ।। ಹೇಮಾಳನ್ನು ಕೇಳು ಅವಳು ಹೇಳಿದರೂ, ಹೇಳಬಹುದು."

"ನೀನು ಆವಳ ಹತ್ರ ನಿಜ ಹೇಳಿದೀಯ ಅಂತ ಏನು ಗ್ಯಾರಂಟಿ?"

"ಅಯ್ಯೋ ಸುಮ್ನೇ ತಮಾಷೆ ಮಾಡ್ದೆ ಕಣೇ. ನಾನು ಪ್ರೆಗ್ನೆಂಟೂ ಅಲ್ಲ, ಏನೂ ಅಲ್ಲ ನಿನ್ನನ್ನ ರೇಗಿಸುಕ್ಕೆ ಹಾಗೆ ಹೇಳ್ದೆ" ಶ್ವೇತಾ ಎಂದಾಗ ಪಲ್ಲವಿ ಮಂಕಾದಳು.

"ನನ್ನ ಹತ್ರ ಏನೇ ನಿನ್ನ ಹುಡುಗಾಟ? ಮೊದಲೇ ಟೆನ್ಷನ್‌ನಿಂದ ಒದ್ದಾಡ್ತಿದೀನಿ. ಏನೇನೋ ಅನುಮಾನಗಳ ಭೂತ ಕಾಡಿತು ನನ್ನನ್ನು" ಹುಸಿ ಏಟನ್ನು ಕೊಟ್ಟಳು.

"ನಿನ್ನ ಗಂಡನೇ ಈ ಮಗುವಿನ ತಂದೆ ಅಂತ ತಾನೇ ನಿನ್ನ ಅನುಮಾನ?...ನೀನು ಬದುಕಿರುವವರೆಗೂ ನಿನ್ನ ಗಂಡ ನನ್ನ ಕಡೆ ನೋಡುಲ್ಲ.. ಅದೇನೂ ಮಾಯೆ ಮಾಡಿದೀಯೋ?"

"ಎಂಥಾ ನೀಚ ಬುದ್ಧೀನೇ ನಿಂದು...ನಾನು ಸಾಯಲಿ ಅಂತ ಇಷ್ಟ ಪಡ್ತೀಯ?"

"ನಾನೆಲ್ಲೇ ಹಾಗಂದೆ?.. ನೂರು ವರ್ಷ ಕಾಲ ಬಾಳು. ನೂರು ಮಕ್ಕಳನ್ನು ಹೆರೋಕಾದ್ರೆ ಹೆತ್ತು ಬಿಡು. ನಿಂಗೆ ನೋಡ್ಕೋಳ್ಳೋಕೆ ಕಷ್ಟ ಆದರೆ, ನಾನು ಒಂದಿಷ್ಟು ಮಕ್ಕಳನ್ನು ಸಾಕ್ತೀನಿ."

"ಶ್ವೇತಾ! ಅತಿ ಅತಿಯಾಯ್ತು ನಿಂದು. ನಾನೇ ಹೊತ್ತು, ಹೆತ್ತ ಮೇಲೆ ನಾನೇ ಸಾಕ್ತೀನಿ. ಮಂದಾಕಿನಿ ಮಾಡಿದ ಹಾಗೆ ಮಾತ್ರ ಮಾಡುಲ್ಲ" ಕಹಿ ಮುಖ ಮಾಡಿ ನುಡಿದಾಗ ಶ್ವೇತಾ ಪೆಚ್ಚಾದಳು.

* * *

ಪಲ್ಲವಿಯ ಆಪರೇಷನ್ ಮುಗಿದಿತ್ತು. ಅರೆ ನಿದ್ದೆಯಲ್ಲಿದ್ದವಳಿಗೆ, ಹೆಚ್ಚು ನೋವು ಗೊತ್ತಾಗಲಿಲ್ಲ. ಚೆನ್ನಾಗಿ ಎಚ್ಚರವಾದಾಗ ಶ್ವೇತಾ ಎದುರಿಗೆ ಕುಳಿತಿದ್ದಳು.

"ಏನೇ ಹೇಗಿದೀಯ! ಏನನ್ನಿಸ್ತಾ ಇದೆ?" ನಸು ನಗುತ್ತಾ ಕೇಳಿದ್ದಳು.

"ಏನೂ ಅನ್ನಿಸ್ತಿಲ್ಲ ಕಣೇ.. ಏನೂ ನೋವಾಗ್ತಿಲ್ಲ. ಭುಜಂಗ ಎಲ್ಲಿ?...ಕರೀತೀಯಾ?"

"ಅವರು ಡಾಕ್ಟರ ಹತ್ರ ಮಾತಾಡ್ತಿರಬಹುದು. ಇವತ್ತೇ ಡಿಸ್ಚಾರ್ಜ್ ಮಾಡ್ತಾರಂತೆ.."

"ಹೌದಾ! ಪ್ರಯಾಣ ಮಾಡಬಹುದಾ?..ಏನೂ ಆಗುಲ್ಲವಂತಾ?"

"ಒಂದು ವಾರ ನಮ್ಮ ಮನೇಲಿರು. ಮತ್ತೆ ಚೆಕಪ್ ಮಾಡಿಸ್ಕೊಂಡು ಹೋಗೂವಂತೆ."

"ನಿಮ್ಮ ಮನೇಲಾ! ಭುಜಂಗ ಒಪ್ತಾರೋ ಇಲ್ವೋ...ಏನಂತಾರೋ?"

"ಒಪ್ಪದೇ ಏನ್ಮಾಡ್ತಾರೆ? ಹೆಂಡ್ತೀನ ಪ್ರೀತಿಸಿದ್ಮೇಲೆ, ಹೆಂಡತಿಯ ಹೆಲ್ತ್ ಕೂಡಾ ಮುಖ್ಯ ಅಲ್ವಾ?... ಬೇಕಾದ್ರೆ ನಾನು ಹೇಳ್ತೀನಿ...ಡಾಕ್ಟರ ಕೈಲಿ ಹೇಳಿಸಿದ್ರಾಯ್ತು.."

"ಅವರನ್ನ ಕರೀತೀಯ? ಅವರ ಹತ್ರ ಮಾತಾಡ್ಬೇಕು.." ಶ್ವೇತಾ ಎದ್ದಳು. ಸ್ವಲ್ಪ ಹೊತ್ತಿನಲ್ಲೇ ಭುಜಂಗ ಒಳಕ್ಕೆ ಬಂದಿದ್ದ. "ಏನ್ರೀ...ಡಾಕ್ಟ್ರನ್ನ ಕೇಳಿದ್ರಾ!..ನಿಜಕ್ಕೂ ನಾನು ಪ್ರೆಗ್ನೆಂಟ್ ಆಗ್ತೀನಾ?..ಏನೂ ತೊಂದರೆ ಇಲ್ಲವಂತಾ?" ಬಲವಂತದ ನಗೆಯನ್ನು ನಕ್ಕ.

"ಏನೂ ಇಲ್ಲ..ಚಿಂತಿಸ್ಬೇಡ...ಒಂದು ವಾರ ರೆಸ್ಟ್‌ನಲ್ಲಿದ್ರೆ ಸಾಕಂತೆ...ಒಂದು ವಾರ ಆದ್ಮೇಲೆ ಚೆಕಪ್ ಮಾಡ್ತಾರಂತೆ.. ಆಮೇಲೆ ಊರಿಗೆ ಹೋಗೋಣ."

"ಅಲ್ಲೀವರೆಗೆ?..ಎಲ್ಲಿರೋದು?"

"ನೀನು ಶ್ವೇತನ ಮನೇಲಿರು. ಅವಳು ನೋಡ್ಕೋತೀನಿ ಅಂತ ಪ್ರಾಮಿಸ್ ಮಾಡಿದಾಳೆ. ನಾನು ಊರಿಗೆ ಹೋಗಿ ಮತ್ತೆ ಬರ್ತೀನಿ"...

"ಶ್ವೇತಾ, ತಾನು ಪ್ರೆಗ್ನೆಂಟ್ ಅಂತ ಹೇಳಿ ಹೆದರಿಸಿ ಬಿಟ್ಲು." ಪಿಸುದನಿಯಲ್ಲಿ ನುಡಿದಳು.

"ಅವಳು ಪ್ರೆಗ್ನೆಂಟ್ ಆದರೆ ನಿಂಗ್ಯಾಕೆ ಹೆದರಿಕೆ? ಈ ಅನುಮಾನ ನಂಗೆ ಇತ್ತು."

"ನಿಮಗ್ಯಾಕೆ ಅನುಮಾನ ಬಂತು?.. ಅವಳು ನಿಮ್ಮ ಹತ್ರ...ಸಂಬಂಧ ಏನಾದ್ರೂ..."

"ಅಂಥಾ ಅನುಮಾನ ಎಲ್ಲಾ ಪಡ್ಬೇಡ.. ನಂಗೆ ಚಿದಾನಂದ ಎಲ್ಲವನ್ನೂ ಹೇಳಿದಾನೆ.."

"ಅಂದ್ರೇ...ಚಿದಾನಂದ ಏನು ಹೇಳ್ದ?.."

"ಅವಳನ್ನು ಬಿಡುಕ್ಕೆ ಇಲ್ಲಿಗೆ ಬಂದಿದ್ನಲ್ಲ, ಆಗ ಇವಳ ಬಲವಂತಕ್ಕೆ ಅವಳ ಸಹವಾಸ ಮಾಡಿದ್ನಂತೆ...ಅವನೇ ನಂಗೆ ಹೇಳ್ದ...ನಿನಗೆ ನಾನು ಹೇಳಿರ್ಲಿಲ್ಲ ಅಷ್ಟೇ.."

"ಛೀ..ಎಂಥಾ ನಾಚಿಕೆ ಗೆಟ್ಟೋನು.. ಇವಳ ಸಹವಾಸ ಯಾಕೆ ಮಾಡ್ಬೇಕಾಗಿತ್ತು.?"

"ನಿನ್ನ ಸ್ನೇಹಿತೆ ಅಂಥೋಳು. ಅವನನ್ಯಾಕೆ ಅಂತೀಯ? ಅವನು ಇವಳನ್ನು ಮದುವೆಯಾಗೋಕೂ ಸಿದ್ಧನಾಗಿದಾನೆ. ಈಗ ಇಬ್ಬರೂ ಮದುವೆಯಾಗ್ಲೇ ಬೇಕು. ಇಲ್ದಿದ್ರೆ

ಮಗುವಿನ ತಂದೆ ಯಾರು, ಅಂತ ಯಾರಾದ್ರೂ ಕೇಳಿದ್ರೆ ಏನು ಹೇಳ್ತಾಳೆ?..ಮುಂದೆ ಮಗುವಿನ ಗತಿ?"

"ಅವಳು ಮಾತಾಡಿದ ರೀತಿ ನೋಡಿ, ನೀವೇ ಅವಳ ಸಂಬಂಧ ಬೆಳೆಸಿದ್ರೇನೋ ಅಂತ ಅನುಮಾನ ಬಂದಿತ್ತು.. ಇವಳು ಹೀಗೇ...ಮೊದಲು ಶರತ್‌ನ ಸಹವಾಸ ಮಾಡಿದ್ಲು, ಈಗ ಚಿದಾನಂದನ ಮೇಲೆ ಕಣ್ಣು ಈಗ್ಲೂ ಅಬಾರ್ಷನ್ ಮಾಡಿಸ್ಕೋತಾಳೋ ಏನೋ...ಪಾಪಿ.."

"ಹಾಗೆ ಮಾತ್ರ ಮಾಡ್ಬೇಡ ಅಂತ ಅವಳಿಗೆ ಬುದ್ಧಿ ಹೇಳು. ಭ್ರೂಣ ಹತ್ಯೆ ಮಹಾ ಪಾಪ. ಚಿದಾನಂದನನ್ನ ಮದುವೆಯಾಗಲಿ. ನಾವು ಎಲ್ಲಾ ಅನುಕೂಲವನ್ನು ಮಾಡಿಕೊಡೋಣ..."

"ನಾವ್ಯಾಕೆ ಮಾಡ್ಬೇಕು?" ಏನಾದ್ರೂ ಮಾಡ್ಕೊಳ್ಳಲಿ."

"ಚಿದಾನಂದ ನಿನ್ನ ಅಣ್ಣ, ಶ್ವೇತಾ ನಿನ್ನ ಅತ್ತಿಗೆಯಾಗಿ ಬರ್ತಾಳೆ. ನಿನ್ನ ಸ್ನೇಹಿತೆ ನಿನ್ನ ಜೊತೇಲೇ ಇರ್ತಾಳೆ ಅಂತ ಖುಷಿಯಾಗುಲ್ವಾ!... ನಿನಗೂ ಸಮಯ ಕಳೆಯುತ್ತೆ."

"ಅದೆಲ್ಲಾ ನಂಗೆ ಗೊತ್ತಿಲ್ಲ, ನಂಗೆ ಯಾವ ಸಂಬಂಧವೂ ಬೇಡ."

"ಬೇಡ ಅಂತ ಹೇಳಿದ್ರೂ, ಮನಸ್ಸು ಒಪ್ಪದಿದ್ರೂ, ಸಂಬಂಧಗಳು ಕಡಿದು ಹೋಗುಲ್ಲ, ಹಾಗೇ ಉಳಿದಿರುತ್ವೆ."

"ಪ್ಲೀಸ್, ಸಂಬಂಧಗಳ ವಿಷಯ ಬೇಡ." ಅತ್ತ ಮುಖವನ್ನು ತಿರುಗಿಸಿದಳು.

"ಸರಿ, ನಿಂಗೂ ಸುಸ್ತಾಗಿರಬಹುದು. ಮಲಗಿರು. ಡಾಕ್ಟರ ಹತ್ರ ಮಾತನಾಡಿ ಬರ್ತೀನಿ."

"ನಾವು ಹೋಟೆಲ್ಲಿನಲ್ಲಿರುಕ್ಕೆ ಆಗುಲ್ವಾ?"

"ಹೋಟೆಲ್ಲಿನಲ್ಲಿ ಊಟ ತಿಂಡಿ ನೀರು ಏನೂ ಚೆನ್ನಾಗಿರುಲ್ಲ, ಶ್ವೇತಳ ಮನೇಲಾದ್ರೆ ನಿಂಗೆ ಸ್ವಾತಂತ್ರ್ಯವಿರುತ್ತೆ. ಏನು ಬೇಕಾದ್ರೂ ಕೇಳಬಹುದು. ಹೇಗೆ ಬೇಕಾದ್ರೂ ಇರ್ಬಹುದು."

"ಹಳೇ ನೆನಪುಗಳು ಕಾಡುತ್ವೆ ಭುಜಂಗ್.."

"ಒಂದು ವಾರ ಅಷ್ಟೇ...ಅವತ್ತೇ ಊರಿಗೆ ಕರ್‍ಕೊಂಡು ಹೋಗ್ತೀನಿ. ನಂಗೂ ನಿನ್ನನ್ನು ಬಿಟ್ಟಿರುಕ್ಕೆ ಕಷ್ಟ ಆಗುತ್ತೆ ಚಿನ್ನಾ" ಕೆನ್ನೆಯನ್ನು ಸವರಿದ.

"ನನ್ನಿಂದಾಗಿ ನಿಮಗೆ ಎಷ್ಟು ಕಷ್ಟ ಅಲ್ವಾ!" ಪೆಚ್ಚು ಮುಖ ಮಾಡಿದಳು.

"ನೀನು ನನ್ನವಳು..ಮುಂದೆ ಬರಲಿರುವ ಮಗುವೂ ನಮ್ಮದೇ...ಇಂಥ ಕಷ್ಟಗಳು ಎಷ್ಟು ಬಂದ್ರೂ ತಡೆದುಕೊಳ್ತೀನಿ," ಧೈರ್ಯ ತುಂಬುವಂತೆ ಮಾತಾಡಿದ.

"ಎರಡೋ ಮೂರೋ ಮಕ್ಕಳು ಸಾಕು ಭುಜಂಗ್. ಆದರೆ ಏನೂ ತೊಂದರೆ ಇಲ್ವಾ ಅಂತ ಡಾಕ್ಟರನ್ನೊಮ್ಮೆ ಕೇಳ್ಬಿಡಿ." ಅವನು ನಸುನಕ್ಕು ತಲೆಯಾಡಿಸಿದ.

* * *

ಶ್ವೇತಾಳ ಮನೆಯಲ್ಲಿ ಒಂದು ವಾರ ಕಳೆಯುವುದು ಪಲ್ಲವಿಗೆ ಕಷ್ಟವಾಗಲಿಲ್ಲ, ಟಿ.ವಿ.

ನೋಡುವುದು, ಪುಸ್ತಕ ಓದುವುದು, ಹರಟೆ ಹೊಡೆಯುವುದು, ಇವುಗಳಲ್ಲಿ ಸಮಯ ಕಳೆದು ಹೋಗುತ್ತಿತ್ತು. ಹೇಮಾ ದಿನ ಬಿಟ್ಟು ದಿನ ಬಂದು ನೋಡಿ ವಿಚಾರಿಸಿಕೊಂಡು ಹೋಗುತ್ತಿದ್ದಳು. ಹೇಮಾ ಇವಳನ್ನು ಪರೀಕ್ಷಿಸುವುದು, ಹೊಟ್ಟೆಯ ಮೇಲೆ ಕೈಯಾಡಿಸುವುದು, ಅತಿಯಾಗಿ ಮುದ್ದುಗರೆಯುವುದು ಪಲ್ಲವಿಗೆ ಹಿಡಿಸುತ್ತಿರಲಿಲ್ಲ. ಅವಳು ಶ್ವೇತಾಳನ್ನು ಪರೀಕ್ಷಿಸಿ, ವಿಚಾರಿಸಿಕೊಂಡಿದ್ದಳು. ಅವಳು ಅತ್ತ ಹೋದ ಮೇಲೆ, ಪಲ್ಲವಿ ಕೇಳಿದಳು.

"ನೀನು ಬರೀ ಸುಳ್ಳು ಹೇಳ್ತೀಯ. ಈಗ್ಲಾದ್ರೂ ನಿಜ ಹೇಳು. ಹೇಮಾ ನಿನ್ನನ್ನ ಯಾಕೆ ಪರೀಕ್ಷಿಸಿದಳು.? ನೀನು ಪ್ರೆಗ್ನೆಂಟ್ ಅಲ್ಲ ಅಂತ ಮಾತ್ರ ಹೇಳ್ಬೇಡ..ನಿಜ ತಾನೇ?"

"ಹೌದು, ಚೈತ್ರಾ, ನಾನು ಪ್ರೆಗ್ನೆಂಟ್.. ನಾನು ಸಧ್ಯದಲ್ಲೇ ಮದುವೆಯಾಗ್ತಿದೀನಿ.."

"ಯಾರನ್ನ? ಮದುವೆಗೆ ಮೊದಲು ಯಾಕೇ ಹೀಗೆ ಮಾಡ್ಕೊಂಡೆ?"

"ಅದಕ್ಕೇ ನೀನೇ ಕಾರಣ. ನಿನ್ನ ಭುಜಂಗನ ರೋಮಾನ್ಸ್ ನೋಡುವಾಗ, ನನ್ನ ಮನಸ್ಸು ದೇಹ ಸುಖವನ್ನು ಬಯಸಿತು. ಆಗ ಹೀಗೆಲ್ಲಾ ನಡೆದು ಹೋಯ್ತು."

"ಚಿದಾನಂದನೂ ಈ ಲೆವೆಲ್‌ಗೆ ಇಳೀತಾನೆ ಅಂತ ನಾನಂದ್ಕೊಂಡಿರ್ಲಿಲ್ಲ"

"ಚಿದಾನಂದ ಅಂತ ನಾನು ಹೇಳಲಿಲ್ಲವಲ್ಲ.."

"ಚಿದಾನಂದ ಅಲ್ಲದಿದ್ರೆ ಇನ್ಯಾವನೋ..? ನಿಮ್ಮಮ್ಮ ಇದನ್ನೆಲ್ಲಾ ಒಪ್ತಾರೇನೇ?"

"ಇಲ್ಲ, ಅದಕ್ಕೇ ಮದುವೆಯಾಗೋದು.. ಅದೂ ಇಷ್ಟವಿಲ್ಲದೇ "

"ಯಾವೋನನ್ನೋ ಮದುವೆಯಾಗಿ ಅವನಿಗ್ಯಾಕೆ ಮೋಸ ಮಾಡ್ತೀಯ? ಅತ್ಲಾಗೆ ಅಬಾರ್ಷನ್ ಮಾಡಿಸ್ಕೋ...ಆಮೇಲೆ ಕೇರ್‌ಫುಲ್ ಆಗಿರು...ಈ ಮಗು ಯಾಕೆ ಬೇಕು ನಿಂಗೆ?"

"ಚೈತ್ರಾ! ನೀನು ಹೀಗೆಲ್ಲಾ ಮಾತಾಡ್ತೀಯ!..ಮಗುವಿಗಾಗಿ ಹಂಬಲಿಸಿ, ಪ್ರೆಗ್ನೆಂಟ್ ಆಗಿದೀಯ...ನನ್ನ ಪ್ರೆಗ್ನೆನ್ಸಿ ನಿಂಗೆ ಅಸಹ್ಯವಾಗಿ ಕಾಣುತ್ತಾ?.."

"ಸಾರೀ...ನಾನು ಅಸಹ್ಯ ಅಂತ ಹೇಳ್ಲಿಲ್ಲ.. ನಿನ್ನ ಧೋರಣೆ ಸರಿ ಇಲ್ಲ ಅಂತ ಹೇಳ್ದೆ. ಏನಾದ್ರೂ ಮಾಡ್ಕೋ.. ಹೇಮಂಗೆ ಏನು ಹೇಳ್ದೆ.? ಅವಳು ಕೇಳಲಿಲ್ವಾ!.."

"ಕೇಳಿದ್ಲು, ಉಪದೇಶಾನೂ ಮಾಡಿದ್ಲು, ಆದರೆ ಅವಳಿಗೆ ಈಗ ಅರ್ಥವಾಗಿದೆ. ನನ್ನ ಮಗುವನ್ನು ತುಂಬಾ ಲೈಕ್ ಮಾಡ್ತಾಳೆ.. ಪರೀಕ್ಷಿಸುವಾಗ, ಹೊಟ್ಟೆಯನ್ನು ಮುದ್ದಾಡ್ತಾಳೆ. ತುಂಬಾ ಮುಜುಗರವಾಗುತ್ತೆ... ಆದರೂ ಸುಮ್ಮನಿರ್ತೀವಿ." ವಿಚಿತ್ರವಾಗಿ ನಕ್ಕಳು.

"ಹೌದೇನೇ! ಡಾಕ್ಟರಾಗಿ ಹೀಗ್ಯಾಕೆ ಮಾಡ್ತಾಳೆ?.. ವಿಚಿತ್ರ ಅಂತೆನಿಸುತ್ತೆ."

"ಅವಳಿಗೆ ಈಗ, ಮದುವೆ, ಸಂಸಾರ, ಮಕ್ಕಳು ಅಂತ ಆಸೆ ಹುಟ್ಟಿರಬಹುದು. ಭುಜಂಗನ ಮೇಲೆ ಆಸಕ್ತಿ ಮೂಡಿರಬಹುದು.. ಅವಳೂ ಮದುವೆ ಇಲ್ಲದೇ ತಾಯಿಯಾಗಲು ಬಯಸಬಹುದು...ನಿನ್ನ ಗಂಡನ ಮೇಲೆ ಕಣ್ಣಿಟ್ಟಿರು..." ಎಚ್ಚರಿಸಿದಳು.

"ಭುಜಂಗ ಅಂಥೋರಲ್ಲ, ಅವರಿಗೆ ಹೇಮಾಳ ಮೇಲೆ ಪ್ರೀತಿ ಇಲ್ಲ"

"ಇದಕ್ಕೆ ಪ್ರೀತಿ ಮುಖ್ಯವಲ್ಲ, ಆ ಸಮಯದಲ್ಲಿ ಒತ್ತಿಕೊಂಡು ಬರುವ ಆಸೆ. ಆಗ ಬೇರೆ ಯಾವ ಭಾವನೆಯೂ ಬರುಲ್ಲ. ಬರೀ ಗಂಡು ಹೆಣ್ಣುಗಳಾಗಿರ್ತಾರೆ ಅಷ್ಟೆ."

"ಸಾಕು. ನಿಪುಣೆ ಥರ ಮಾತಾಡ್ಬೇಡ. ನಿನಗೆ ಇಂಥ ಆಸೆ ಇರುತ್ತೆ ಅಂತ ನಾನು ಅಂದ್ಕೊಂಡಿರ್ಲಿಲ್ಲ"

"ಆಸೆ? ಒಬ್ಬೊಬ್ಬರಿಗೆ ಒಂದೊಂದು ಥರ ಆಸೆ. ಈಗಂತೂ ತಾಯಿ ಆಗುವ ಆಸೆ ಒತ್ತಿ ಒತ್ತಿಕೊಂಡು ಬರ್ತಿದೆ ನಿಂಗೆ. ನೀನು ಹಣದ ಆಸೆಗಾಗಿ ರಾಜೀವನ್ನ ಮದುವೆಯಾದೆ. ಈಗ ಆಸ್ತಿಯ ಆಸೆಯಿಂದ ಭುಜಂಗನ್ನ ಮದುವೆಯಾಗಿದೀಯ. ಅಂಥ ಅದೃಷ್ಟ ನನಗೆ ಕೂಡ ಬರ್ಲಿಲ್ಲ. ಅಂಗ್ಹಾಗೇ ರಾಜೀವನ ಕಡೆಯಿಂದ ಅಷ್ಟೊಂದು ಹಣ ಸಿಕ್ತಲ್ಲಾ ಏನೇ ಮಾಡ್ದೆ!.. ನಂಗೊಂದಿಷ್ಟು ಕೊಡು. ನನ್ನ ಮಗುವಿಗೋಸ್ಕರ ಖರ್ಚು ಮಾಡ್ತೀನಿ."

"ಇಂಥಾ ಅನೈತಿಕ ಸಂಬಂಧಕ್ಕೆ ಹುಟ್ಟುವ ಮಗುವಿಗೋಸ್ಕರ ನಾನು ಹಣವನ್ನು ಕೊಡುವುದಿಲ್ಲ"

"ಚೈತ್ರಾ! ನೀನು ನಂಗೆ ಅವಮಾನ ಮಾಡ್ತಾ ಇದೀಯ. ಈಗ ನೀನೂ ತಾಯಿಯಾಗುವ ಹಂಬಲದಲ್ಲಿ ಇದೀಯ...ಮಗು ಯಾವುದಾದರೇನು?.. ಒಡಲಲ್ಲಿ ಬೆಳೆಸಿ, ಪೋಷಿಸುವ ತಾಯಿಗೇ ಹಕ್ಕು ಜಾಸ್ತಿ.. ನಿಂಗೂ ಅದರ ಅನುಭವ ಆಗುತ್ತೆ. ಅಲ್ಲಿ ಬರುವುದು ಕೇವಲ ತಾಯಿ ಮಗುವಿನ ಬಾಂಧವ್ಯ ಮಾತ್ರ.. ನೀನು ಹೀಗೆಲ್ಲಾ ಮಾತಾಡಿದ್ರೆ, ನಿಂಗೇ ನೀನು ಅವಮಾನ ಮಾಡಿಕೊಂಡಂತೆ.." ಶ್ವೇತಾ ಉದ್ವೇಗ ಆವೇಶಗಳಿಂದ ನುಡಿದಾಗ, ಪಲ್ಲವಿ ಮೆತ್ತಗಾದಳು. ಶ್ವೇತಾ ಅಲ್ಲಿಂದ ಎದ್ದು ಹೋಗಿ ಮುಂಬಾಗಿಲಿನಲ್ಲಿ ನಿಂತಳು. ಅವಳು ಕಣ್ಣುಗಳನ್ನು ಸೆರಗಿನ ತುದಿಯಿಂದ ಒರೆಸಿಕೊಂಡಿದ್ದನ್ನು ಪಲ್ಲವಿ ಕಂಡಳು. ತನ್ನ ಮಾತುಗಳು ಸ್ವಲ್ಪ ಜಾಸ್ತಿಯಾಯಿತೆನಿಸಿತು. ಇನ್ನು ಮುಂದೆ ಎಷ್ಟೋ ಎಚ್ಚರದಲ್ಲಿರಬೇಕೆಂದುಕೊಂಡಳು.

* * *

ಊರಿಗೆ ಹೋಗಿದ್ದ ಭುಜಂಗ ಹಿಂತಿರುಗಿದ್ದ. ಅವನೊಡನೆ ಚಿದಾನಂದನೂ ಇದ್ದ. ಅವನನ್ನು ಕಂಡೊಡನೆ ಶ್ವೇತಾ ಹುಬ್ಬೇರಿಸಿದಳು. ಅವನು ಪಲ್ಲವಿಯನ್ನು ನೋಡಿ ಮುಗುಳ್ನಕ್ಕ, ಅವಳೂ ನಕ್ಕಂತೆ ಮಾಡಿ, ಭುಜಂಗನನ್ನು ತನ್ನ ಬಳಿಗೆ ಕರೆದಳು.

"ನಿಮ್ಮ ಜೊತೆ ಇವನ್ಯಾಕೆ ಬಂದಿದಾನೆ?.."

"ಅವನು ಇವಳನ್ನು ಮದುವೆಯಾಗಲು ಬಂದಿದಾನೆ.."

"ಅಂದ್ರೇ, ಅವನಿಗೆ ಶ್ವೇತನ ಬಗ್ಗೆ ಎಲ್ಲವನ್ನು ಹೇಳಿ ಬಿಟ್ರಾ?"

"ಹೂಂ, ಈಗ ಅವನು ತಂದೆಯಾಗುತ್ತಿದ್ದಾನೆ. ಆ ಮಗುವಿನ ಮೇಲೆ ಸಂಪೂರ್ಣ ಅಧಿಕಾರ ಅವನಿಗೆ ಇದೆ. ಶ್ವೇತಾ ಏನೇನೋ ನಿರ್ಧಾರ ತಗೊಳ್ಳುವಂತಿಲ್ಲ"

"ನಮಗ್ಯಾಕೆ ಅವರ ವಿಷಯ?ನಮ್ಮ ಸಮಸ್ಯೆಗಳೇ ಬೇಕಾದಷ್ಟಿವೆ."

"ಸಮಸ್ಯೆಗಳು ಯಾರಿಗಿಲ್ಲ? ನಾನೂ ಹೀಗೇ ಯೋಚಿಸಿದ್ದಿದ್ದರೆ, ನೀನು ನನಗೆ ಸಿಗ್ತಾನೇ ಇರ್ಲಿಲ್ಲ..,ಎದ್ದು ಸಿದ್ಧವಾಗು. ಡಾಕ್ಟರ ಹತ್ರ ಹೋಗ್ಬೇಕಲ್ಲ."

"ಶ್ವೇತಾ ಎಷ್ಟು ಅದೃಷ್ಟವಂತೆ ಅಲ್ವಾ! ಎಷ್ಟು ಸುಲಭವಾಗಿ ಪ್ರೆಗ್ನೆಂಟ್ ಆಗಿದಾಳೆ."

"ಇರಬಹುದು, ಆದರೆ ಅವಳು ಹಿಡಿದ ದಾರಿ ಏನೇನೂ ಸರಿ ಇಲ್ಲ, ಅದನ್ನು ಸರಿ ಪಡಿಸಿಕೊಳ್ಳುವ ವಿವೇಕ ಅವಳಿಗಿಲ್ಲ; ಅವನಿಗೆ ಧೈರ್ಯವಿಲ್ಲ. ಈಗ ನಾವು ಸಹಕರಿಸದೇ ಇದ್ದರೆ, ಆ ಮಗುವಿನ ಭವಿಷ್ಯ ಹಾಳಾಗುತ್ತದೆ." ಪಲ್ಲವಿಗೆ ಅವನ ಮಾತು ಇಷ್ಟವಾಗಲಿಲ್ಲ.

"ನೀವು ಏನೂ ಬೇಕಾದ್ರೂ ತಿಳ್ಕೊಳ್ಳಿ. ನಿಮ್ಮಷ್ಟು ದೊಡ್ಡ ಬುದ್ಧಿ ನನಗಿಲ್ಲ. ಅಮ್ಮನ ಪ್ರೀತಿ, ಅಪ್ಪನ ವಾತ್ಸಲ್ಯ ಎಲ್ಲವನ್ನೂ ಕಳ್ಕೊಂಡಿದೀನಿ. ಶರತ್, ರಾಜೀವ್ ಎಲ್ಲರೂ ಮೋಸಗಾರರು ಶ್ವೇತ ಕೂಡಾ ಸ್ವಾರ್ಥಿ. ನಂಗೆ ಈ ಸಂಬಂಧ, ಸ್ನೇಹ ಎಲ್ಲವೂ ವಿಚಿತ್ರವಾಗಿ ಕಾಣುತ್ತೆ."

"ಇನ್ನು ಮುಂದೆ ನೀನು ಬದಲಾಗಬೇಕು ಪಲ್ಲವಿ. ನಾನು ನಿನ್ನೊಂದಿಗೆ ಇದೀನಿ. ನಮ್ಮ ಮನೆಯವರು, ನಮ್ಮ ಊರಿನವರು ಎಲ್ಲರೂ ನಮ್ಮವರೇ. ನಮ್ಮ ಕಷ್ಟಕ್ಕೆ ಆಗಿ ಬರ್ತಾರೆ. ಅಂಥವರುಗಳ ಮಧ್ಯೆ ನಾವೂ ಹಾಗೇ ಇರ್ಬೇಕು. ಆಗ ನಮ್ಮ ಜೀವನ ಸಾರ್ಥಕಗೊಳ್ಳುತ್ತೆ. ಸುಖ, ಆನಂದ ಸಿಗುತ್ತೆ. ಪಲ್ಲವಿ ಅವನಿಗೆ ಉತ್ತರಿಸದೇ ನಸು ನಕ್ಕಳು. ಇಬ್ಬರೂ ಸಿದ್ಧರಾಗಿ ಡಾಕ್ಟರನ್ನು ಕಂಡು ಬರಲು ಹೊರಟರು.

ಅವರಿಬ್ಬರೂ ಅತ್ತ ಹೋದ ಕೂಡಲೇ ಚಿದಾನಂದ ಶ್ವೇತಾಳನ್ನು ಸಮೀಪಿಸಿದ. "ಶ್ವೇತಾ, ನನಗೆ ಎಷ್ಟು ಖುಷಿಯಾಗ್ತಿದೆ ಗೊತ್ತಾ?" ಅವಳ ದೇಹದ ಮೇಲೆ ಕಣ್ಣಾಡಿಸಿದ.

"ಯಾಕೆ? ಏನು ವಿಷಯ" ಏನನ್ನು ಅರಿಯದದವಳಂತೆ ಕೇಳಿದಳು.

"ನಾನು ತಂದೆಯಾಗ್ತಿದೀನಿ. ಇದಕ್ಕಿಂತ ಖುಷಿಯ ವಿಷಯ ಬೇರೆ ಬೇಕಾ?"

"ನಾನೂ ತಾಯಿಯಾಗ್ತಿದೀನಿ. ಆದರೆ, ನನಗೆ ನಿಮ್ಮಷ್ಟು ಖುಷಿ ಆಗ್ತಿಲ್ಲ. ನಿಮಗೆ ಭುಜಂಗನಿಂದ ಗೊತ್ತಾಯ್ತಾ?" ಈ ಮಗು ನಿಮ್ಮದೇ ಅಂತ ಹೇಗೆ ಹೇಳ್ತೀರಿ?"

"ಹೂಂ, ಸುಳ್ಳು ಹೇಳ್ಬೇಡಿ.. ನಿಮ್ಮ ಮುಖ ಸಂತಸದಿಂದ ತುಂಬಿಕೊಂಡಿದೆ."

"ನಿಮಗೆ ಹಾಗೆ ಕಾಣ್ತಿದೆ ಅಷ್ಟೇ.. ಆ ವಿಷಯ ಬಿಡಿ. ಈಗ ಇದ್ದಕ್ಕಿದ್ದ ಹಾಗೆ ಬಂದ ವಿಷಯ? ಚೈತ್ರನ್ನ ನೋಡೋಕೆ ಬಂದ್ರಾ?"

"ಇಲ್ಲ, ನಿಮ್ಮನ್ನ ನೋಡೋಕೆ ಅಂತಲೇ ಬಂದೆ. ಇನ್ನು ತಡ ಮಾಡುವುದು ಬೇಡ. ಆದಷ್ಟು ಬೇಗ ಮದುವೆಯಾಗಿ ಬಿಡೋಣ..." ತನ್ನ ನಿರ್ಧಾರವನ್ನು ತಿಳಿಸಿದ.

"ನನಗೆ ಮದುವೆಯ ಆಸೆ ಇಲ್ಲ."

"ಮತ್ತೆ! ಮಗುವಿನ ತಂದೆ ಯಾರು ಅಂತ ಕೇಳಿದ್ರೆ? ಏನು ಹೇಳ್ತೀರಿ?"

"ಈ ಕಾಲದಲ್ಲಿ ಯಾರೂ ಹಾಗೆ ಕೇಳುಲ್ಲ ಚಿದಾನಂದ್. ನನ್ನ ಮಗುವಿಗೆ ನಾನೇ ತಂದೆ, ನಾನೇ ತಾಯಿ..ಸಾಕಿ ಬೆಳೆಸುವ ಚೈತನ್ಯ ನನಗಿದೆ."

"ಹಾಗೆ ಮಾಡ್ಬೇಡಿ...ನನಗೂ ಅಧಿಕಾರವಿದೆ."

"ಅಧಿಕಾರ ಇದೆ...ನಾನು ಇಲ್ಲ ಅನ್ನುಲ್ಲ, ಆದರೆ ಒಂದು ವಿಷಯ...ನಿಮಗ್ಯಾವ ಕೆಲಸವಿಲ್ಲ, ಸಂಪಾದನೆ ಇಲ್ಲ, ಮದುವೆಯಾಗಿ ನನ್ನನ್ನ ನನ್ನ ಮಗುವನ್ನು ಹೇಗೆ ಸಾಕ್ತೀರಿ?.."

"ಎಲ್ಲಾದಕ್ಕೂ ವ್ಯವಸ್ಥೆ ಮಾಡಿದೀನಿ. ಭುಜಂಗ ಎಲ್ಲ ಅನುಕೂಲವನ್ನು ಮಾಡಿಕೊಟ್ಟಿದಾರೆ. ನನ್ನ ಕಷ್ಟದ ದಿನಗಳು ಕಳೆದವು. ಹೋಟೆಲ್ ಹಾಕಿಸಿ ಕೊಡುವ ವ್ಯವಸ್ಥೆ ಮಾಡಿದಾರೆ. ನಿಮ್ಮನ್ನು ಚೆನ್ನಾಗಿ ನೋಡಿ ಕೊಳ್ತೀನಿ.."

"ನಾನು ನಿಮ್ಮನ್ನು ಪ್ರೀತಿಸುಲ್ಲವಲ್ಲ ಚಿದಾನಂದ್.."

"ಪರವಾಗಿಲ್ಲ, ನಾನು ನಿಮ್ಮನ್ನು ಪ್ರೀತಿಸ್ತೀನಿ...ನನ್ನ ಮಗುವನ್ನು ಹೆಚ್ಚು ಪ್ರೀತಿಸ್ತೀನಿ.." ಶ್ವೇತಾ ನಕ್ಕು ತಲೆದೂಗಿದಳು.

"ಪರವಾಗಿಲ್ಲ ಚಿದಾನಂದ್. ನನ್ನ ಆಕರ್ಷಣೆ, ನಿಮ್ಮಲ್ಲಿ ಪ್ರೀತಿಯನ್ನು ತುಂಬಿಸಿದೆ. ನಿಜ ಹೇಳಿ.. ನನ್ನ ದೇಹದ ಸಂಬಂಧ ಬೆಳೆದ ಮೇಲೆ ಈ ಪ್ರೀತಿ ಹುಟ್ಟಿತೋ.. ಅಥವಾ..

"ಇಲ್ಲ, ಮೊದಲು ನಿಮ್ಮ ಬಗ್ಗೆ ನನಗೆ ಯಾವ ಭಾವನೆಯೂ ಇರಲಿಲ್ಲ, ನೀವು ಮುಂದುವರೆಯದಿದ್ದರೆ, ನನಗೆ ಈ ಆಲೋಚನೆಗಳೇ ಬರುತ್ತಿರಲಿಲ್ಲ, ಆಗ ನಾನು ಮಾಡಿದ್ದು ತಪ್ಪು, ಆ ತಪ್ಪನ್ನು ಸರಿ ಪಡಿಸಬೇಕು ಅಂತ ಅಂದ್ಕೊಂಡೆ. ಅದೇ ಪ್ರೀತಿಯಾಗಿ ಬದಲಾವಣೆಗೊಂಡಿತು. ಈಗ ತಂದೆಯಾಗುವ ಕರ್ತವ್ಯವನ್ನು ನಾನು ನಿಭಾಯಿಸಲೇಬೇಕು. ನಿಮ್ಮ ಆಸೆ ಆಕಾಂಕ್ಷೆ, ಬಯಕೆ, ಬಾಣಂತನ ಎಲ್ಲಾ ಜವಾಬ್ದಾರಿಯೂ ನನ್ನದು. ನಿಮ್ಮ ಆಸೆ ಏನೂಂತ ಹೇಳಿ..ನಿಮಗೆ ಆ ಊರು ಇಷ್ಟವಾಗದಿದ್ದರೆ ಇಲ್ಲೇ ಇದ್ದು ಬಿಡಿ. ನಾನೇ ಆಗ ಈಗ ಬಂದು ಹೋಗಿ ಮಾಡ್ತೀನಿ" ಶ್ವೇತಾ ಪಕಪಕನೆ ನಕ್ಕಳು.

"ನನಗೋಸ್ಕರ ಎಷ್ಟು ಒದ್ದಾಡ್ತೀರಿ ಅಂತ ನಗು ಬರ್ತಿದೆ. ಒಬ್ಬ ಗಂಡಸು, ಅದೂ ಮದುವೆಗೆ ಮೊದಲೇ ತಂದೆಯಾಗುವವನು, ಇಷ್ಟೆಲ್ಲಾ ಆಸೆ ಪಡಬಹುದು ಅಂತ ನನಗೆ ಗೊತ್ತಿರಲೇ ಇಲ್ಲ."

"ಪ್ಲೀಸ್, ನಗ್ಬೇಡಿ, ನಾನು ಶ್ರೀಮಂತನಲ್ಲ, ವಿದ್ಯಾವಂತನಲ್ಲ, ಆದರೆ ಹೃದಯವಂತ.. ನಾನು ಇಷ್ಟೆಲ್ಲವನ್ನು ನಿಮಗೋಸ್ಕರ, ನಮ್ಮ ಮಗುವಿಗೋಸ್ಕರ ಆಡಿದೀನಿ. ಇಷ್ಟರ ಮೇಲೆ ನಿಮ್ಮಿಷ್ಟ ನಾನು ಇನ್ನೇನೂ ಆಡೋದಿಲ್ಲ." ಮುಖದಲ್ಲಿ ಬೇಸರ ತುಂಬಿಕೊಂಡಿತ್ತು.

"ನನ್ನ ಮಾತಿನಿಂದ ನಿಮಗೆ ಬೇಸರ ಆಗಿದೆ. ಗೊತ್ತು. ವೆರಿ ಸಾರಿ. ನನಗೆ ಯೋಚಿಸುಕ್ಕೆ ಸಮಯ ಬೇಕು.." ಚಿದಾನಂದ ಪೆದ್ದನಂತೆ ಸುಮ್ಮನೇ ನೋಡಿದ.

* * *

ಪಲ್ಲವಿಯ ಆಪರೇಷನ್ ನಡೆದು ಒಂದೂವರೆ ತಿಂಗಳಾಗಿತ್ತು. ಮಧ್ಯದಲ್ಲಿ ಡಾಕ್ಟರ್ ಕರೆಸಿದ್ದರಿಂದ, ಭುಜಂಗ ಪಲ್ಲವಿಯನ್ನು ಕರೆದುಕೊಂಡು ಹೋಗಿದ್ದ. ಡಾಕ್ಟರು ಎಲ್ಲಾ ಸರಿಯಾಗಿದೆ ಅಂತ ಹೇಳಿದ್ದರು, ಪಲ್ಲವಿಗೆ ಸಮಾಧಾನವಾಗಿರಲಿಲ್ಲ, ಹೇಮಾ ತಾನೂ ಚೆಕಪ್ ಮಾಡಿದಳು

ಅವಳ ಕಿಬ್ಬೊಟ್ಟೆಯ ಮೇಲೆ ಮೃದುವಾಗಿ ಕೈಯಾಡಿಸಿದಳು.

"ಕಂಗ್ರಾಟ್ಸ್ ಪಲ್ಲವಿ.. ನೀವು ಗರ್ಭಿಣಿಯಾಗಿದ್ದೀರಿ. ನಿಮ್ಮ ಒಡಲಲ್ಲಿ ಒಂದು ಜೀವ ಚಲಿಸುತ್ತಿದೆ. ಅದರ ಅರಿವು ನಂಗೆ ಆಗ್ತಿದೆ."

"ಪಲ್ಲವಿಗೆ ಅವಳ ಮಾತಿನ ಮೇಲೆ ನಂಬಿಕೆ ಹುಟ್ಟಲಿಲ್ಲ.. ಅದ್ಹೇಗೆ ಸಾಧ್ಯ? ಆಪರೇಷನ್ ಆದದ್ದೇ ಈಗ್ಗೆ ಒಂದೂವರೆ ತಿಂಗಳ ಕೆಳಗೆ...ನೀವು ತಮಾಷೆ ಮಾಡ್ತಿದೀರಿ."

"ಇಲ್ಲ ಪಲ್ಲವಿ ನಾನು ತಮಾಷೆ ಮಾಡ್ತಿಲ್ಲ, ನಿಮಗೆ ಈಗಾಗ್ಲೆ ಗೊತ್ತಾಗಿರ್ಬೇಕು. ನೀನು ಹೆಂಗಸು. ತಾಯಿಯಾಗಲಿರುವ ಹೆಣ್ಣಿನ ಮೊದಲ ಸೂಚನೆ, ಋತುವಿನ ದಿನಗಳು ಮುಂದೆ ಹೋಗುವುದು. ಇನ್ನು ಕೆಲವೇ ದಿನಗಳಲ್ಲಿ ನಿಮಗೆ ಒಂದೊಂದಾಗಿ ಎಲ್ಲಾ ಸೂಚನೆಗಳೂ ಪ್ರಾರಂಭವಾಗುತ್ತವೆ. ಇನ್ನು ಮುಂದೆ ನೀವು ನಿಮ್ಮ ಆರೋಗ್ಯದ ಕಡೆ ಹೆಚ್ಚು ಗಮನ ಕೊಡಬೇಕು. ಮನಸ್ಸನ್ನು ಉಲ್ಲಾಸವಾಗಿಟ್ಟುಕೊಳ್ಬೇಕು. ಯಾವುದೇ ಕಾರಣಕ್ಕೂ ಟೆನ್ಷನ್ ಮಾಡ್ಕೋಬಾರದು. ಇಲ್ದಿದ್ರೆ ನಮ್ಮ ಮಗು ಆರೋಗ್ಯವಾಗಿರುವುದು ಹೇಗೆ? ಎನ್ನುತ್ತಾ ಅವಳ ಹೊಟ್ಟೆಯ ಮೇಲೆ ಮುಖವನ್ನಿಟ್ಟು ಮುದ್ದಿಸಿದಳು. ಇವಳು ಮುಜುಗರಗೊಂಡಳು.

ಈ ವಿಷಯವನ್ನು ಪಲ್ಲವಿಗೆ ಮುಂಚೆಯೇ, ಹೇಮಾ ಭುಜಂಗನಿಗೆ ತಿಳಿಸಿ, ಅವನ ಕೈ ಹಿಡಿದು ಕುಲುಕಿ 'ಕಂಗ್ರಾಟ್ಸ್' ಎಂದಿದ್ದಳು. "ಅದೇನು ಜಾದೂ ಮಾಡಿದ್ಯೆ ಹೇಮಾ? ನಿನ್ನ ಕೈ ಗುಣ ಚೆನ್ನಾಗಿದೆ. ಇಷ್ಟು ಬೇಗ ಈ ಸುದ್ದಿ ಅಂತ ಹೇಗೆ ನಂಬೋದು?"

"ನೀನು ನಂಬು, ನಂಬದಿರು, ನೀನು ತಂದೆಯಾಗ್ತಾ ಇರೋದಂತೂ ಗ್ಯಾರಂಟಿ. ಪಲ್ಲವೀನ ಚೆನ್ನಾಗಿ ನೋಡ್ಕೋ..ಬಯಸಿ ಬಯಸಿ ಬಸಿರಿ ಆಗಿದಾಳೇ ನಿನ್ನ ಹೆಂಡ್ತಿ. ಅವಳು ಎಚ್ಚರದಿಂದಿರಬೇಕು.. ಹೆಚ್ಚು ಕಡಿಮೆ ಆಗ್ಬಾರ್ದು".

"ಏನಾದರೂ ತೊಂದರೆನೇನೆ?....ಆತಂಕವಾಗುತ್ತೆ ನಿನ್ನ ಮಾತ್ನಿಂದ."

"ತೊಂದರೆ ಏನಿಲ್ಲ, ಪ್ರತಿ ತಿಂಗಳು ಬಂದು ಚೆಕಪ್ ಮಾಡಿಸ್ಕೊಂಡ್ರೆ ಸಾಕು. ಹಾಗೇ ನಿನ್ನ ಹೆಂಡ್ತಿಯ ಬಯಕೆಗಳನ್ನೆಲ್ಲಾ ಚಾಚೂ ತಪ್ಪದೇ ಪೂರೈಸಬೇಕಪ್ಪಾ.. ಇಲ್ದಿದ್ರೆ ನಮ್ಮ ಮಗು ಮುನಿಸಿಕೊಳ್ಳುತ್ತೆ.." ಸಂತಸ ತುಂಬಿ ತುಳುಕಿದ್ದನ್ನು ಅವನು ಗಮನಿಸಲಿಲ್ಲ,

"ಹಾಗೇನೂ ಆಗುಲ್ಲ ಅವಳು ಏನು ಕೇಳಿದ್ರೂ ನಾನು ಕೊಡಿಸ್ತೀನಿ. ಆಸೆಗಳನ್ನು ಪೂರೈಸ್ತೀನಿ. ನಿಂಗೇನು ಬೇಕು ಹೇಳು. ನಿಂಗೂ ಏನಾದ್ರೂ ಉಡುಗೊರೆ ಕೊಡ್ತೀನಿ."

"ಈ ಮಗೂನ ನಂಗೆ ಕೊಟ್ಬಿಡು. ನಾನು ಸಾಕಿಕೊಳ್ತೀನಿ." ಕಿಲಕಿಲನೆ ನಕ್ಕಳು. ಅವನು ಗಂಭೀರನಾದ.. ಒಳಗೊಳಗೇ ಬೆದರಿದ. ಆದರೂ ತಡವರಿಸದೇ ಹೇಳಿದ.

"ನಿಂಗ್ಯಾಕೆ ಮಗು?.. ಮದುವೆ ಮಾಡ್ಕೋ.. ನಿನ್ನ ಮಗೂನ ನೀನೇ ಹೆತ್ಕೋ.."

"ತಮಾಷೆ ಮಾಡ್ದೆ ಕಣೋ.. ನಂಗೆ ಅದಕ್ಕೆಲ್ಲ ಸಮಯ ಎಲ್ಲಿರುತ್ತೆ?.. ಹಾಗೇನಾದ್ರೂ ಮಗು ಬೇಕು ಅಂತ ಅನ್ನಿಸಿದ್ರೆ, ಬಾಡಿಗೆ ತಾಯೀನ ಗೊತ್ತು ಮಾಡಿಕೊಳ್ತೀನಿ.. ನಿನ್ನ ಹೆಂಡತಿ ಹೆತ್ತು ಕೊಡ್ತಾಳಾ ಕೇಳು.." ಅವನನ್ನೇ ಪರೀಕ್ಷಿಸುವವಳಂತೆ ಕೇಳಿದಳು.

"ಈ ಕೆಲಸಾನ ಪಲ್ಲವಿ ಖಂಡಿತಾ ಮಾಡುಲ್ಲ. ಅವಳಿಗೆ 'ಬಾಡಿಗೆ ತಾಯಿ' ಅನ್ನೋ ಹೆಸರೇ ಅವಳನ್ನು ಕೆರಳಿಸುತ್ತೆ. ತನಗೆ ಅಂಥಾ ಸ್ಥಿತಿ ಎಲ್ಲಿ ಬಂದು ಬಿಡುತ್ತೋ ಅಂತ ಹಗಲೂ ರಾತ್ರಿ ಕೊರಗುತ್ತಿದ್ಲು. ಜೊತೆಗೆ, ಅವಳ ಸ್ನೇಹಿತೆ ಶ್ವೇತಾ ಪ್ರೆಗ್ನೆಂಟ್ ಅಂತ ತಿಳಿದಾಗ್ನಿಂದ, ಬಹಳ ಮಂಕಾಗಿ ಬಿಟ್ಟಿದ್ಲು." ಮುಜುಗರವೆನಿಸಿದ್ದರೂ ಆಡಿದ್ದ.

"ಶ್ವೇತಾ ದಿಟ್ಟ ಹೆಣ್ಣು. ಒಂದು ವೇಳೆ ಅವಳಿಗೆ ಮಕ್ಕಳಾಗದ ಸಮಸ್ಯೆ ಇದ್ದರೂ ಅವಳು ಕೊರಗುತ್ತಿರಲಿಲ್ಲ. ಪಲ್ಲವಿ ಹಾಗಲ್ಲ ಬಹಳ ಸೂಕ್ಷ್ಮ. ಸ್ವಲ್ಪ ದುರಹಂಕಾರ ಕೂಡಾ.."

"ಅದು ದುರಹಂಕಾರ ಅಲ್ಲ, ಒಂಥರಾ ಕೀಳರಿಮೆ. ನಿನಗೆ ಅವಳ ಪೂರಾ ವಿಷಯ ತಿಳಿಯದು. ಅವಳ ಜೀವನದಲ್ಲಿ ಏನೇನೋ ಘಟನೆಗಳು ನಡೆದು ಹೋಗಿವೆ.."

"ಅಂಥೋಳನ್ನು ನೀನ್ಯಾಕೆ ಮದುವೆಯಾದೆ? ಸುಮ್ಮನೇ ಆರಾಮವಾಗಿರೋದನ್ನ ಬಿಟ್ಟು?"

"ನೀನು ಕೈ ಕೊಟ್ಟೆ.ಈಗ ನನ್ನನ್ನ ಕೆಣಕಬೇಡ. ನಾನೂ ಪಲ್ಲವಿ ತುಂಬಾ ಅನ್ಯೋನ್ಯವಾಗಿದೀವಿ. ಅವಳು ಹೇಗೇ ಇರಲಿ, ಏನೇ ಆಗಿರಲಿ, ನಾನು ಅವಳನ್ನು ತುಂಬಾ ಪ್ರೀತಿಸ್ತೀನಿ. ಅವಳ್ಯಾಕೆ ಇನ್ನೂ ಹೊರಕ್ಕೆ ಬಂದಿಲ್ಲ.. ಕರಿ.. ನಾನು ಅವಳ ಹತ್ರ ತುಂಬಾ ಮಾತಾಡ್ಬೇಕು.."

"ಅವಳು ಡಾಕ್ಟರ ಹತ್ರ ಮಾತಾಡ್ತಿದಾಳೆ.. ನನ್ನ ಹತ್ರ ಮಾತಾಡುವಾಗ್ಲೂ ನಿನಗೆ ನಿನ್ನ ಹೆಂಡತಿಯ ಚಿಂತೆ. ನಾನು ಹಣ ಕೇಳಿದ್ನಲ್ಲ.. ಅದಕ್ಕೆ ಏನು ವ್ಯವಸ್ಥೆ ಮಾಡ್ದೆ?.. ನನಗೆ ಹದಿನೈದು ಇಪ್ಪತ್ತು ಲಕ್ಷ ರೂಪಾಯಿಗಳಷ್ಟು ಬೇಕು.. ಸಿಗುತ್ತಾ?.. ವ್ಯವಸ್ಥೆ ಮಾಡ್ತೀಯಾ?"

"ಅಷ್ಟೊಂದಾ? ಅಷ್ಟೆಲ್ಲಾ ಬೇಕಾಗುತ್ತಾ?" ಅಚ್ಚರಿಯಿಂದ ಕೇಳಿದ.

"ಹೂಂ ಮತ್ತೆ, ವಿದೇಶದಲ್ಲಿ ಓದೋದು ಅಂದ್ರೆ ಸಾಮಾನ್ಯಾವಾ?.."

"ಹಾಗಾದ್ರೆ ನಿಮ್ಮಿಬ್ಬರ ಮದುವೆ ಯಾವಾಗ?.. ಎಲ್ಲಾ ನಿರ್ಧರಿಸಿದ್ದಾಗಿದೆಯಾ?"

"ಈ ವರ್ಷದ ಪರೀಕ್ಷೆ ಮುಗಿದ್ಮೇಲೆ.. ಅಷ್ಟರೊಳಗೆ ನಾನು ಫಾರಿನ್ನಿಗೆ ಹೋಗುವ ತಯಾರಿಯನ್ನು ಮುಗಿಸಿಕೊಂಡಿರ್ಬೇಕು.."

"ಪಲ್ಲವಿಗೆ ಹೆರಿಗೆ ಆದ್ಮೇಲೆ ತಾನೇ ಹೋಗೋದು?.."

"ನಾನು ಇಲ್ಲಿ ಆ ಸಮಯದಲ್ಲಿ ಇರಲಿ ಅಂತ ನಿಂಗೆ ಆಸೇನಾ ಭುಜೀ?"

"ಆಸೆ ಅಂತಲ್ಲ.. ನೀನು ಇಷ್ಟೆಲ್ಲಾ ಸಹಾಯ ಮಾಡಿದೀಯ..."

"ನೋಡೋಣ. ಇಲ್ಲಿ ಇರದಿದ್ದರೂ, ಮಗುವಾದ್ಮೇಲೆ ನೋಡಿಕೊಂಡು ಹೋಗೋಕೆ ಮತ್ತೆ ಬರ್ತೀನಿ.. ಶ್ವೇತನ ಮಗೂನೂ ನೋಡ್ಬೇಕಲ್ಲ..."

"ಆ ಮಗುವಿನ ಮೇಲೆ ನಿಂಗ್ಯಾಕೇ ಆಸಕ್ತಿ? ಅದು ಚಿದಾನಂದನ ಮಗು..ನೀನಾದ್ರೂ ಅವಳಿಗೆ ತಿಳುವಳಿಕೆ ಹೇಳು..ಮದುವೆ ಇಲ್ಲದೇ ತಾಯಿಯಾಗ್ತಾಳಂತೆ...ನ್ಯಾಯಾನಾ?"

"ಸುಮ್ಮನೇ ಹಾಗೆ ಹೇಳ್ತಾಳೆ.. ಸಧ್ಯದಲ್ಲೇ ಮದುವೆಯಾಗಿ ನಿಮ್ಮ ಊರಿನಲ್ಲೇ ಬಂದು ಇರ್ತಾಳೆ. ಅವಳು ಚಿದಾನಂದನನ್ನು ಪ್ರೀತಿಸದಿದ್ದರೇನಾಯ್ತು?..ಮಗು ಆರೋಗ್ಯವಾಗಿ ಬೆಳೀಲಿ

ಅನ್ನೋ ಆಸೆ ಅವಳಿಗಿದೆ.. ಭುಜೀ, ನೀನೂ ಸ್ವಲ್ಪ ಅವಳ ಕಡೆ ಗಮನ ಕೊಡು.. ಚಿದಾನಂದನಿಗೆ ಅನುಕೂಲವಿಲ್ಲ, ತಿಳುವಳಿಕೆ ಸಾಲದು.. ಇವಳೋ ಜೋರು..."

"ನನ್ನ ಕೈಲಾದಷ್ಟು ನೋಡಿಕೊಳ್ತೀನಿ...ಪಲ್ಲವಿ ಏನಂತಾಳೋ?"

"ಇದರಿಂದ ನಿನ್ನ ಹೆಂಡತಿಗೂ ಅನುಕೂಲ. ಸ್ನೇಹಿತೆಯರು ಒಟ್ಟೊಟ್ಟಿಗೆ ಇರ್ತಾರೆ.. ನಗು ನಗ್ತಾ ಮಾತಾಡ್ತಾರೆ. ಅದು ಇಬ್ಬರಿಗೂ ಒಳ್ಳೆಯದು. ನಿನ್ನ ಹೆಂಡತಿಗೆ ಶ್ವೇತನ್ನ ಕಂಡರೆ ಅಷ್ಟಕ್ಕಷ್ಟೇ..ನೀನು ಒಪ್ಪಿಸು ಅಷ್ಟೇ..." ಪಲ್ಲವಿ ಹೇಳಿದ್ದನ್ನೆಲ್ಲಾ ಕೇಳ್ಬೇಡ.

"ಹಾಗೇನಿಲ್ಲ, ಸ್ನೇಹಿತೆಯರಲ್ವಾ!..ಕಿಲ ಕಿಲ ಅಂತ ನಗ್ತಾರೆ. ಮತ್ತೆ ಕಿತ್ತಾಡ್ತಾರೆ. ಅದು ಮಾಮೂಲು...ಚಿದಾನಂದ ಒಳ್ಳೆಯವನು. ಹೆಂಡ್ತೀನ ಚೆನ್ನಾಗಿ ನೋಡ್ಕೋತಾನೆ ಬಿಡು.."

"ಸರಿ ನಾನಿನ್ನು ಬರ್ಲಾ?.. ಏನೇ ಬೇಕಿದ್ರೂ ಫೋನು ಮಾಡಿ ಕೇಳು, ನಿಧಾನಿಸ್ಬೇಡ.."

"ಇಲ್ಲ ಕಣೇ ಹೇಮಾ...ನೀನು ಹೇಳಿದ್ದೆಲ್ಲಾ ನೆನಪಿನಲ್ಲಿರುತ್ತೆ." ಅವಳು ಕೈಯಾಡಿಸಿ ಅತ್ತ ಮರೆಯಾದಳು. ಸ್ವಲ್ಪ ಹೊತ್ತಿನಲ್ಲೇ ಪಲ್ಲವಿ ಅವನು ಇದ್ದಲ್ಲಿಗೆ ಬಂದಳು. ಅವನು ತಾನು ಆಸ್ಪತ್ರೆಯಲ್ಲಿದೀನಿ ಎನ್ನುವುದನ್ನು ಮರೆತು, ಅವಳ ಭುಜವನ್ನು ಒತ್ತಿ ಪ್ರೀತಿಯನ್ನು ಪ್ರಕಟಿಸಿದ...ಇನ್ನು ನಿನ್ನನ್ನ ಹಿಡಿಯೋರೇ ಇಲ್ಲ, ತಾಯಿಯ ಪಟ್ಟಕ್ಕೆ ಏರ್ತಾ ಇದೀಯ" ಮುಗುಳ್ನಗುತ್ತಾ ನುಡಿದ.

"ನೀವೂ ತಂದೆ ಆಗ್ತೀದೀರಾ..ಅದನ್ನು ಮರೆತು ಬಿಟ್ರಾ?" ಗೆಲುವಿನಿಂದ ನುಡಿದಳು.

"ಹೇಮಾ ಬಂದು ಹೇಳಿದಾಗ, ನನಗೆ ನಂಬೋಕೇ ಆಗ್ಲಿಲ್ಲ.." ಪಲ್ಲವಿ ಕೆಟ್ಟ ಮುಖ ಮಾಡಿದಳು. ಅಣಕಿಸುವಂತೆ ಹೇಳಿದಳು.

"ಹೇಮಂಗೇನು ಅರ್ಜೆಂಟಿತ್ತು.? ನಾನು ನಿಮಗೆ ಹೇಳಲಿ ಅಂತ ಗೊತ್ತಾಗ್ಬೇಡ್ವಾ?.."

"ಏನೋ ಅವಳಿಗೂ ಖುಷಿ...ಅವಳೇ ಸಲಹೆಗಳನ್ನು ಕೊಡ್ತಾಳೆ ಅಲ್ವಾ?..."

"ಹಾಗಂತ, ಡಾಕ್ಟರಾಗಿಯೇ ಇರಲಿ. ವಿಚಿತ್ರವಾಗಿ ಆಡಿದ್ರೆ ನಂಗೆ ಸರಿ ಹೋಗುಲ್ಲ."

"ಯಾಕೆ ಚಿನ್ನಾ, ಟೆನ್ಷನ್ ಮಾಡ್ಕೋತೀಯಾ.. ಈಗ, ನಿನ್ನ ಹಾಗೂ ಮಗುವಿನ ಆರೋಗ್ಯ ಮುಖ್ಯ.. ಇವತ್ತೇ ಊರಿಗೆ ವಾಪಸ್ಸು ಹೋಗೋಣ. ಅಮ್ಮಂಗೆ ತಿಳಿದ್ರೆ ಸಂತೋಷ ಪಡ್ತಾಳೆ."

"ನಾನು ಸ್ವಲ್ಪ ಶ್ವೇತನ ಹತ್ರ ಮಾತಾಡ್ಬೇಕು.."

"ಅವಳು ತಲೆ ಹರಟೆ ಮಾತಾಡ್ತಾಳೆ ಅಂತ ಬೇಸರ ಮಾಡ್ಕೋತೀಯ.." ಅಂತ ಹೇಳಿದರೂ ಅವಳ ಮನೆಗೆ ಕರೆದೊಯ್ದ. ಅಲ್ಲಿ ಶ್ವೇತಾಳ ತಾಯಿ ಹಾಗೂ ಅಣ್ಣ ಕುಳಿತಿದ್ದರು. ಶ್ವೇತಾ ಇಬ್ಬರನ್ನೂ ಒಳಕ್ಕೆ ಕರೆದಳು. ಅವಳಿಗೆ ಭುಜಂಗನನ್ನು ಕಂಡು ಆನಂದವಾಗಿತ್ತು. ಖುಷಿಯಿಂದ ಅಣ್ಣನಿಗೆ ಭುಜಂಗನನ್ನು ಪರಿಚಯಿಸಿದಳು. ಅವರಿಬ್ಬರೂ ಮಾತನಾಡುತ್ತಿರುವಾಗ, ಅವಳ ತಾಯಿ ಅಡಿಗೆ ಮನೆಯನ್ನು ಸೇರಿದ್ದಳು. ಶ್ವೇತಾ, ಪಲ್ಲವಿಯನ್ನು ತನ್ನ ರೂಮಿಗೆ ಎಳೆದುಕೊಂಡು ಹೋಗಿದ್ದಳು..ಪಲ್ಲವಿಯ ಹೊಟ್ಟೆಯ ಮೇಲೆ ಕೈ ಇಟ್ಟಳು. ಬೆರಳುಗಳು ಕುಣಿದವು.

"ಯೂ ಆರ್ ಪ್ರೆಗ್ನೆಂಟ್..." ಪಲ್ಲವಿಯ ಕೆನ್ನೆಗೆ ಮುತ್ತಿಟ್ಟಳು.

"ಥೂ ಇದೇನೇ ಇದು.. ನೀನೂ ಹೇಮಾಳ ಥರ ಆಡ್ತೀಯ...ಅದ್ಸರಿ, ನಾನು ಪ್ರೆಗ್ನೆಂಟ್ ಅಂತ ನಿಂಗೆ ಹೇಗೆ ಗೊತ್ತಾಯ್ತು...?" ಶ್ವೇತಾ ಎಚ್ಚರ ವಹಿಸಿದಳು.

"ನಿನ್ನ ಮುಖವೇ ಹೇಳ್ತಿದೆ. ನಾಲ್ಕು ಸಲ ಡಾಕ್ಟರ ಬಳಿಗೆ ಓಡಾಡಿದ್ಮೇಲೆ ಪ್ರೆಗ್ನೆಂಟ್ ಆಗ್ದೇ ಇರೋಕೆ ಸಾಧ್ಯಾನಾ? ಹೇಗಾದ್ರೂ ಸರಿ, ಮಕ್ಕಳು ಬೇಕು ಅಂತ ವ್ರತ ಹಿಡಿದೋರಿಗೆ, ವರ ಕೊಡೋದೇ ಈ ಡಾಕ್ಟರುಗಳ ಕೆಲಸ. ಅಂತೂ ಹಠ ಸಾಧಿಸಿಯೇ ಬಿಟ್ಟೆ. ಇನ್ನು ನಿನ್ನನ್ನ ಹಿಡಿಯೋರೇ ಯಾರಿಲ್ಲ." ಮತ್ತೆ ಮುದ್ದಿಸಿದಳು.

"ಮೆಲ್ಲಗೆ ಮಾತಾಡೆ, ಹೊರಗೆ ನಿಮ್ಮಣ್ಣ ಇದಾನೆ. ನಿನ್ನ ವಿಷಯ ಏನು ಅಂತ ಹೇಳು.. ನಿನ್ನ ತಾಯಿಗೆ, ಅಣ್ಣಂಗೆ ವಿಷಯ ಗೊತ್ತಾಯ್ತಾ?.. ಏನಂದ್ರು?.. ಬೈದ್ರಾ?"

"ಇಲ್ಲ, ಇನ್ನು ನಾನು ಹೇಳಿಲ್ಲ, ಆದರೆ ಅಮ್ಮಂಗೆ ಅನುಮಾನ ಬಂದಿದೆ. ಈಗ ಎರಡು ದಿನಗಳಿಂದ ವಾಂತಿಯಾಗ್ತಿದೆ.. ಜೊತೆಗೆ ಬಳಲಿಕೆ. ಅದಕ್ಕೇ ಅಮ್ಮನ್ನ ಕರೆಸ್ಕೊಂಡಿದೀನಿ. ಡಾಕ್ಟರ ಹತ್ರ ಹೋಗು ಹೋಗು ಅಂತ ಪೀಡಿಸ್ತಿದಾಳೆ.. ನಾನು ಅವಾಯ್ಡ್ ಮಾಡ್ತಿದೀನಿ.."

"ಹೇಳ್ದೇ ಮುಚ್ಚಿಡುಕ್ಕೇ ಆಗುತ್ತಾ?..ಆ ಧೈರ್ಯ ಎಲ್ಲಿ ಹೋಯ್ತು?.."

"ಆ ಧೈರ್ಯ ಈಗ್ಲೂ ಇದೆ. ಆದರೆ ಅಬಾರ್ಷನ್ ಮಾಡಿಸ್ಕೋ ಅಂತ ಗಲಾಟೆ ಮಾಡಿದ್ರೆ, ನಂಗೆ ಇಷ್ಟ ಆಗುಲ್ಲ, ನಂಗೆ ಈ ಮಗು ಬೇಕು. ಆದರೆ ಅಮ್ಮ ನನ್ನ ಜೊತೇಲಿ ಇದ್ರೆ ಸರಿ ಹೋಗುಲ್ಲ, ನನ್ನನ್ನ ನಿನ್ನ ಜೊತೇಲಿ ಕರ್ಕೊಂಡು ಹೋಗ್ತೀಯ?.."

"ನನ್ನ ಜೊತೇಲಿ ಬರ್ತೀಯ? ನನ್ನ ಗಂಡ, ಅತ್ತೆ ಎಲ್ರೂ ಏನಂತಾರೋ.."

"ಭುಜಂಗ ಅಂಥೋರಲ್ಲ, ಅವರಿಗೆ ನನ್ನ ಸ್ಥಿತಿ ಅರ್ಥ ಆಗುತ್ತೆ.."

"ಆದರೆ, ಮದುವೆ ಆಗಿಲ್ಲದೋಳು ಅಂತ ಎಲ್ರಿಗೂ ಗೊತ್ತು. ಆ ಊರಿನಲ್ಲಿ ಅದೇ ಒಂದು ದೊಡ್ಡ ವಿಷಯ ಆಗುತ್ತೆ...ಜನ ನೂರೆಂಟು ಮಾತಾಡ್ತಾರೆ.."

"ನಾನು ಒಳಗೇ ಇರ್ತೀನಿ. ಹೊರಕ್ಕೇ ಬರುಲ್ಲ, ಹೇಮಾನೇ ಬಂದು ಪರೀಕ್ಷೆ ಮಾಡಲಿ. ಡೆಲಿವರಿ ಹೊತ್ತಿಗೆ ಇಲ್ಲಿಗೆ ಬಂದು ಬಿಡ್ತೀನಿ.."

"ಇಲ್ಲಿ ನಿಂಗೆ ಬಾಣಂತನ ಯಾರು ಮಾಡ್ತಾರೆ?..ನಾನು ಒಂದು ಸಲಹೆ ಕೊಡ್ತೀನಿ. ನೀನು ಚಿದಾನಂದನನ್ನು ಮದುವೆಯಾಗು. ಅವನ ತಾಯಿ ನಿನ್ನನ್ನ ನೋಡ್ಕೋತಾರೆ.."

"ಎಲ್ರೂ ಚಿದಾನಂದನ್ನು ಮದುವೆಯಾಗು ಅಂತ ಸಲಹೆ ಕೊಡ್ತೀರಲ್ಲ, ಅದು ಅಷ್ಟು ಅನಿವಾರ್ಯಾನಾ?.. ಅವನಿಗೆ ಸಂಸಾರ ಮಾಡುವ ಅರ್ಹತೆಯೇ ಇಲ್ಲ, ಏನಿದೆ ಅವನ ಹತ್ರ?"

"ಮತ್ಯಾಕೆ ಅವನ ಸಹವಾಸ ಮಾಡ್ದೆ?.. ನಿಂಗೆ ಬೇರೆ ಗಂಡಸು ಸಿಗಲಿಲ್ವಾ?.."

"ಕಾಲು ಪೆಟ್ಟಾದಾಗ, ಅವನು ನನ್ನ ಶುಶ್ರೂಷೆ ಮಾಡ್ದ, ಅವನು ಬೇಕು ಅಂತ ಅನ್ನಿಸ್ತು.. ಬಲವಂತ ಮಾಡಿದ್ದು ನಾನೇ.. ಆಗ ಆ ಆಸೆ ಮೂಡಿದ್ದು ನಿಜ. ಆದರೆ ನಾನು ಅವನನ್ನು

ಪ್ರೀತಿಸುಲ್ಲ ಕಣೇ...ಅವನಿಂದ ಸುಖ ಸಿಕ್ತು...ಈಗ ನಾನು ಬಸಿರಿ.. ನನಗೆ ಖುಷಿ ಅಷ್ಟೇ''

''ನಂಗೊತ್ತು.. ನಿನಗೆ ಶರತ್‌ನ ಮರೆಯುಕ್ಕೆ ಆಗಿಲ್ಲ ಅಂತ. ಶರತ್‌ನ ನೀನು ಮದುವೆಯಾಗಿದ್ರೂ, ಅತ್ತಿಗೆ ಸಂಬಂಧ ಆಗ್ತಿತ್ತು.. ಈಗ ಚಿದಾನಂದನ ಹೆಂಡತಿಯಾದರು ಅತ್ತಿಗೇನೇ...ಆದರೆ ಇಬ್ಬರೂ ಸ್ವಂತದವರಲ್ಲ, ಅದೇ ನಂಗೆ ಬೇಸರ..''

''ಮತ್ಯಾಕೆ ಮದುವೆಯಾಗು ಅಂತ ಹೇಳ್ತಿದೀಯ...ಕರ್ಣನ ತಾಯಿಯಾಗ್ತೀನಿ ಬಿಡೇ..''

''ನಿನ್ನ ಮರ್ಯಾದೆ ಉಳೀಲಿ ಅಂತ...ನಿನ್ನ ಮಗುವಿಗೆ ತಂದೆಯ ಪೋಷಣೆ ಸಿಗಲಿ ಅಂತ.. ತಂದೆ ಇಲ್ಲದೇ ಹೇಗೆ ಬೆಳೆಸ್ತೀಯ? ಕರ್ಣನನ್ನು ಕುಂತಿ ದೂರ ಮಾಡಿದ್ಲು.''

''ನಂಗೆ ಸ್ವಲ್ಪ ದುಡ್ಡು ಕೊಡ್ತೀಯೇನೆ?...ಮಗುವಿನ ಹೆಸರಿನಲ್ಲಿ ಡಿಪಾಸಿಟ್ ಮಾಡ್ತೀನಿ. ಮಗುವಿಗೋಸ್ಕರ ಖರ್ಚು ಮಾಡ್ತೀನಿ.. ಮಗುವಿಗೆ ತಂದೆಯೂ ನಾನೇ; ತಾಯಿಯೂ ನಾನೇ.''

''ಹುಂ, ಕೊಡ್ತೀನಿ. ಆದರೆ ಒಂದು ಕಂಡೀಷನ್. ನೀನು ಚಿದಾನಂದನನ್ನು ಮದುವೆಯಾಗ್ಬೇಕು.. ಅವನಿಗೆ ಕಷ್ಟ ಆಗ್ಬಾರ್ದು ಅಂತ ಭುಜಂಗ ಹೇಳ್ತಾನೇ ಇರ್ತಾರೆ..''

''ಭುಜಂಗ ತುಂಬಾ ಒಳ್ಳೆಯವ್ರು. ನಂಗೆ ಖಂಡಿತಾ ಸಹಾಯ ಮಾಡ್ತಾರೆ ಅಂತ ನಂಗೆ ಗೊತ್ತಿತ್ತು.. ಅವರಿಗೆ ಎಷ್ಟು ಥ್ಯಾಂಕ್ಸ್ ಹೇಳಿದ್ರೂ ಸಾಲ್ದು.''

''ಅದಿರ್ಲಿ.. ಮದುವೆ ಬಗ್ಗೆ ಏನು ಹೇಳ್ತೀಯ..ನಿನ್ನ ಅಣ್ಣನ ಹತ್ರ ಮಾತಾಡ್ತಾ!''

''ನೀವೆಲ್ಲಾ ಇಷ್ಟು ಹೇಳಿದ್ಮೇಲೆ, ಇಲ್ಲ ಅಂತ ಹೇಗೆ ಹೇಳ್ಲಿ..? ಅಣ್ಣಂಗೆ ನನ್ನ ಮೇಲೆ ಕೋಪ..ಅವನ ಹತ್ರ ದುಡ್ಡಿಲ್ಲ, ನನ್ನನ್ನೇ ಪೀಡಿಸ್ತಾನೆ.. ಮದುವೆ ಮಾಡ್ಕೋತೀನಿ ಅಂತಂದ್ರೆ ಒಪ್ತಾನೋ ಇಲ್ವೋ.. ಎಲ್ಲಾದ್ರೂ ಏಕಾಂಗಿಯಾಗಿದ್ದು ಬಿಡೋಣ ಅಂತನ್ನಿಸ್ತಿದೆ.''

''ಒಪ್ಪದಿದ್ರೆ! ನಿನ್ನನ್ನ ನಿನ್ನ ಮಗೂನ ಸಾಕ್ತಾನಂತಾ, ಖಂಡಿತಾ ಇಲ್ಲ''

''ಅಬಾರ್ಷನ್ ಮಾಡಿಸ್ಕೋ ಅಂತ ಎಳ್ಕೊಂಡು ಹೋಗ್ತಾನೆ ಅಷ್ಟೇ.. ಕಡೇಲಿರುವ ಪರಿಹಾರ ಅದೊಂದೇ..ಆ ತಪ್ಪನ್ನು ಮಾತ್ರ ಮಾಡುಲ್ಲ, ಆದರೂ ಏನನ್ನೂ ಹೇಳುಕ್ಕಾಗುಲ್ಲ''

''ಆ ಕೆಲಸ ಮಾತ್ರ ಮಾಡ್ಬೇಡ ಶ್ವೇತಾ. ಭ್ರೂಣ ಹತ್ಯೆ ಮಹಾಪಾಪ..ನಿನ್ನ ಒಡಲು ಬಹಳ ಫಲವತ್ತಾದದ್ದು.. ಯಾವ ಹರಕೆ, ಬೇಡಿಕೆ, ಕೋರಿಕೆಗಳು ಇಲ್ಲದೇ, ಗರ್ಭಿಣಿ ಆಗ್ಬಿಟ್ಟೀಯ.. ಈ ವಿಷಯದಲ್ಲಿ ನಾನು ವಂಚಿತಳು. ನಿನ್ನ ಹಾಗೇ ನಾನೂ ಇದ್ದಿದ್ದರೇ..?''

''ಈಗ ಎಲ್ಲಾ ಸರಿ ಹೋಯ್ತಲ್ಲೇ..ಆಸೆ ನೆರವೇರ್ತಿದೆ.. ಇಷ್ಟೆಲ್ಲಾ ಸಾಧ್ಯವಾದದ್ದು ಡಾ॥ಹೇಮಾಳಿಂದ...ಅವಳು ಫಾರಿನ್ನಿಗೆ ಓದುಕ್ಕೆ ಹೋಗ್ತಾಳಂತೆ.. ಅವಳೂ ಖುಷಿಯಾಗಿದಾಳೆ..''

''ಹಾಗಂತ ನಿಂಗೆ ಹೇಳಿದ್ಲಾ..?''

''ಹುಂ, ಅಲ್ಲಿಗೆ ಹೋಗುಕ್ಕೇ ಹಣಾನ ಹೊಂದಿಸ್ತಿದಾಳಂತೆ. ಎಲ್ಲಾ ವ್ಯವಸ್ಥೆ ಆದ ಕೂಡಲೇ ಹೊರಟು ಬಿಡ್ತಾಳಂತೆ. ಆಮೇಲೆ ಮತ್ತೆ ಬರೋದು ಯಾವಾಗ್ಲೋ?''

''ಬರೋದೇ ಬೇಡ.. ಅಲ್ಲೇ ಎಲ್ಲಾದ್ರೂ ಇರಲಿ..''

"ಏನೇ ಚೈತ್ರಾ ಹೀಗಂತೀಯಾ? ಅವಳಿಂದ ನಮಗೆ ಎಷ್ಟು ಅನುಕೂಲ ಆಗಿದೆ ಗೊತ್ತಾ?"

"ನಿನಗೆ ಆಗಿರಬಹುದು. ನನಗೇನಾಗಿದೆ?.." ನಾಲಿಗೆಯ ತುದಿಯವರೆಗೆ ಬಂದ ನುಡಿಗಳನ್ನು ಶ್ವೇತಾ ತಡೆದುಕೊಂಡಳು. ನನಗೆ ಆಪರೇಷನ್ ಮಾಡಿದ ಡಾಕ್ಟರ್ರೇ ಬೇರೆ. ಇವಳೋ ನನ್ನ ಹೊಟ್ಟೇಲಿ ಬೆಳೀತಿರೋ ಮಗೂನ ಮುದ್ದಾಡಿದ್ದೂ ಮುದ್ದಾಡಿದ್ದೇ. ಅಸಹ್ಯ ಆಗುತ್ತೆ. ಯಾವುದಾದ್ರೂ ಡಾಕ್ಟರ್ರು ಹೀಗಾಡಿದ್ದನ್ನ ಕೇಳಿದ್ಯಾ? ಯಾವ ಹೆಂಗಸೂ ಹೀಗಾಡಿದ್ದನ್ನು ಕೇಳಿರ್ಲಿಲ್ಲ."

"ಅವಳು ನಂಗೂ ಹಾಗೇ ಮಾಡ್ತಾಳೆ...ಭುಜಂಗನ ಮಗು ಅಂತ ಅಕ್ಕರೆ ಇರಬಹುದು. ಮಾಡ್ಲಿ ಬಿಡು..ಅಥವಾ ಬೇರೆ ಕಾರಣಗಳಿರಬಹುದು..ಅದೂ ಒಂಥರಾ ಹುಚ್ಚಾಸೆ."

"ಬಿಟ್ಟರೆ, ನಾಳೆ ನಂದೇ ಮಗು ಅಂತ ಅಂತಾಳೆ.. ಆಗೇನ್ಮಾಡ್ತೀಯೋದು?"

"ಹೋಗ್ಲಿ ಬಿಡೇ, ಫಾರಿನ್ನಿಗೆ ಹೊರಟು ಹೋದ್ರೆ ನಮ್ಮ ಸಂಬಂಧವೇ ಅವಳಿಗಿರುಲ್ಲ."

"ಆ ದಿನ ಬೇಗ ಬರ್ಲಿ ಅಂತ ಕಾಯ್ತಾ ಇದೀನಿ.."

"ನೀನು ತುಂಬಾ ಸ್ವಾರ್ಥಿ ಆಗಿ ಬಿಟ್ಟಿದೀಯ.. ನೀನು ಮುಂಚೆ ಹೀಗಿರ್ಲಿಲ್ಲ."

"ಅನುಭವಗಳು ನನ್ನನ್ನ ಸ್ವಾರ್ಥಿ ಮಾಡಿಬಿಟ್ಟಿದೆ. ಮುಂದೆ ನಿನ್ನ ಪ್ಲ್ಯಾನ್‌ಗಳೇನು?"

"ಸಧ್ಯಕ್ಕೆ ಚಿದಾನಂದನನ್ನ ಮದುವೆಯಾಗಿ ನಿಮ್ಮೂರಿಗೆ ಬರ್ತೀನಿ. ನಾನು ನಿಂಗೆ ಅತ್ತಿಗೆ ಆಗ್ತೀನಮ್ಮ...ನನ್ನತ್ರ ನಿನ್ನ ಸ್ವಾರ್ಥ ಬುದ್ಧೀನ ತೋರಿಸ್ಬೇಡ.."

"ಈ ಸಂಬಂಧಗಳನ್ನೆಲ್ಲ ಬಿಟ್ಟು ನಾನು ನನ್ನ ಗಂಡ ಹಾಗೂ ನನ್ನ ಮಗು, ಮೂವರೇ ಪ್ರತ್ಯೇಕವಾಗಿ ಇರುವಂತಿದ್ದರೆ ಎಷ್ಟು ಚೆನ್ನಾಗಿರುತ್ತೇ ಅಲ್ವಾ?" ಶ್ವೇತಾ ನಕ್ಕಳು.

"ಯಾವುದೇ ಸಂಬಂಧಗಳನ್ನು ಅಷ್ಟು ಸುಲಭವಾಗಿ ಬಿಡುಕ್ಕೆ ಆಗುಲ್ಲಮ್ಮ.. ಹೊಸ ಹೊಸ ಸಂಬಂಧಗಳು ಕೂಡಾ ತಗುಲಿಕೊಳ್ಳುತ್ತಿರುತ್ತವೆ..ನಿನಗೇ ಗೊತ್ತಿಲ್ಲದ ಹಾಗೆ..ಅವಳ ದೃಷ್ಟಿ ಚೈತ್ರಳ ಬಸಿರ ಕಡೆಗೆ ತಿರುಗಿತು. ಹಾಗೇ ತನ್ನ ಬಸಿರ ಕಡೆ ಚಿತ್ತ ಹರಿಯಿತು.

"ನನಗೆ ಗೊತ್ತಿಲ್ಲದ್ದು ಏನೂ ಇಲ್ಲ. ಭುಜಂಗ ನನಗೆ ಹೊಸಬನಾದರೂ, ಅವರು ನನ್ನ ಗಂಡ. ಅವರ ವಂಶದ ಕುಡಿ ನನ್ನ ಬಸಿರಲ್ಲಿ ಬೆಳೆಯುತ್ತಿದೆ. ನಾನು ತಾಯಿ.. ಅವರು ತಂದೆ.. ಈ ಸಂಬಂಧ ಅಪೂರ್ವವಾದುದು. ಇದನ್ನು ಬಿಟ್ಟು ಬೇರೆ ಸಂಬಂಧಗಳು ನಂಗೊತ್ತಿಲ್ಲ"

ಶ್ವೇತಾ ತುಟಿಗಳನ್ನು ಕದಲಿಸಲಿಲ್ಲ, ಆದರೆ ಮನದಲ್ಲೇ ಅಂದುಕೊಂಡಳು. "ಪಲ್ಲವೀ.. ನಿಂಗೆ ಗೊತ್ತಿಲ್ಲದ ವಿಷಯ ಒಂದಿದೆ. ಅದು ತಿಳಿದ ದಿನ ನಿನಗೆ ಆಘಾತವಾಗುವುದು ಖಂಡಿತಾ.. ಆದರೆ ಅದನ್ನು ನಾನು ಹೇಳಿ ಕೆಟ್ಟವಳಾಗುವುದಿಲ್ಲ, ನನ್ನ ಒಡಲಲ್ಲಿ ಬೆಳೆಯುತ್ತಿರುವ ಮಗುವಿಗೋಸ್ಕರವೇ ನಾನು ನಿಮ್ಮೂರಿಗೆ ಬರಲು ಸಿದ್ಧಳಾಗಿರುವುದು. ಚಿದಾನಂದನನ್ನು ಮದುವೆಯಾಗುತ್ತಿರುವುದು, ಇಲ್ಲದಿದ್ದರೆ ಅವನು ನನಗೆ ತಕ್ಕವನಲ್ಲ, ನಿಮ್ಮೂರು ನನಗೆ ಇಷ್ಟವಿಲ್ಲ."

"ಏನೇ ಏನನ್ನು ಯೋಚಿಸ್ತಿದೀಯ... ನನ್ನ ಮಾತು ... ಕೇಳಿಸ್ತಿದೆ ತಾನೇ ? ಮಂದಾಕಿನಿ

ನನ್ನ ಜನ್ಮದ ರಹಸ್ಯವನ್ನು ತಿಳಿಸಿದಾಗ್ನಿಂದ ಏನೋ ಕೊರತೆ ಕಾಡ್ತಾನೇ ಇದೆ...ಆದರೆ ಈಗ ಸ್ವಲ್ಪ ಸಮಾಧಾನಗೊಂಡಿದೀನಿ. ನನ್ನ ಕರುಳಿನ ಕುಡಿಗೆ ನಾನೇ ಸ್ವಂತ ತಾಯಿ ಗೊತ್ತಾ?.."

"ಹುಂ, ಹೊತ್ಮೇಲೆ, ಹೆತ್ಮೇಲೆ ನೀನೇ ತಾನೇ ತಾಯಿ? ಅದೇನು ಹೆಚ್ಚುಗಾರಿಕೆ?.."

"ಗಂಡಸನ್ನು ಬದಲಾಯಿಸುವಂತೆ, ಮಗುವನ್ನು ಬದಲಾಯಿಸುವ ಆಲೋಚನೆ ಮಾಡ್ಬೇಡ.. ಈಗಿನ್ನೂ ಪ್ರಾರಂಭ.. ತಿಂಗಳುಗಳು ತುಂಬಲಿ. ಆ ಹೆಚ್ಚುಗಾರಿಕೆ ಏನು ಅಂತ ನಿಂಗೇ ಅರಿವಾಗುತ್ತೆ ನೋಡ್ತಿರು." ಅವಳ ಸಮಾಧಾನಕ್ಕಾಗಿ ಶ್ವೇತಾ ನಕ್ಕಂತೆ ಮಾಡಿದಳು.

* * *

ಭುಜಂಗನೇ ಮುಂದಾಳತ್ವ ವಹಿಸಿ, ಚಿದಾನಂದರ ಮದುವೆಗೆ ಎಲ್ಲಾ ಸಿದ್ಧತೆಗಳನ್ನು ಮಾಡಿದ. ವೈದೇಹಿ ಕೇಳಿದಳು. "ಇದೇನೋ ಇಷ್ಟು ಆತುರಾತುರವಾಗಿ ನೀನೇ ಎಲ್ಲವನ್ನು ಯಾಕೆ ಮಾಡ್ತಿದೀಯಾ? ಚಿದಾನಂದನಿಗೂ ಆ ಹುಡುಗಿಗೂ ಹೊಂದಾಣಿಕೆ ಇಲ್ಲವೇನೋ ಅನ್ನೋ ಅನುಮಾನ ಬರ್ತಿದೆ ನಂಗೆ.."

"ಹಾಗೇನಿಲ್ಲ ಅತ್ತೆ. ಇಬ್ಬರೂ ಒಬ್ಬರನ್ನೊಬ್ಬರು ಒಪ್ಪಿದಾರೆ. ಹೊಂದಾಣಿಕೆ ತಾನಾಗಿಯೇ ಆಗುತ್ತೆ. ನೀವು ಏನೇನೋ ಆಡ್ಬೇಡಿ. ಚಿದಾನಂದನಿಗೆ ಬೇರೆ ಹೆಣ್ಣು ಎಲ್ಲಿ ಸಿಗ್ತಾಳೆ?"

"ಮಂದಾಕಿನಿಗೆ ಸಮ್ಮತವಿರುವಂತೆ ಅನ್ನಿಸುವುದಿಲ್ಲ, ಮಗಳ ಸ್ನೇಹಿತೆ ಅಂತ ಸುಮ್ಮನಿದಾಳೆ."

"ಯಾಕಂತೆ! ಶ್ವೇತಾ ಚೆನ್ನಾಗಿಲ್ವಾ! ಚಿದಾನಂದನಿಗೆ ಅನುರೂಪ ಅಲ್ವಾ?.."

"ಆ ಹುಡುಗಿ ನಮ್ಮ ಚಿದಾನಂದನನ್ನು ಹೇಗೆ ಒಪ್ಕೊಂಡ್ಳು ಅಂತ?..ಇವನೇನು ನಿನ್ನ ಹಾಗೆ ಸುಂದರನೆ! ಶ್ರೀಮಂತನೇ ವಿದ್ಯಾವಂತನೇ?..ಆ ಹುಡುಗಿಯ ನಡತೆ ಚೆನ್ನಾಗಿದೆ ತಾನೇ?..ಸ್ವಲ್ಪ ಗಂಭೀರ ಕಡಿಮೆ, ಕೆಟ್ಟ ಫ್ಯಾಷನ್ನು..."

"ಅತ್ತೆ ಹೀಗೆಲ್ಲಾ, ಬೇರೆಯವರ ಮನೆ ಹೆಣ್ಣು ಮಗಳ ಬಗ್ಗೆ ಮಾತಾನಾಡಬಾರದು."

"ನೀನ್ಯಾಕೋ ರೇಗ್ತೀಯ?..ನೀವೆಲ್ಲಾ ಗಂಡು ಹುಡುಗರು, ಒಂದೇ ಕುಲಕ್ಕೆ ಸೇರಿದವರು, ಪ್ರೀತಿಸಿ ಬಿಡ್ತೀರಿ. ಹೆತ್ತವರಿಗೆ ಪ್ರಾಣ ಸಂಕಟ. ಎಲ್ಲಾ ಹುಡುಗೀರ್ಗೂ ಮದುವೆ ಆಗುತ್ತೆ. ನಮ್ಮ ಹೇಮನ್ನ ಒಬ್ಬಳನ್ನು ಬಿಟ್ಟು" ವೈದೇಹಿ ನಿಟ್ಟುಸಿರುಗರೆದಾಗ ಭುಜಂಗ ಮಂಕಾದ, ಆದರೂ ಹೇಳಿದ.

"ಅವಳಿಗೆ ಮದುವೆ ಆಗ್ದೇ ಇರುತ್ತಾ ಅತ್ತೆ? ಅವಳಿಗೆ ತಕ್ಕಂತಹ ಡಾಕ್ಟರು ವರನೇ ಬೇಕು...ಅವಳಿಗಿಂತ ಹೆಚ್ಚು ಓದಿದವನಾಗಿರ್ಬೇಕು..?"

"ಅಂಥೋನು ನಮ್ಮ ಪೈಕಿ ಯಾರಿದಾರೆ ಹೇಳು..? ಅವಳೇನಾದ್ರು ಪ್ರೀತಿ ಗೀತಿ ಅಂತ ಮೆರೆದರೆ, ಮನೆಗೇ ಸೇರ್ಸಲ್ಲ. ಒದ್ದು ಆಚೆ ಹಾಕ್ತೀನಿ.."

"ಹೀಗೆಲ್ಲಾ ನೀವು ಆಡಿದ್ರೆ, ಅವಳು ಹಾಗೇ ಉಳಿದು ಬಿಡ್ತಾಳೇ ಅಷ್ಟೇ..."

"ನಿನ್ಕೈಲಿ ಏನಾದ್ರೂ ಹೇಳಿದಾಳಾ?" ಅನುಮಾನದ ಓರೆ ನೋಟವನ್ನು ಬೀರಿದಳು.

"ಇಲ್ಲಪ್ಪಾ. ಅವಳ ಓದು ಮುಗೀ ಬೇಡ್ವೆ? ಅಲ್ದೇ ನಂಗ್ಯಾಕೆ ಹೇಳ್ತಾಳೆ?"

"ಅದೆಂಥಾ ಓದೋ? ಈ ಜನ್ಮದಲ್ಲಿ ಮುಗಿಯುವ ಹಾಗೆ ಕಾಣ್ತಿಲ್ಲ. ಅವಳ ಓರಗೆಯ ಹುಡುಗೀರ್ಗೆಲ್ಲಾ ಮದುವೆಯಾಗಿ, ತಾಯಿಯಾಗುವ ಸಂಭ್ರಮದಲ್ಲಿದ್ದಾರೆ.. ಪಲ್ಲವಿಯೂ ಗರ್ಭಿಣಿಯಂತೆ. ಸಾವಿತ್ರಿ ಹೇಳಿದ್ಲು, ಪಲ್ಲವಿ ಅದೃಷ್ಟವಂತೆ. ನಮ್ಮ ಹೇಮಂಗೆ, ನಿನ್ನ ಮಗುವನ್ನು ಹಡೆಯುವ ಅದೃಷ್ಟವಿಲ್ಲ. ನಾನು ಅಜ್ಜಿಯಾಗುವ ಯೋಗವಿಲ್ಲ." ನಿಟ್ಟುಸಿರನ್ನು ಬಿಟ್ಟಳು.

"ನನ್ನ ಮಗುವಿಗೂ ನೀವು ಅಜ್ಜಿತಾನೆ?.. ಚಿದಾನಂದನ ಮಗುವಿಗೂ ಅಜ್ಜಿ ನೀವೇ...ಎರಡು ಮಕ್ಕಳೂ ಒಟ್ಟಿಗೆ ಹುಟ್ಟುತ್ವೆ. ನೀವು ಯಾರಿಗೆ ಬಾಣಂತನ ಮಾಡ್ತೀರಿ?"

"ಏನೋ ನೀನು ಹೇಳ್ತಿರೋದು?.. ಪಲ್ಲವಿ ಗರ್ಭಿಣಿ ಸರಿ. ಶ್ವೇತಂಗೆ ಇನ್ನು ಮದುವೇನೇ ಆಗಿಲ್ಲ" ಭುಜಂಗ ತುಟಿಯನ್ನು ಕಚ್ಚಿಕೊಂಡ. ಚೇತರಿಸಿಕೊಂಡು ನುಡಿದ.

"ಸುಮ್ಮನೇ ತಮಾಷೆ ಮಾಡ್ದೆ ಅತ್ತೆ...ಮದುವೆಗೆ ಹೇಮಾನೂ ಬರ್ತಾಳೆ. ಅವಳನ್ನು ಕೂರಿಸ್ಕೊಂಡು ಕೇಳಿ.. ಅವಳೂ ಯಾರನ್ನಾದ್ರೂ ಇಷ್ಟ ಪಟ್ಟಿದಾಳಾ ಅಂತ ಕೇಳಿ.."

"ಅವಳು ಹಾಗೇನಾದ್ರೂ ಮಾಡಿದ್ರೆ ಕಾಲು ಮುರಿದು ಮನೇಲಿ ಕೂರಿಸ್ಕೊಳ್ತೀನಿ. ಮರ್ಯಾದೆ ಬೇಡ್ವಾ ನಮಗೆ?" ಹೆಣ್ಣು ಮಕ್ಕಳು, ಘನತೆ, ಗೌರವದಿಂದ ಬಾಳ್ಬೇಕು."

"ಇದರಲ್ಲಿ ಮರ್ಯಾದೆ ಹೋಗೋ ಪ್ರಶ್ನೆ ಎಲ್ಲಿ? ನೀವು ಸಂತೋಷವಾಗಿ ಒಪ್ಪಿಗೆ ಕೊಡ್ಬೇಕು..ಪ್ರೀತಿಸಿದ್ರೆ ಘನತೆ ಗೌರವಕ್ಕೆ ಏನೂ ಕುಂದು ಬರಲ್ಲ, ಒಪ್ಕೊಂಡ್ಬಿಡಿ."

"ನಾನು ಖಂಡಿತಾ ಕೊಡುಲ್ಲ, ಅವಳು ಹಾಗೇ ಇದ್ದರೂ ಚಿಂತೆ ಇಲ್ಲ"

"ಹೀಗಾಡಿದ್ರೆ ಹೇಗೆ ಅತ್ತೆ?.. ನಿಮ್ಮ ವಂಶ ಬೆಳೆಯ ಬೇಡ್ವೆ?.."

"ನೀನು ಅವಳನ್ನು ಮದುವೆಯಾಗಿದ್ದಿದ್ರೆ, ವಂಶ ಬೆಳೀಲಿ ಅನ್ನೋ ಆಸೆ ಇತ್ತು. ಈಗ ಯಾವ ಆಸೆಯೂ ಇಲ್ಲ ಬಿಡು. ಅವಳೊಂದು ಥರ ಹೊಟ್ಟೆ ಉರಿಸ್ತಾಳೆ. ನೀನೊಂದು ಥರ ಬೆಂಕಿ ಹಚ್ತೀಯ.." ವೈದೇಹಿ ಸೆರಗಿನಲ್ಲಿ ಮುಖ ಒರೆಸಿಕೊಳ್ಳುತ್ತಾ ಮನೆಯೊಳಕ್ಕೆ ನಡೆದಳು. ಭುಜಂಗ ಅಲ್ಲೇ ಜಗುಲಿಯ ಮೇಲೆ ಕುಳಿತ. ಒಳಗಿನಿಂದ ಪಲ್ಲವಿ ಬಂದು ಅವನ ಪಕ್ಕದಲ್ಲಿ ಕುಳಿತಳು.

"ಹೇಗಿದೀಯ ಪಲ್ಲವಿ!..ಆಯಾಸ ಕಡಿಮೆ ಆಯ್ತಾ?".. ಏನಾದ್ರೂ ಬೇಕಿತ್ತಾ?"

"ಹುಂ. ಪರವಾಗಿಲ್ಲ, ಸ್ವಲ್ಪ ನಿದ್ದೆಯೂ ಬಂದಿತ್ತು. ಅತ್ತೆ ಅಳ್ತಾ ಇದ್ರಲ್ಲ ಯಾಕೆ?"

"ಅವರದ್ದು ಇದ್ದದ್ದೇ. ಸದಾ ಹೇಮನ ಚಿಂತೆ. ಏನೇನೋ ಆಡ್ತಾರೆ. ಅದನ್ನೆಲ್ಲ ಕೇಳಿಸ್ಕೊಳ್ಳೇ ಬೇಡ."

"ಅವರಿಗೆ ಈಗಲೂ ನಿಮ್ಮ ಮೇಲೆ ಅಸಮಾಧಾನಾನಾ?"

"ಸ್ವಲ್ಪ ಇರಬಹುದು. ಆದರೆ ಅದಕ್ಕಿಂತ ಹೆಚ್ಚು ಅವರ ಮಗಳ ಮೇಲೇ ಕೋಪ. ಅವಳು ಫಾರಿನ್ನಿಗೆ ಹೋಗ್ತೀನಿ ಅಂತಂದ್ರೆ, ಗಿರೀಶನ್ನ ಮದುವೆಯಾಗ್ತೀನಿ ಅಂತಂದ್ರೆ ಮತ್ತೆ ಒಂದು ರಂಪ."

“ತಿಳಿಸ್ದೇ ಮದುವೆ ಆದ್ರೇನು ಮಾಡ್ತಾರೆ?”

“ಈಗ ಹಾಗೇ ಮಾಡ್ಬೇಕು.. ಫಾರಿನ್ನಿಗೆ ಹೋಗುಕ್ಕೆ ಹಣ ಬೇಕಂತೆ. ಅವಳಿಗೆ ಸಾಲ ಎಲ್ಲಿಯೂ ಸಿಕ್ಕಿಲ್ಲ, ಮನೆ, ಜಮೀನನ್ನ ಒತ್ತೆ ಇಡುಕ್ಕೆ ಅತ್ತೆ ಮಾವನ ಪರ್ಮಿಷನ್ ಬೇಕು. ನನಗೂ ಅಷ್ಟೊಂದು ಸಾಲ ಎಲ್ಲಿ ಸಿಗುತ್ತೆ!.. ಅದನ್ನೇ ಯೋಚಿಸ್ತಿದ್ದೆ. ಅವಳು ನನ್ನನ್ನ ನಂಬಿದಾಳೆ.”

“ನೀನ್ಯಾಕೆ ಸಾಲ ಮಾಡ್ಬೇಕು!.. ನಾನು ಹಣಾನ ಕೊಡ್ತೀನಿ.. ಎಷ್ಟು ಬೇಕಂತೆ?”

“ನೀನಾ?..ನೀನೆಲ್ಲಿಂದ ತರ್ತೀಯ?..ಲಕ್ಷಗಟ್ಟಳೆ ಬೇಕಾಗುತ್ತಂತೆ..”

“ನನ್ನ ಹತ್ರ ಬ್ಯಾಂಕ್ನಲ್ಲಿ ಮೂವತ್ತು ಲಕ್ಷ ರೂಪಾಯಿಗಳಿವೆಯಲ್ಲ, ಅದರಲ್ಲಿ ಅವಳಿಗೆ ಎಷ್ಟು ಬೇಕೋ ಅಷ್ಟನ್ನು ಕೊಡಿ.. ಅವಳಿಗೆ ಅನುಕೂಲವಾಗ್ಲೀ.”

“ಮತ್ತೇ! ನಿನ್ನ ಹಣ ನಿನಗೆ ಸಿಗುವುದು ನಿಧಾನವಾಗುತ್ತೆ..ಪರವಾಗಿಲ್ವಾ?”

“ಅವಳು ವಾಪಸ್ಸು ಕೊಡದಿದ್ರೂ ಪರವಾಗಿಲ್ಲ, ಅವಳು ನನಗೆ ಮಾಡಿರುವ ಉಪಕಾರಕ್ಕೆ ಎಷ್ಟು ಬೆಲೆ ಕಟ್ಟಿದರೂ ಸಾಲದು..” ವಿಚಿತ್ರ ಧ್ವನಿಯನ್ನು ಮಾಡಿದಳು.

“ಏನು ಹೇಳ್ತಿದೀಯ ನೀನು! ಯಾವ ಬೆಲೆ?..” ಅವಳ ಮಾತು ಸರಿ ಎನಿಸಿರಲಿಲ್ಲ.

“ನಿಮ್ಮನ್ನ ನಂಗೆ ಬಿಟ್ಟುಕೊಟ್ಟಳು..ನಾನು ತಾಯಿಯಾಗುವಂತೆ ಮಾಡಿದ್ಲು.”

“ಅವಳೇನು ಮಾಡಿದ್ದು!.. ನನ್ನ ಪಾತ್ರ ಏನೂ ಇಲ್ವಾ!..” ಅವಳ ಕೆನ್ನೆಗಳನ್ನು ಹಿಂಡುತ್ತಾ ಕೇಳಿದ. ಅವಳು ನಾಚಿಕೆಯಿಂದ ಕೆಂಪಾಗಿದ್ದಳು. ಬಿರಿದ ತುಟಿಗಳ ಮೇಲೆ ಕೈಯಾಡಿಸಿದ.

“ಅದು ಹಾಗಲ್ಲ ಭುಜಂಗ್.. ನನ್ನ ಆತಂಕ ಹೇಗಿತ್ತು ಅಂತ ನಿಮಗೇ ಗೊತ್ತಲ್ಲ.”

“ಇದನ್ನೇನು! ಬೇರೆ ಯಾವುದೇ ಡಾಕ್ಟರಾಗಿದ್ರೂ ಅವರ ಕರ್ತವ್ಯ ಅಂತ ಮಾಡ್ತಿದ್ರು.. ಹೇಮನ್ನ ಅಷ್ಟು ಹೊಗಳ್ಬೇಡ..”

“ಇದು ಹೊಗಳಿಕೆ ಅಲ್ಲ, ಇದರಲ್ಲಿ ನನ್ನ ಸ್ವಾರ್ಥವೂ ಇದೆ...”

“ಸ್ವಾರ್ಥಾನಾ? ಅದೇನು?” ಪಲ್ಲವಿಯ ಋಣ ಚುಕ್ತಾ ಮಾಡುವ ಮಾತು ಹಿಡಿಸಲಿಲ್ಲ.

“ಸಮಯ ಬಂದಾಗ ಹೇಳ್ತೀನಿ. ಹೇಮಂಗೆ ಎಷ್ಟು ಬೇಕಾಗಬಹುದು ಅಂತ ಕೇಳಿ.. ಶ್ವೇತಂಗೆ, ಚಿದಾನಂದನಿಗೆ, ಅವಳ ಅಣ್ಣನಿಗೆ ಒಂದೊಂದು ಲಕ್ಷ ರೂಪಾಯಿಗಳನ್ನು ಕೊಡೋಣ ಅಂತಿದೀನಿ..”

“ಅವರಿಗೆಲ್ಲಾ ಹಣ ಈಗ್ಯಾಕೆ? ಯಾರಿಗೂ ನೀನು ಕೊಡಬೇಕಾಗಿಲ್ಲ ಸುಮ್ನಿರು..”

“ಶ್ವೇತಾ, ಬಾಯಿ ಬಿಟ್ಟು ಕೇಳಿದಳು. ಅವಳೂ ಅವಳ ಅಣ್ಣ ನನಗೆ ಸಹಾಯ ಮಾಡಿದಾರೆ. ಚಿದಾನಂದ ಶ್ವೇತಾಳನ್ನು ಮದುವೆಯಾಗಿ ನಮಗೆ ಉಪಕಾರ ಮಾಡ್ತಿದಾನೆ. ಅದಕ್ಕೇ..”

“ಉಪಕಾರ ಏನ್ಬಂತು?..ಅದು ಅನಾಚಾರ.. ಅದನ್ನು ಸರಿಪಡಿಸ್ತಿದೀನಿ ಅಷ್ಟೇ. ಉಡುಗೊರೆ ಏನೂ ಬೇಡ.. ಯಾರಿಗೂ ಏನೂ ಬೇಡ.. ಹಣ ಹಾಗೇ ಇರಲಿ. ಖರ್ಚು ಮಾಡ್ಬೇಡ.”

“ಇಲ್ಲ ಭುಜಂಗ್, ಶ್ವೇತಾ ಪದೇ ಪದೇ ಪೀಡಿಸ್ತಾಳೆ. ಇನ್ನು ಮುಂದೆ ನನ್ನ ಕಣ್ಣೆದುರಿಗೇ

ಇರ್ತಾಳೆ. ನಾನು ಅನುಕೂಲವಾಗಿರುವುದನ್ನು ಕಂಡು ಅವಳಿಗೆ ಅಸೂಯೆ ಆಗುತ್ತೆ. ಅದು ನನಗೆ ಹಿಂಸೆ ಆಗುತ್ತೆ...ಅವಳ ಕಣ್ಣುರಿ ಕಡಿಮೆ ಆದ್ರೆ ನಮಗೇ ಒಳ್ಳೇದು.."

"ಏನೇನೋ ಯೋಚಿಸುತ್ತೇ ಈ ಮರಿ.. ಅವರಿಗೂ ಅನುಕೂಲ ಮಾಡಿ ಕೊಡೋಣ.. ನಿನಗೆ ಸರಿ ಹೋಗುಲ್ಲ ಅಂತಂದ್ರೆ, ಬೆಂಗಳೂರಿನಲ್ಲೇ ವ್ಯವಸ್ಥೆ ಮಾಡಿಕೊಟ್ಟರಾಯ್ತು.. ನಾನು ಚಿದಾನಂದನ ಹತ್ರ ಮಾತಾಡ್ತೀನಿ..ನೀನು ತಲೆ ಕೆಡಿಸ್ಕೋಬೇಡ.."

"ಬೇಡ ಭುಜಂಗ್, ಅವನು ನಿಮಗೆ ಸಹಾಯಕನಾಗಿ ಇಲ್ಲೇ ಇರಲಿ. ಇನ್ನು ಮುಂದೆ ನೀವು ಸ್ವಲ್ಪ ಕೆಲಸಗಳನ್ನು ಕಡಿಮೆ ಮಾಡ್ಕೊಳ್ಳಿ, ನನ್ನ ಜೊತೆ ನೀವು ಹೆಚ್ಚು ಹೆಚ್ಚು ಇರ್ಬೇಕು. ಇಲ್ದಿದ್ರೆ ನನ್ನ ಮಗೂಗೆ ಕೋಪ ಬರುತ್ತೆ."

"ಹೌದೇನೋ ಪುಟ್ಟಾ.. ಈ ಬಡಪಾಯಿ ಅಪ್ಪನ ಮೇಲೆ ಕೋಪ ಮಾಡ್ಕೋತೀಯಾ" ಎನ್ನುತ್ತಾ ಅವಳ ಒಡಲ ಮೇಲೆ ಕೈಯಾಡಿಸಿದ. ಪಲ್ಲವಿ ಕಣ್ಣುಗಳನ್ನು ಮುಚ್ಚಿ ಆ ರಸಮಯ ಗಳಿಗೆಯನ್ನು ಆನಂದದಿಂದ ಅನುಭವಿಸಿದಳು. ಒಳಗಿನಿಂದ ವೈದೇಹಿಯ ಧ್ವನಿ ಕರ್ಕಶವಾಗಿ ಕೇಳಿದೊಡನೆ, ಭುಜಂಗ ಕೈ ತೆಗೆದು ಅವಳಿಂದ ದೂರ ಸರಿದ. ವೈದೇಹಿ ಹೊರಕ್ಕೆ ಬಂದಳು.

"ಏನಮ್ಮ ಪಲ್ಲವೀ ಹೇಗಿದೀಯ.. ನಿನಗೇನಾದ್ರೂ ಸವಿ ಸವಿಯಾಗಿ ತಿನ್ಬೇಕು ಅಂತ ಆಸೆ ಇದ್ರೆ ಹೇಳು.. ನಾನು ಮಾಡ್ಕೊಡ್ತೀನಿ. ಮಂದಾಕಿನಿ ಮಾಡಿಕೊಡ್ತಾಳೆ.."

"ಏನೂ ಬೇಡ ಅತ್ತೇ...ಅಮ್ಮ ಮಾಡಿಕೊಡ್ತಾಳೆ" ಭುಜಂಗನೆಂದ.

"ನೀನು ಸುಮ್ನಿರು ಭುಜೀ.. ಗಂಡಸಿಗ್ಯಾಕೆ ಗೌರಿ ದುಃಖ ಅಂತಾರಲ್ಲ ಹಾಗೆ..ಹೆಂಗಸಿಗೆ ಬಯಕೆ ಅಂತ ಅಂದ್ರೇನು ಗೊತ್ತು. ಅವಳು ಕೊಟ್ರೆ ನೀನೂ ತಿನ್ನುವಂತೆ. ಮುಂಚೆಯೆಲ್ಲಾ ಗಾಳೀಲಿ ವಾಸನೆ ಬಂದ ಕೂಡ್ಲೆ ಓಡಿ ಬರ್ತಿದ್ದೆ, ಈಗೇನು ಜಂಭ?" ಆಣಕಿಸಿದಳು.

"ಜಂಭ ಯಾಕೆ ಅತ್ತೇ!.. ನಂಗೆ ಜಂಭ ಅಂದ್ರೇನು ಅಂತ್ಲೇ ಗೊತ್ತಿಲ್ಲ" ನಕ್ಕ.

"ಅಪ್ಪ ಆಗ್ತಿದೀಯ..ಕೋಡು! ಕೋಡುಗಳು ಮೂಡಿವೆ" ಅವಳ ನಗು ಸಪ್ಪಗಿತ್ತು.

* * *

ಚಿದಾನಂದ ಶ್ವೇತಾಳ ಮದುವೆ ಸರಳವಾಗಿ ನೆರವೇರಿತು. ಶ್ವೇತಾಳ ಕಡೆಯಿಂದ ಅವಳ ಅಣ್ಣ ಸೋದರಮಾವನ ಮನೆಯವರು, ಹಾಗೂ ಅವಳ ತಾಯಿ ಮಾತ್ರ ಬಂದಿದ್ದರು ಚಿದಾನಂದನ ಕಡೆ, ವೈದೇಹಿ ಹಾಗೂ ಭುಜಂಗನ ಪರಿವಾರದವರು ಮಾತ್ರ. ಹೇಮಾ ಬಂದಿದ್ರೆ ಚೆನ್ನಾಗಿತ್ತೆಂದುಕೊಂಡ ಭುಜಂಗ. ನೆನೆದವರ ಮನದಲ್ಲಿ ಎಂಬಂತೆ, ಮದುವೆ ಕಾರ್ಯ ಕಲಾಪ ನಡೆಯುತ್ತಿರುವಾಗ ಹೇಮಾ ಬಂದಿದ್ದಳು.

"ಈಗ ಬರ್ತಾ ಇದೀಯಲ್ಲ, ನಾಳೆ ಬಂದಿದ್ರೂ ಆಗಿತ್ತು." ಭುಜಂಗ ರೇಗಿಸಿದ.

"ನಾನು ಇವತ್ತು ಬೆಳಿಗ್ಗೆ ಡೆಲ್ಲಿಯಿಂದ ವಾಪಸ್ಸು ಬಂದೆ. ಬರ್ತಿದ್ದ ಹಾಗೇ, ಟ್ಯಾಕ್ಸಿ ಮಾಡ್ಕೊಂಡು ಬಂದ್ಬಿಟ್ಟೆ.. ನಾನು ನಿನ್ನ ಹತ್ರ ಸ್ವಲ್ಪ ಮಾತಾಡ್ಬೇಕಾಗಿತ್ತು." ಎಂದಳು ಪಿಸುದನಿಯಲ್ಲಿ,

ಭುಜಂಗ ಅವಳನ್ನೇ ದಿಟ್ಟಿಸಿದ. ಹೇಮಾ ತಂದೆಯನ್ನು ಕಂಡು ಮಾತನಾಡಿಸುತ್ತಿದ್ದಾಗ, ವೈದೇಹಿ ಮಗಳ ಬಳಿಗೆ ಬಂದಳು.

"ಬಿಡುವು ಸಿಕ್ತಾ ಅಪ್ಪ ಅಮ್ಮನ್ನ ನೋಡೋಕೆ. ನಿನ್ನನ್ನ ಓದೋಕೆ ಕಳಿಸಿ ನಾವು ತಪ್ಪು ಮಾಡಿದ್ವು." ಮಗಳನ್ನು ತನ್ನ ಕಡೆಗೆ ತಿರುಗಿಸಿಕೊಂಡು ಹೇಳಿದಳು.

"ಬಂದಾಗೆಲ್ಲಾ ಏನಾದ್ರೂ ಆಕ್ಷೇಪಣೆ ಮಾಡ್ತೀಯಲ್ಲಮ್ಮ.. ಇನ್ಮೇಲೆ ಬರೋದೇ ಇಲ್ಲ ಬಿಡು" ಹೇಮಾ ಮೂತಿ ಚೂಪು ಮಾಡಿ ನುಡಿದಳು.

"ಹಾಗೇ ಮಾಡು. ನಿನ್ನ ಕಂಡ ಕೂಡ್ಲೆ ನನ್ನ ಮನಸ್ಸು ಕುದ್ದು ಹೋಗುತ್ತೆ. ಪಲ್ಲವಿ, ಶ್ವೇತಾ ಮದುವೆ ಮಾಡ್ಕೊಂಡು ನಗು ನಗ್ತಾ ಇದಾರೆ. ನಿನಗೂ ಮದುವೆ ಮಾಡಿ, ಮೊಮ್ಮಕ್ಕಳನ್ನು ಆಡಿಸುವ ಯೋಗ ಯಾವಾಗ ಬರುತ್ತೋ...ಬರೋದೇ ಇಲ್ವೋ..?"

"ಸದಾ ಮದುವೆ, ಮೊಮ್ಮಕ್ಕಳು, ಇವಿಷ್ಟೇನೇ ನಿನ್ನ ಪ್ರಪಂಚ? ಪಲ್ಲವಿಗೆ, ಶ್ವೇತಂಗೆ, ಇನ್ನು ಏಳೆಂಟು ತಿಂಗಳಲ್ಲಿ ಮಕ್ಕಳಾಗುತ್ತವೆ.. ಅವುಗಳೇ ನಿನ್ನ ಮೊಮ್ಮಕ್ಕಳು. ಅವನ್ನು ಎತ್ತಿ ಬೇಕಾದಷ್ಟು ಆಡಿಸು. ನನಗೆ ಇದಕ್ಕೆಲ್ಲ ಬಿಡುವಿಲ್ಲ"

"ಹಾಗೆಲ್ಲಾ ಮಾತಾಡ್ಬಾರ್ದು ಹೇಮಾ..ತಾಯಿಯಾಗೋದಕ್ಕೆ ಯೋಗ ಬೇಕು. ಬಿಡುವಲ್ಲ, ನನಗೇ ಇನ್ನೊಂದೆರಡು ಮಕ್ಕಳು ಹುಟ್ಟಿದ್ದರೂ ನಾನು ಸಂತೋಷವಾಗಿ ಸಾಕ್ತಿದ್ದೆ"

"ಹೌದು.. ನಾನು ಒಬ್ಬಳೇ ಮಗಳು.. ಯಾಕೆ ಹೀಗೆ ಮಾಡ್ದೆ?"

"ನಾನೇನೇ ಮಾಡ್ದೆ? ದೇವರು ಕೊಡ್ಲಿಲ್ಲ.. ಅಷ್ಟೇ.."

"ಹೌದೇನಪ್ಪಾ!" ತಂದೆಯ ಕಡೆ ನೋಡಿದಳು.

"ಥೂ ನಾಚಿಕೆ ಇಲ್ಲದೋಳೆ. ಅವರನ್ನೇನು ಕೇಳ್ತೀಯ!.. ಇವರಿಗೆ ಈ ಉಬ್ಬಸದ ರೋಗ.. ನೀನು ಹುಟ್ಟಿದ್ದೇ ಹರ ಸಾಹಸ.. ಈ ಮಾತುಗಳು ಬೇಡ.. ಪಲ್ಲವಿಗೆ ಏನೋ ಆಪರೇಷನ್ ಮಾಡಿಸಿದ್ಯಂತೆ. ಏನಾಗಿತ್ತು ಅವಳಿಗೆ?.."

"ಗರ್ಭಕೋಶದಲ್ಲಿ ಏನೋ ತೊಂದರೆ ಇತ್ತು. ಈಗ ಸರಿಯಾಗಿದಾಳೆ...ಅವಳಿಗೂ ಶ್ವೇತಾಳಿಗೂ ಒಂದು ತಿಂಗಳ ಅಂತರದಲ್ಲಿ ಆರೋಗ್ಯವಂತ ಮಕ್ಕಳು ಹುಟ್ಟುತ್ವೆ. ನೋಡ್ತಿರು."

"ಅದ್ಹೇಗೆ ಹೇಳ್ತೀಯ...ಚಿದಾನಂದನನ್ನ ಶ್ವೇತಾ ಅದೇನು ಅಂತ ಮದುವೆಯಾಗ್ತಿದಾಳೋ? ಇವನಿಗೆ ಏನಿದೆ? ರೂಪವೆ? ವಿದ್ಯೆಯೆ?...ಶ್ರೀಮಂತಿಕೆಯೆ?"

"ಅದನ್ನೆಲ್ಲಾ ನೋಡ್ತಾ ಕೂತಿರುಕ್ಕೆ ಸಮಯವಿಲ್ಲ, ಅವಳೀಗ ಎರಡೂವರೆ ತಿಂಗಳ ಗರ್ಭಿಣಿ.. ಚೆಕಪ್‌ಗೆ ನನ್ನ ಹತ್ರವೇ ಬಂದಿದ್ಲು."

"ಹೌದೇನೇ!..ಅಂಥೋಳನ್ನ ಈ ಚಿದಾನಂದ ಯಾಕೆ ಮದುವೆಯಾದ್ನೇ.. ಈಗಲೇ ಮಂದಾಕಿನಿಗೆ ಹೇಳ್ತೀನಿ..." ನಂಗೆ ಏನೋ ಅನುಮಾನ ಆಗ್ಲೇ ಬಂದಿತ್ತು..ರಾಗ ಎಳೆದಳು.

"ಯಾರ್ಗೂ ಹೇಳ್ಬೇಡ..ಚಿದಾನಂದನೇ ಅವಳನ್ನು ಕೆಡಿಸಿದಾನೆ.."

"ಹಾಗಂತ ನಿಂಗ್ಯಾರೇ ಹೇಳಿದ್ದು! ಯಾರ ಮಗುವೋ ಎಂಥಾದ್ದೋ.."

"ಅವಳೇ ಹೇಳಿದ್ದು.. ಚೆಕಪ್‌ಗೆ ಅಂತ ಬಂದಿದ್ದಾಗ, ಮದುವೆಯಾಗುಲ್ಲ..ಹಾಗೇ ತಾಯಿಯಾಗಿ, ಮಗುವನ್ನು ಸಾಕ್ತೀನಿ ಅಂತ ಏನೇನೋ ಮಾತಾಡಿದ್ಲು. ಆಮೇಲೆ, ಪಲ್ಲವಿ ಭುಜಂಗ, ಚಿದಾನಂದ ಎಲ್ಲರೂ ಅವಳನ್ನು ಬಲವಂತವಾಗಿ ಒಪ್ಪಿಸಿದಾರೆ. ಇಲ್ದಿದ್ರೆ ಈ ಮದುವೆ ನಡೆಯುತ್ತಿರಲಿಲ್ಲ. ಚಿದಾನಂದ, ಅವಳೂ ಒಟ್ಟಿಗಿದ್ರಂತಮ್ಮ.."

"ಇದೆಂಥದೇ ಹೇಮಾ! ಚಿದಾನಂದನಿಗೆ ಏನು ಬಂತೆ ಕೇಡ್ಗಾಲ!..ನೋಡೋಕೆ ಗುಗ್ಗು ಇದ್ದ ಹಾಗೆ ಇದಾನೆ.. ಇವಳ ಹತ್ರ ಏನು ಸರಸ? ವೈಯಾರವಾಗಿ ಇವನ ಎದುರಿಗೆ ಮೈ ಕುಣಿಸಿ ಓಡಾಡಿದ್ಲು. ಇವನು ಮಾರು ಹೋಗಿ ಬಿಟ್ಟ. ಭುಜಂಗನೂ ನನಗೆ ಈ ವಿಷಯಾನ ಹೇಳ್ಲೇ ಇಲ್ಲ. ಮದುವೆ ಆದ್ಮೇಲೆ ಅವನು ಬಹಳ ಬದಲಾಗಿ ಹೋಗಿದಾನೆ. ನನ್ನ ಬಗ್ಗೆ ಮೊದಲಿನ ಪ್ರೀತೀನೇ ಇಲ್ಲ. ಎಲ್ಲವನ್ನೂ ಮುಚ್ಚಿಡ್ತಾನೆ.."

"ಹಾಗೆಲ್ಲ ಏನಿಲ್ಲಮ್ಮ. ಅವನೇನೂ ಬದಲಾಗಿಲ್ಲ. ಮೊದಲಿನ ಹಾಗೆಯೇ ಮಾತಾಡ್ತಾನೆ. ಆಗಿನ ಹಾಗೇ ಸ್ನೇಹವಾಗಿದಾನೆ."

"ಸ್ವಲ್ಪ ಜೋಪಾನವಾಗಿರೇ ಹೇಮಾ.. ಗಂಡಸಿನ ಬುದ್ಧಿ ಹೀಗೆ ಅಂತ ಹೇಳುಕ್ಕೆ ಬರುಲ್ಲ.. ಏನಾದ್ರೂ ಅಚಾತುರ್ಯ ನಡೆದೀತು..."

"ಏನಮ್ಮ ಹೀಗೆಲ್ಲಾ ಮಾತಾಡ್ತೀಯ!...ಭುಜಂಗನ ಮೇಲೆ ನಿಂಗೆ ಅನುಮಾನಾನಾ? ಒಂದು ದಿನವೂ ಕೆಟ್ಟ ಭಾವನೆಯಿಂದ ನನ್ನನ್ನು ನೋಡಿಲ್ಲ.. ನಾವಿಬ್ಬರೂ ಒಟ್ಟಿಗೇ ಬೆಳೆದ್ವು.."

"ಚಿದಾನಂದನಂಥೋನೇ ಮಿಕನಾದ..ಯಾರನ್ನು ಹೇಗೆ ನಂಬೋದು?...ಪಲ್ಲವಿಯ ಜೊತೆ ಮದುವೆಗೆ ಮುಂಚೆ ಏನೇನೂ ನಡೆಸಿದ್ದನೋ.. ನಾವುಗಳೂ ಪೆದ್ದರು.. ಅಲ್ಲಿ ಇಲ್ಲಿ ಸುತ್ತಾಡಿಸ್ತಿದ್ದ.. ಅವಳೂ ಅಷ್ಟೇ. ಬಾವಿಯ ಕಟ್ಟೆ ಬಳಿ ಮಂಕಾಗಿ ಕೂತಿರುತಿದ್ಲು, ಭುಜೀನ ಕಂಡ ಕೂಡ್ಲೇ ಚಂಗ್ ಅಂತ ಎದ್ದು ಹೊರಟು ಬಿಡ್ತಿದ್ಲು. ಈಗ ಎಲ್ಲಾ ಗೊತ್ತಾಗ್ತಿದೆ.."

"ಅಮ್ಮಾ ಸಾಕಮ್ಮ ಇಷ್ಟು ಸಿಕ್ಕರೆ ಅಷ್ಟು ಮಾತಾಡ್ತೀಯ.. ನೀನು ಹೀಗೆಲ್ಲಾ ಮಾತಾಡೋದು ನಂಗೆ ಇಷ್ಟ ಆಗುಲ್ಲ.." ಅವಳು ಎತ್ತರದ ದನಿಯಲ್ಲಿ ಹೇಳಿದಳು.

"ಏನು ಇಷ್ಟ ಆಗುಲ್ವೆ?.. ಅತ್ತೆ ಮತ್ತೆ ಅದೇ ಹಳೇ ಗಂಟನ್ನು ಬಿಚ್ಚಿದಾರಾ?..ಎನ್ನುತ್ತಾ ಭುಜಂಗ ಮನೆಯೊಳಕ್ಕೆ ಬಂದ. ಇಬ್ಬರೂ ಪೆಚ್ಚಾದರು. "ಎಲೆ ಹಾಕಿದೆ, ಇಬ್ಬರೂ ಊಟಕ್ಕೆ ಬನ್ನಿ.. ಇವತ್ತು ಮಾವಯ್ಯನ್ನು ನಮ್ಮ ಮನೆಗೆ ಕರ್‍ಕೊಂಡು ಹೋಗ್ತೀನಿ.." ಭುಜಂಗ ರೂಮಿನ ಕಡೆಗೆ ಧಾವಿಸಿದ.

"ಬೇಡ ಕಣೋ ಭುಜೀ..ಅವರಿಗೆ ಗಂಜಿ ಮಾಡಿಕೊಟ್ಟಿದೀನಿ. ಆಮೇಲೆ ಸಾರು ಅನ್ನ ಕಲೆಸಿ ಕೊಡ್ತೀನಿ.. ನಡಿಯೇ ಹೇಮಾ.. ಪಾಪ ಇವನೇ ಬಂದು ಕರೀತಿವಾನೆ.." ಹೇಮಾ ತಾಯಿಯನ್ನೇ ವಿಸ್ಮಯದಿಂದ ನೋಡಿದಳು. ಅವಳ ಬಗ್ಗೆ ಅಯ್ಯೋ ಅಂತ ಅನ್ನಿಸದೇ ಇರಲಿಲ್ಲ.

* * *

"ಪಲ್ಲವೀ, ನಾನೂ ಹೇಮಾ ತೋಟದಲ್ಲಿ ತಿರುಗಾಡ್ಕೊಂಡು ಬರ್ತೀನಿ. ಅವಳೇನೋ ಮುಖ್ಯವಾದ ವಿಷಯವನ್ನು ಹೇಳ್ಬೇಕಂತೆ," ಊಟದ ನಂತರ ಭುಜಂಗ ನುಡಿದ. ಪಲ್ಲವಿಯ ಮುಖ ಬೆಳ್ಳಗಾಯಿತು.

"ಏನಂತೆ? ನನ್ನ ವಿಷಯಾನಾ? ನಾನೂ ಬರ್ತೀನಿ.."

"ಇರಲಾರದು.. ಇಷ್ಟ್ಯಾಕೆ ಗಾಬರಿಯಾಗ್ತೀಯ? ನೀನು ರೆಸ್ಟ್ ತಗೋ.. ಬೇಗ ಬಂದು ಬಿಡ್ತೀವಿ. ಇನ್ನು ಬೇಕಾದಷ್ಟು ಕೆಲಸಗಳಿವೆ.." ಭುಜಂಗ ಹೊರಟು ನಿಂತಾಗ, ಪಲ್ಲವಿ ಅವನ ಭುಜವನ್ನು ಬಳಸಿ, ಬೆನ್ನಿಗೆ ಒರಗಿದಳು.

"ಅಂಥಾ ಸೀಕ್ರೆಟ್ಟು ವಿಷಯ ಏನು? ಇಲ್ಲೇ ಆಡಬಹುದಲ್ಲಾ, ನಂಗೆ ಇದ್ಯಾಕೋ ಹಿಡಿಸ್ತಿಲ್ಲ." ಅವನು ಅವಳನ್ನು ತನ್ನೆಡೆಗೆ ತಿರುಗಿಸಿಕೊಂಡ.

"ಇಲ್ಲ ಮನೇಲಿ ಗದ್ದಲ. ಏನೋ ಅವಳ ಸಮಸ್ಯೆ ಇರಬಹುದು. ಏನೇ ಇದ್ರೂ ಅವಳು ಮೊದಲ್ನಿಂದ ನನ್ನನ್ನೇ ಸಲಹೆ ಕೇಳ್ತಾಳೆ..."

"ಹಾಗಾದ್ರೆ ಏನು ಮಾತು ನಡೀತು ಅಂತ ನಂಗೆ ಹೇಳ್ಬೇಕು.."

"ಹೇಳೋ ಮಾತು ಆಗಿದ್ರೆ ಖಂಡಿತಾ ಹೇಳ್ತೀನಿ. ಅವಳಿಗೆ ನನ್ನನ್ನು ಬಿಟ್ಟರೆ ಬೇರೆ ಯಾರೂ ಆಪ್ತರಿಲ್ಲ, ತಾಯಿಯನ್ನು ಕೂಡಾ ಅಷ್ಟು ನಂಬುಲ್ಲ."

"ಅದೇ ನಂಗೆ ಇಷ್ಟವಿಲ್ಲ, ನೀವು ಅವಳು ಹೇಳಿದಂತೆ ಈಗ್ಲೂ ಕೇಳ್ಬೇಕಾ! ಅವಳಿಗಾದ್ರೂ ತಿಳುವಳಿಕೆ ಬೇಡ್ವಾ!"

"ಪಲ್ಲವೀ.. ನಿನ್ನ ಮಾತು ಅತಿರೇಕವಾಗಿ ಕಾಣ್ತದೆ. ಅವಳು ಇವತ್ತು ರಾತ್ರಿಯೇ ವಾಪಸ್ಸು ಹೊರಟು ಹೋಗ್ತಾಳೆ. ಅವಳು ಏನೋ ತೊಂದರೇಲಿ ಇದಾಳೆ. ನಾನು ಬಂದ್ಮೇಲೆ ನಿಂಗೆ ಎಲ್ಲಾ ಹೇಳ್ತೀನಿ. ಅವಳು ಕಾಯ್ತಾ ನಿಂತಿದಾಳೆ. ನೀನು ರೆಸ್ಟ್ ತಗೋ..." ಅವಳನ್ನು ಮುದ್ದಿಸಿ, ಅವಳ ಹೊಟ್ಟೆಯ ಮೇಲೆ ಕೈಯಾಡಿಸಿದ. ಬಾಗಿ ಪಿಸುಗುಟ್ಟಿದ. "ನಿನ್ನಮ್ಮಂಗೆ ತಿಳುವಳಿಕೆ ಹೇಳು.. ನಮ್ಮಿಬ್ಬರನ್ನು ವಿಪರೀತ ಸತಾಯಿಸ್ತಾಳೆ." ಮೆಲ್ಲನೆ ಕಚಗುಳಿ ಇಟ್ಟ, ಅವಳು ಕಿಲ ಕಿಲ ನಕ್ಕಳು. ಭುಜಂಗ ತಲೆಯಾಡಿಸಿ, ಅಲ್ಲಿಂದ ಹೊರ ನಡೆದ.

ಹದಿನೈದು ಇಪ್ಪತ್ತು ನಿಮಿಷಗಳಲ್ಲಿ ಹೇಮಾ, ಭುಜಂಗ ಹಿಂತಿರುಗಿದ್ದರು. ಹೇಮಾ ಪಲ್ಲವಿಯ ರೂಮಿನೊಳಗೆ ಬಂದಳು. ಪಲ್ಲವಿ ಎದ್ದು ಕುಳಿತಳು. ಹೇಮಾ ರೂಮಿನ ಬಾಗಿಲನ್ನು ಭದ್ರ ಪಡಿಸಿ, ಅವಳ ಬಳಿಗೆ ಬಂದಳು. "ಪಲ್ಲವಿ ಸ್ವಲ್ಪ ಮಲಕ್ಕೊಳ್ಳಿ. ನಾನು ಚೆಕಪ್ ಮಾಡ್ಬೇಕು" ಎನ್ನುತ್ತಾ ಅವಳ ಭುಜವನ್ನು ಹಿಡಿದು ಮಲಗಿಸಿದಳು. ಪಲ್ಲವಿ ಮುಜುಗರದಿಂದ ನೋಡಿದಳು. "ಹೆದರ್ಬೇಡಿ ಪಲ್ಲವಿ.. ನಮ್ಮ ರಾಜಕುಮಾರ ಸರಿಯಾಗಿ ಬೆಳೆಯಬೇಕೋ ಬೇಡ್ವೋ" ಎನ್ನುತ್ತಾ ಪರೀಕ್ಷೆಯನ್ನು ಮಾಡಿದಳು.

"ಗುಡ್ ಎಲ್ಲಾ ಸರಿಯಾಗಿದೆ".. ಎನ್ನುತ್ತಾ ಅವಳ ಹೊಟ್ಟೆಯ ಮೇಲೆ ತನ್ನ ಮುಖವನ್ನಿಟ್ಟು ಮುತ್ತಿಕ್ಕಿದಳು. ಪಲ್ಲವಿ ನಾಚಿಕೆ ಸಂಕೋಚಗಳಿಂದ ಕೆಂಪಾಗಿ ಎದ್ದು ಕೂತಳು.

"ಬೇಬಿ, ಭುಜಂಗನ ಹಾಗೇ ಹೆಲ್ತಿಯಾಗಿ, ಸುಂದರವಾಗಿರುತ್ತೆ..ನಂಗೊತ್ತು..." ಎಂದು ನುಡಿದಳು. ಪಲ್ಲವಿ ಮಾತಾಡಲಿಲ್ಲ, ಅವಳು ಹೋದರೆ ಸಾಕೆಂದೆನಿಸಿತ್ತು.

"ನನ್ನ ಸಲಹೆಗಳನ್ನೆಲ್ಲಾ ಇದುವರೆಗೂ ಫಾಲೋ ಮಾಡಿದೀರಿ.. ಹಾಗೇ ಡೆಲಿವರಿಯಾಗೋವರೆಗೂ ಚಾಚೂ ತಪ್ಪದೇ ಕೇಳ್ಬಿಡಿ, ಎಲ್ಲಾ ಒಳ್ಳೇದಾಗುತ್ತೆ" ಎಂದು ಹೇಳಿ ಪಲ್ಲವಿಯ ಭುಜವನ್ನು ತಟ್ಟಿ ಅಲ್ಲಿಂದ ಹೊರ ನಡೆದಳು. ಪಲ್ಲವಿ ಹಾಗೇ ಕುಳಿತಿದ್ದಳು. ಸ್ವಲ್ಪ ಹೊತ್ತಿನ ನಂತರ ಭುಜಂಗ ಒಳ ಬಂದ. ಬೆಪ್ಪಳಂತೆ ಕುಳಿತಿದ್ದ ಹೆಂಡತಿಯನ್ನೇ ನೋಡಿ, ಬಳಿಗೆ ಧಾವಿಸಿ ಬಂದ. ಆತಂಕದಿಂದ ಕೇಳಿದ.

"ಏನಾಯ್ತು ಪಲ್ಲವೀ..." ಹೇಮಾ ಏನಂದ್ಲು?..ಎಲ್ಲಾ ಸರಿಯಾಗಿದೆ ತಾನೇ?"

"ಹೂಂ, ಎಲ್ಲಾ ಸರಿಯಾಗಿದೆ ಅಂತಂದ್ಲು, ಆದರೆ ನನಗ್ಯಾಕೋ, ಇಷ್ಟವಾಗ್ತಿಲ್ಲ, ಬೇರೆ ಡಾಕ್ಟರ್‌ಗೆ ತೋರ್ಸೋಣ.."

"ಯಾಕೇ ಪಲ್ಲವಿ? ಹೇಮಾ ಏನಾದ್ರೂ ಅಂದ್ಲಾ?.."

"ಅವಳ್ಯಾಕೋ ಅತಿಯಾಗಿ ಆಡ್ತಾಳೆ...ಡಾಕ್ಟರು ಯಾರಾದ್ರೂ ಹೀಗೆ ಆಡ್ತಾರಾ?.. ಅವಳು ಹೊಟ್ಟೆಯ ಮೇಲೆ ತುಟಿಗಳನ್ನಿಟ್ಟು ಮುದ್ದು ಮಾಡ್ತಾಳೆ, ಥೂ ಅಸಹ್ಯ.."

ಭುಜಂಗ ಗೊಳ್ಳನೇ ನಕ್ಕ. "ಅಷ್ಟೇ ತಾನೇ.. ಅದರಲ್ಲೇನು? ಏನೋ ಮಗು ಬಗ್ಗೆ ಅಕ್ಕರೆ ಇರಬಹುದು."

"ನಂಗೆಲ್ಲಾ ಗೊತ್ತು ರೀ..ಇದು ನಿಮ್ಮ ಮಗು ಅಂತ ಹಾಗೆಲ್ಲಾ ಆಡ್ತಾಳೆ.. ನನಗೆ ಸರಿ ಹೋಗುಲ್ಲ. ಇವಳ ಸಹವಾಸವೇ ಬೇಡ..."

"ಇಷ್ಟಕ್ಕೆಲ್ಲಾ ಯಾರಾದ್ರೂ ಡಾಕ್ಟ್ರನ್ನ ಬೇಡಾಂತ ಅಂತಾರಾ?..ನಾನು ಅವಳ ಹತ್ರ ಮಾತಾಡ್ತೀನಿ. ಪಲ್ಲವಿಗೆ ಇಷ್ಟವಾಗುಲ್ಲ ಹೀಗೆಲ್ಲಾ ಆಡ್ಬೇಡ ಅಂತ ಹೇಳ್ತೀನಿ. ಸರಿ ತಾನೇ! ಟಾನಿಕ್ಕು ಮಾತ್ರೆ ಏನನ್ನಾದ್ರೂ ಬರೆದು ಕೊಟ್ಲಾ!.."

"ಇಲ್ಲ, ಏನನ್ನು ಬರೆದು ಕೊಟ್ಟಿಲ್ಲ ಅವಳು ಬರೆದು ಕೊಟ್ರೂ, ನಾನು ತಗೊಳ್ಳಲ್ಲ ನಂಗೆ ಇಷ್ಟವಿಲ್ಲ." ಬಲವಾಗಿ ತಲೆಯಾಡಿಸಿದಳು.

"ಇದು ಅತಿಯಾಯ್ತು ಪಲ್ಲವೀ.. ನಮ್ಮ ಮಗು ದಪ್ಪಪುಷ್ಟವಾಗಿ ಬೆಳೆಯಬೇಕೋ ಬೇಡ್ವೋ..ನಾನು ಕೇಳ್ತೀನಿ. ಅವಳು ಮರೆತಿರಬಹುದು.."

"ನಿಮ್ಮ ಮಗು ನಿಮ್ಮ ಹಾಗೇ ಮುದ್ದಾಗಿರುತ್ತೆ..ಹಾಗೇ ಹೀಗೇ ಅಂತಂದ್ಲು."

"ಅದಕ್ಕೇ ಕೋಪಾನಾ ಪಲ್ಲವಿ? ಅಂದರೆ ಅಂತಾಳೆ. ಅದಕ್ಯಾಕೆ ಬೆಲೆ ಕೊಡ್ತೀಯ? ಇನ್ನೆಷ್ಟು ದಿನ ಹೀಗೆ ಮಾತಾಡ್ತಾಳೆ. ಸಧ್ಯದಲ್ಲೇ ಮದುವೆ ಮಾಡ್ಕೊಂಡು ಈ ದೇಶಾನೇ ಬಿಟ್ಟು ಹೋಗ್ತಿದಾಳೆ.." ಪಲ್ಲವಿ ನೆಟ್ಟಗೆ ಕುಳಿತಳು.

"ಹೌದಾ! ಮದುವೆ ಯಾವಾಗ? ಯಾವ ದೇಶಕ್ಕೆ ಹೋಗ್ತಾಳೆ?.."

"ಇನ್ನು ಸರಿಯಾಗಿ ಗೊತ್ತಾಗಿಲ್ಲ. ಸ್ವಲ್ಪ ಹಣದ ಸಮಸ್ಯೆಯಂತೆ. ಅದು ಸರಿ ಹೋದ್ರೆ, ಎಲ್ಲಾ ಬೇಗ ಬೇಗ ಆಗುತ್ತಂತೆ. ನನ್ನನ್ನ ಬ್ಯಾಂಕಿನಿಂದ ಸಾಲ ಕೊಡಿಸಿ ಕೊಡ್ತೀಯ ಅಂತ ಕೇಳಿದ್ಲು.."

"ನೀವ್ಯಾಕೆ ಕೊಡ್ಬೇಕು?..ಅವರಪ್ಪ ಅಮ್ಮ ಕೊಡ್ಲಿ."

"ಅವರ ಹತ್ರ ಹಣ ಎಲ್ಲಿದೆ ಪಲ್ಲವಿ?.. ಅಲ್ಲದೇ ಅವರುಗಳಿಗೆ ಈ ವಿಷಯ ತಿಳಿಯಬಾರ್ದು ಅಂತ ಅವಳ ಇಷ್ಟ"

"ಅಂದರೆ? ಗುಟ್ಟಾಗಿ ಮದುವೆಯಾಗಿ, ಯಾರ್ಗೂ ತಿಳಿಸ್ದೇ ಹೋಗ್ತಾಳಂತಾ?.."

"ಹೂಂ. ಅವಳ ಇಷ್ಟ ಹಾಗೇ ಇದ್ದಂತಿದೆ. ಅದಕ್ಕೇ ನಾನು ಯೋಚಿಸ್ತಿದೀನಿ.. ಅಲ್ಲದೇ ಬ್ಯಾಂಕಿನವರು, ಅಡವಿಡುಕ್ಕೆ ತೋಟ, ಗದ್ದೆಯ ಪತ್ರಗಳನ್ನು ಕೇಳ್ತಾರೆ..ಅದೆಲ್ಲಾ ಅಪ್ಪಯ್ಯನ ಹೆಸರ್ನಲ್ಲಿದೆ.. ನಂಗೆ ಅದೇ ಯೋಚನೆಯಾಗಿದೆ..

"ಅವಳ ಬಗ್ಗೆ ನೀವ್ಯಾಕೆ ಯೋಚ್ನೇ ಮಾಡ್ಬೇಕು. ಏನಾದ್ರೂ ಮಾಡ್ಕೊಳ್ಳಲಿ ಬಿಡಿ.."

"ಹೇಮಂಗೆ, ಅವಳ ಮದುವೆಗೆ ಸಹಾಯ ಮಾಡ್ತೀನಿ ಅಂತ ಮಾತು ಕೊಟ್ಟಿದೀನಿ. ಈಗ ಹಣಾನ ಒದಗಿಸದೇ ಇದ್ದರೆ.. ಅವಳೇನಂದ್ಕೊಳ್ತಾಳೆ?..ಅವಳ ಓದು ಮುಂದುವರೆಯುವುದು ಹೇಗೆ?.. ಏನಾದ್ರೂ ಮಾಡ್ಲೇ ಬೇಕು.."

"ಏನಾದ್ರೂ ಮಾಡ್ಕೊಳ್ಳಿ..ನಿಮಗೂ ಅವಳ ಮೇಲಿನ ಪ್ರೀತಿ ಇನ್ನೂ ಕಡಿಮೆ ಆಗಿಲ್ಲ."

"ಹೀಗೆಲ್ಲಾ ಮಾತಾಡ್ಬೇಡ ಪಲ್ಲವಿ..ಅವಳ ಮೇಲೆ ಪ್ರೀತಿ ಇದ್ದಿದ್ರೆ ನಿನ್ನನ್ನ ಮದುವೆ ಆಗ್ತಿದ್ನಾ?..ನಾನು ಅವಳಿಗೆ ಥ್ಯಾಂಕ್ಸ್ ಹೇಳ್ಬೇಕು. ಹಾಗೇ ನೀನು ಥ್ಯಾಂಕ್ಸ್ ಹೇಳ್ಬೇಕು ಅವಳಿಗೆ...ನಿನ್ನನ್ನು ತಾಯಿಯಾಗುವಂತೆ ಮಾಡಿದಾಳಲ್ಲ..."

"ಅದಕ್ಕೇ ಥ್ಯಾಂಕ್ಸ್ ಯಾಕೆ ಹೇಳ್ಬೇಕು?.." ಅವಳು ಮೂತಿ ಉದ್ದ ಮಾಡಿ ತಲೆಯಾಡಿಸಿದಾಗ, ಅವನು ಅವಳ ಮುಖವನ್ನು ತನ್ನೆಡೆಗೆ ಎಳೆದುಕೊಂಡು, ಅವಳ ತುಟಿಗಳಿಗೆ ತನ್ನ ತುಟಿಗಳನ್ನು ತಗುಲಿಸಿದ.

"ನಂಗೆ ಥ್ಯಾಂಕ್ಸ್ ಹೇಳ್ತೀಯ ತಾನೇ?..ನಿನ್ನ ಒಡಲಲ್ಲಿ ಬೆಳೆಯುತ್ತಿರುವುದು ನನ್ನ ಮಗು..." ಎನ್ನುತ್ತಾ ಅವಳ ಒಡಲನ್ನು ಚುಂಬಿಸಿದ.

"ನೀವೂ ನಂಗೆ ಥ್ಯಾಂಕ್ಸ್ ಹೇಳ್ಬೇಕಪ್ಪಾ...ನಿಮ್ಮ ಮಗುವನ್ನು ನಾನು ಬೆಳೆಸಿ, ನಿಮ್ಮನ್ನು ತಂದೆಯನ್ನಾಗಿ ಮಾಡ್ತಿದೀನಿ.." ಅವಳೂ ಹೆಮ್ಮೆಯಿಂದ ನುಡಿದಳು. ಅವಳ ತಲೆಯನ್ನು ಚುಂಬಿಸಿದ.

"ನೀನು ಮಾತ್ನಲ್ಲಿ ಬಹಳ ಜಾಣೆ.." ಎನ್ನುತ್ತಾ ಅವಳನ್ನು ತನ್ನೆಡೆಗೆ ಎಳೆದುಕೊಂಡ. ನೀನು ತುಂಬಾ ಚೆನ್ನಾಗಿ ಕಾಣ್ತಿದೀಯ ಪಲ್ಲವೀ..ಹಾಗೇ ನಿನ್ನನ್ನು ಕಚ್ಚಿ ತಿಂದು ಬಿಡೋಣ ಅಂತ ಅನ್ನಿಸ್ತಿದೆ" ಎನ್ನುತ್ತಾ ಅವಳ ಕೆನ್ನೆಗಳನ್ನು ಮೃದುವಾಗಿ ಕಚ್ಚಿದ.

"ಬೇಡಾ ರೀ...ಕೆನ್ನೆ ಕೆಂಪಾದ್ರೆ...ಎಲ್ರೂ ನೋಡ್ತಾರೆ.. ನಂಗೆ ನಾಚ್ಕೇ ಆಗುತ್ತೆ" ಎನ್ನುತ್ತಾ ಅವನನ್ನು ಸರಿಸಲು ನೋಡಿದಳು. ಆದರೂ ಅವನು ಬಿಡಲಿಲ್ಲ. ಅವನ ಬಂಧನ ಬಿಗಿಯಾಯಿತು. ಪಲ್ಲವಿ ಅವನ ಸರಸಕ್ಕೆ ಮಣಿದಳು, ಸ್ಪಂದಿಸಿದಳು, ಚುಂಬಿಸಿದಳು. ಆ ಗಳಿಗೆಯಲ್ಲಿ ಬೇರೆಲ್ಲವನ್ನು ಮರೆತಳು. ಈ ಗಳಿಗೆ ನಿರಂತರವಾಗಿರಲಿ ಎಂದುಕೊಂಡಳು.

ಕೆಳಗಿನಿಂದ ಹೇಮಾ, ಭುಜಂಗನನ್ನು ಏರು ಧ್ವನಿಯಲ್ಲಿ ಕರೆದಾಗ ಇಬ್ಬರೂ ಎಚ್ಚೆತ್ತರು. ಭುಜಂಗ ರಸಭಂಗವಾದವನಂತೆ ಕೆಟ್ಟ ಮುಖ ಮಾಡಿದರೂ, ಎದ್ದ

"ನೀವು ಹೋಗ್ಬೇಡಿ.." ಪಲ್ಲವಿ ಅವನನ್ನು ತಡೆದಳು.

"ಏನು ಅಂತ ಹೋಗಿ ಕೇಳ್ತೀನಿ.. ಇಲ್ದಿದ್ರೆ ಬಾಗಿಲನ್ನು ಬಡಿದು ಎಲ್ಲರನ್ನು ಕರೆದು ಬಿಡ್ತಾಳೆ" ಎನ್ನುತ್ತಾ ಕೆಟ್ಟ ನಗೆಯನ್ನು ನಕ್ಕು ಅವಳಿಂದ ಸರಿದು ನಿಂತ. ಪಲ್ಲವಿ ಗೋಡೆಯ ಕಡೆಗೆ ತಿರುಗಿ ಮುಸುಕು ಬೀರಿ ಮಲಗಿದಳು.

* * *

"ಚೈತ್ರಾ ಯಾಕೇ ಮಲಗಿದೀಯಾ? ಹುಶಾರಿಲ್ವಾ!" ಎನ್ನುತ್ತಾ ಶ್ವೇತಾ ಅವಳ ಬಳಿಗೆ ಬಂದು ಕುಳಿತಳು. ಪಲ್ಲವಿ ಇತ್ತ ತಿರುಗಿದಳು.

"ಯಾಕೇ ಅಳ್ತಾ ಇದೀಯಾ ಏನೇ ಆಯ್ತು.. ನಿನ್ನ ರಾಜ ಎಲ್ಲೇ.."

"ಶ್ವೇತಾ..ನನ್ನನ್ನ ರೇಗಿಸ್ಬೇಡ.. ಇಲ್ಲಿ ಏನ್ಮಾಡ್ತಿದೀಯ ನೀನು?..ನಿನ್ನ ಮನೆಗೆ ಹೋಗು.. ಚಿದಾನಂದ ಕಾಯ್ತಾ ಇರಬಹುದು.." ಪಲ್ಲವಿ ಅರೆ ಕೋಪದಲ್ಲಿ ನುಡಿದಳು.

"ಹೋಗ್ತೀನಿ ಬಿಡೇ.. ಕಾಯ್ಲಿ ಬಿಡು.. ಇವತ್ತು ರಾತ್ರಿ ಏನೂ ಚಾರ್ಮ್ ಇಲ್ಲ. ಅದು ಅವನಿಗೂ ಗೊತ್ತು.."

"ಗೊತ್ತಿದ್ರೂ ಗಂಡಸ್ರು ಬಿಡ್ಬೇಕಲ್ಲ. ಅವನಿಗೆ ಇವತ್ತು ನಿರಾಸೆ ಮಾಡ್ಬೇಡ.."

"ನೀನು ಹೀಗೆ ಹೇಳ್ತೀದೀಯ. ಹೇಮ ಏನಂದ್ಲು ಗೊತ್ತಾ?.. ನಾನು ಅವನಿಂದ ಸ್ವಲ್ಪ ದಿನ ದೂರ ಇರೋದೇ ಒಳ್ಳೇದಂತೆ.. ಹೊರಡೋಕೆ ಮುಂಚೆ ನನ್ನ ಹತ್ರ ಬಂದು ಹೇಳಿದ್ಲು.. ಮಗೂಗೆ ಅಪಾಯ ಆಗ್ಬಹುದು ಅಂತಂದ್ಲು."

"ನಿನ್ನನ್ನು ಚೆಕ್ ಮಾಡ್ಲಿಲ್ವಾ?...ನಿನ್ನ ಮಗೂಗೂ ಅವಳೆ ತಾನೇ ಗಾಡ್ ಮದರ್..." ಕೆಣಕಿದಳು.

"ಏನು ಗಾಡ್ ಮದರ್?.. ಮಗು ನಂದು...ಅವಳು ಡಾಕ್ಟರ್ರು ಅಷ್ಟೇ.."

"ಡಾಕ್ಟರ್ ಥರ ಎಲ್ಲಿ ವರ್ತಿಸ್ತಾಳೆ...?

"ಹೌದಲ್ವಾ?..ಏನೇನೋ ಮಾತಾಡ್ತಾಳೆ. ಮಾತು ಮಾತಿಗೂ ಮುದ್ದು ಮಾಡ್ತಾಳೆ. ತಮಾಷೆ ಅಂತ ಅನ್ಸುತ್ತೆ..."

"ಓ..ನಿನ್ನ ಹತ್ರಾನೂ ಹಾಗೇ ವರ್ತಿಸ್ತಾಳಾ?..ನಿನಗೆ ಅಸಹ್ಯ ಅಂತ ಅನ್ಸಲ್ವಾ?..."

"ಅಸಹ್ಯ ಯಾಕೆ? ಏನೋ ಒಂಥರಾ ಕಾಂಪ್ಲೆಕ್ಸ್ ಅವಳಿಗೆ.. ಅವಳಿಗೆ ಮದುವೆ ಇಲ್ಲ, ಗಂಡಸಿನ ಸಹವಾಸ ಇಲ್ಲ, ಮಕ್ಕಳು ಅಂದ್ರೆ ಇಷ್ಟಾಂತ ಕಾಣುತ್ತೆ.."

"ನೀನು ಅದ್ಹೇಗೆ ಸಹಿಸ್ಕೋತೀಯೋ? ನಂಗಂತೂ ರೇಗಿ ಹೋಗುತ್ತೆ.."

"ಅವಳಿಗೆ ಭುಜಂಗನ ಮೇಲಿನ ಪ್ರೀತಿ ಜಾಸ್ತಿ. ಇದು ಅವನ ಮಗು ಅಂತ ಅತೀ ವ್ಯಾಮೋಹ.. ಅದಕ್ಕೇ ಹಾಗೆಲ್ಲಾ ಆಡ್ತಾಳೆ.. ಆಡ್ಕೊಳ್ಳಲಿ ಬಿಡು. ನಿಂಗೇನ್ಕಷ್ಟ.?"

"ಮುಂದೆ ಮಗೂನ ಕೊಡು ಅಂತ ಕೇಳಿದ್ರೆ?.."

"ಕೊಟ್ಬಿಡು.. ಮುಂದೆ ಇನ್ನೊಂದು ಮಗೂನ ಬೇಗ ಹೆತ್ಬಿಡು.."

"ಬಾಯ್ಮುಚ್ಚು ಶ್ವೇತಾ.. ಈ ಮಗು ನಂದು.. ನಾನು ಒಂಭತ್ತು ತಿಂಗಳು ಹೊತ್ತು, ಹೆರಿಗೆ ನೋವನ್ನು ಅನುಭವಿಸಿ, ಹೆತ್ತ ಮಗುವನ್ನು ಸಂಬಂಧ ಇಲ್ದೋರಿಗೆ ಕೊಡೋಕೆ ನನಗೇನು ಬುದ್ಧಿ ಇಲ್ವಾ?.. ಬೇಕಾದ್ರೆ ನಿನ್ನ ಮಗೂನ ಅವಳಿಗೆ ಕೊಡು. ಹೇಗೂ, ಮದುವೆಗೆ ಮೊದಲೇ ಬಸಿರಿ ಆಗಿರುವಳು ನೀನು.. ಹೋಗು ಚಿದಾನಂದನ ಹತ್ರ ಮಾತಾಡು..ಅವನನ್ನು ಒಪ್ಪಿಸಿ ನಿನ್ನ ಮಗುವನ್ನು ದಾನ ಮಾಡಿ ಬಿಡು.."

"ನನ್ನ ಮಾತನ್ನು ನಂಗೇ ತಿರುಗಿಸ್ಬೇಡ ಚೈತ್ರಾ.. ಈ ಮಗು ನನಗೆ ಸ್ಪೆಷಲ್.. ಇದನ್ನು ನಾನು ಯಾರಿಗೂ ಕೊಡುಲ್ಲ, ನೀನೇ ಕೇಳಿದ್ರೂ ಕೊಡುಲ್ಲ ತಿಳ್ಕೋ..."

"ನಾನ್ಯಾಕೇ ಕೇಳ್ಲಿ.!.. ನಾನೇ ಇನ್ನೆರಡು ಮಕ್ಕಳನ್ನು ಹೆರ್ತೀನಿ.. ನಾವಿಬ್ರೂ ಆರೋಗ್ಯವಾಗಿದೀವಿ.." ಶ್ವೇತಾ ತುಟಿ ಸೊಟ್ಟಗೆ ಮಾಡಿ ನಕ್ಕಳು. ಅಂತರಂಗದಲ್ಲಿದ್ದುದನ್ನು ಹಾಗೇ ನುಂಗಿಕೊಂಡು ಎದ್ದಳು. "ನಾವು ಹೆತ್ತ ಮಕ್ಕಳನ್ನು ನಾವು ಯಾರ್‍ಗೂ ಕೊಡ್ಬಾರ್ದು. ಅವಳಿಗೆ ಬೇಕಾದ್ರೆ ಅವಳು ಹೆತ್ತುಕೊಳ್ಳಿ, ಹೆರುಕ್ಕೆ ಆಗದಿದ್ರೆ ಬಾಡಿಗೆ ತಾಯೀನ ಗೊತ್ತು ಮಾಡ್ಕೊಳ್ಳಲಿ...ದತ್ತು ತೆಗೆದುಕೊಳ್ಳಲಿ.. ಏನಾದ್ರೂ ಮಾಡ್ಕೋಳ್ಳಲಿ.."

"ಅವಳು ಈಗ್ಲೂ ಭುಜಂಗನ್ನ ಪ್ರೀತಿಸ್ತಿದಾಳೆ. ನಿನ್ನ ಗಂಡನಿಂದಲೇ ಮಗುವಾಗ್ಬೇಕು ಅಂತ ಬಯಸಿದಾರೆ?.. ನೀನು ಬಿಟ್ಟು ಕೊಡ್ತೀಯಾ?" ಭುಜಂಗನ್ನ ಒಪ್ಪಿಸ್ತೀಯಾ?"

"ಶ್ವೇತಾ...ಇವತ್ತಿನ್ನು ನಿನ್ನ ಮದುವೆ ಆಗಿದೆ ಅಂತ ಸುಮ್ಮನಿದೀನಿ ತಿಳ್ಕೋ.. ನನ್ನ ಗಂಡ ಅಂಥವರಲ್ಲ, ಅವಳನ್ನು ಇವರು ಎಂದೂ ಪ್ರೀತಿಸಲಿಲ್ಲ."

"ಇದಕ್ಕೇ ಪ್ರೀತಿಸ್ಲೇ ಬೇಕಾಗಿಲ್ಲ ಚೈತ್ರಾ..."

"ಸ್ಟಾಪ್ ಇಟ್ ಶ್ವೇತಾ...ಸುಮ್ನೇ ತಲೆ ಕೆಡಿಸ್ಬೇಡ.. ನೀನೂ ಆರೋಗ್ಯವಾಗಿದ್ದು ನನ್ನನ್ನು ಆರೋಗ್ಯವಾಗಿರಲು ಬಿಡು. ನನಗೆ ನನ್ನ ಮಗುವಿನ ಹೆಲ್ತ್ ಮುಖ್ಯ.."

"ಸಾರೀ ಕಣೇ.. ಸುಮ್ನೇ ಅರ್ಥವಿಲ್ಲದ ಮಾತನ್ನಾಡಿದೆ. ನಿನ್ನ ಗಂಡ ವಾಪಸ್ಸು ಬರೋವರ್‍ಗೂ ನಾನು ಇಲ್ಲೇ ಕೂತಿರಬಹುದಾಗಿತ್ತು. ಆದರೆ ಅಲ್ಲಿ ಆ ಪ್ರಾಣಿ ಕಾಯ್ತಾ ಇರುತ್ತೆ.. ಅದಕ್ಕೆ ಚಪಲ.." ನಕ್ಕಳು. ಚೈತ್ರಾ ನಗಲಿಲ್ಲ

"ಇವರು ಎಲ್ಲಿಗೆ ಹೋದ್ರು..?"

"ಯಾಕೆ? ನಿಂಗೆ ಹೇಳಿ ಹೋಗ್ಲಿಲ್ವಾ! ಹೇಮನ್ನ ಬಸ್ ಸ್ಟ್ಯಾಂಡಿಗೆ ಬಿಟ್ಟು ಬರೋಕೆ ಹೋಗಿದಾರೆ.." ಚೈತ್ರಾ ಗಂಭೀರಳಾದಳು. ಶ್ವೇತಾ ಅದನ್ನು ಗಮನಿಸದವಳಂತೆ, ತನ್ನ ಪಾಡಿಗೆ ತಾನು ರೂಮಿನಿಂದ ಹೊರಕ್ಕೆ ನಡೆದಳು.

ಪಲ್ಲವಿಯ ತಲೆ ಕೆಲಸ ಮಾಡಲು ಪ್ರಾರಂಭಿಸಿತ್ತು. ಗಂಡನ ಮೇಲೆ ನಂಬಿಕೆ ಇದ್ದರೂ ಹೇಮಳ ಮೇಲೆ ನಂಬಿಕೆ ಇರಲಿಲ್ಲ. ಶ್ವೇತಾ, ತಲೆಗೆ ಏನೇನನ್ನೋ ತುಂಬಿದ್ದಳು. ಗಂಡನ ಬರವಿಗಾಗಿ ಕಾಯುತ್ತಾ ಮಲಗಿದಳು.

"ಅತ್ತಿಗೇ ಊಟಕ್ಕೇ ಬರ್ಬೇಕಂತೆ" ವಾಣಿ ಬಂದು ಕರೆದಾಗ ಉದಾಸೀನತೆಯಿಂದ ಉತ್ತರಿಸಿದಳು.

"ನಂಗೆ ಹಸಿವಿಲ್ಲ ವಾಣೀ..ನಿಮ್ಮಣ್ಣ ಬರಲಿ ಅವರೊಂದಿಗೆ ಊಟ ಮಾಡ್ತೀನಿ.."

"ಅವನ ಊಟ ಆಯ್ತು ಅತ್ತಿಗೆ.. ಹೇಮಾಳ ಜೊತೆ ಕೂತು ಮಾಡಿದ. ಶ್ವೇತಾ ಚಿದಾನಂದ ಕಾಯ್ತಾ ಇದಾರೆ ಬನ್ನಿ..."

"ಬಲವಂತ ಮಾಡ್ಬೇಡ ವಾಣೀ.. ಹಸಿವಿಲ್ಲ.. ನೀನು ಹೋಗು.." ಪಲ್ಲವಿ ರೋಷದಿಂದ ನುಡಿದು ಅತ್ತ ತಿರುಗಿ ಮಲಗಿದಳು. ಗಂಡನ ಮೇಲೆ ರೋಷ ಉಕ್ಕಿತ್ತು.

* * *

"ಯಾಕೇ ಪಲ್ಲವೀ.. ಊಟ ಮಾಡ್ಬಾರ್ದಾ.. ಉಪವಾಸ ಮಲಗ್ಬಾರ್ದು ಅಂತ ಗೊತ್ತಿಲ್ವಾ?" ಭುಜಂಗ ಅವಳ ತೋಳ ಮೇಲೆ ಕೈಯನ್ನಿಟ್ಟಾಗ, ಅವಳು ಅವನ ಕೈಯನ್ನು ಎತ್ತಿ ಸರಿಸಿದಳು. ಭುಜಂಗ ಅವಳ ಪಕ್ಕ ಕುಳಿತ.

"ಯಾಕೇ ಮರಿ.. ಕೋಪಾನಾ?.. ಸಾರೀ ಕಣಮ್ಮ.. ಹೊತ್ತಾಗಿ ಹೋಯ್ತು. ಬಸ್ಸು ತಡವಾಗಿ ಬಂತು.." ಪಲ್ಲವಿ ಉತ್ತರಿಸಲಿಲ್ಲ. ಅವನು ಅವಳನ್ನು ತನ್ನೆಡೆಗೆ ತಿರುಗಿಸಿಕೊಂಡ. ಅವಳು ಅತ್ತಿದ್ದಂತೆ ಅನ್ನಿಸಿತು. ಅವಳನ್ನು ತನ್ನ ಎದೆಗೆ ಒರಗಿಸಿಕೊಂಡ.

"ಯಾಕೋ ಚಿನ್ನಾ.. ಅಳ್ತಿದೀಯಾ?.. ನನ್ಮೇಲೆ ಕೋಪ ಇದ್ದರೆ ನಾಲ್ಕು ಏಟು ಹೊಡೆದ್ಬಿಡು.. ಆದರೆ ನನ್ನ ಮಗೂನ ಸತಾಯಿಸ್ಬೇಡ.. ನೀನು ಹಸಿದುಕೊಂಡಿದ್ದರೆ, ಅದಕ್ಕೆ ಸುಸ್ತಾಗುತ್ತೆ ಅಲ್ವಾ!... ನಾನು ಇಲ್ಲಿಗೇ ಊಟವನ್ನು ತಂದು ಕೊಡುವಂತೆ ಹೇಳ್ತೀನಿ.. ನಾನೆ ತಿನ್ನಿಸ್ತೀನಿ.. ಸರೀನಾ?" ಅವನು ಎದ್ದ. ಅವಳು ಎಳೆದಳು.

"ಇದನ್ನೆಲ್ಲಾ ನಿಮ್ಮ ಆ ರಾಣೀಗೆ ಮಾಡಿ.. ನಂಗೇನೂ ಬೇಡ..."

"ನೀನೇ ನನ್ನ ರಾಣಿ. ಬೇರೆ ಇನ್ಯಾರು?.."

"ಇದಾಳಲ್ಲ ನಿಮ್ಮ ಪ್ರಿಯತಮೆ.. ಹೇಮಾ..."

"ಪಲ್ಲವೀ.. ನನಗೆ ಕೋಪ ಬರಿಸ್ಬೇಡ.. ನನಗೂ ಅವಳಿಗೂ ಏನೇನೋ ಅರ್ಥವನ್ನು ಕಲ್ಪಿಸ್ಬೇಡ.. ಈಗ ಅವಳು ಕೇವಲ ನಿನ್ನ ಡಾಕ್ಟರ್ರು ಅಷ್ಟೇ.."

"ನನಗೆ ಈ ಡಾಕ್ಟರ್ ಬೇಡ.. ನೀವು ಅವಳ ಹತ್ರ ಮಾತಾಡ್ಬೇಡಿ..."

"ಈ ಮಾತನ್ನು ನೀನು ಹೇಳ್ತಾ ಇದೀಯ?... ಅಂಥಾದ್ದೇನು ಮಾಡಿದ್ಲು ನಿಂಗೆ? ಇನ್ನು ಕೆಲವೇ ತಿಂಗಳು. ಮದುವೆ ಮಾಡ್ಕೊಂಡು ಹೊರಟು ಹೋಗ್ತಾಳೆ. ಆಮೇಲೆ ನೀನು ಕರೆದ್ರೂ ಅವಳು ಸಿಗುಲ್ಲ."

"ಬರದಿದ್ರೆ ಬೇಡ.. ಅವಳು ನನ್ನ ಮಗುವನ್ನು ಕೇಳದಿದ್ರೆ ಸಾಕು.."

"ಭುಜಂಗ ನಕ್ಕ. ಏನು? ನಮ್ಮ ಮಗುವನ್ನು ಅವಳು ಕೇಳ್ಬಹುದು ಅನ್ನೋ ಅನುಮಾನ ನಿಂಗ್ಯಾಕೆ?.. ಅವಳಿಗ್ಯಾಕೆ ಈ ಮಗು?"

"ಯಾಕೇ ಅಂತಂದ್ರೆ.. ಇದು ನಿಮ್ಮ ಮಗು...ಅದಕ್ಕೇ..." ಭುಜಂಗ ಅವಳನ್ನೇ ದಿಟ್ಟಿಸಿದ.

"ಹೇಮಾ ಮದುವೆಯಾಗ್ತಿದಾಳೆ.. ಅವಳಿಗೇ ಮಕ್ಕಳಾಗುತ್ವೆ..ನಮ್ಮ ಮಗೂನ ಕೇಳುವ ಪ್ರಶ್ನೆಯೇ ಇಲ್ಲ, ಇಂಥಾ ಅನುಮಾನ ನಿಂಗ್ಯಾಕೆ?" ಅವನು ಅವಳ ಭುಜವನ್ನು ಅಲುಗಾಡಿಸಿ ಕೇಳಿದ.

"ನಂಗ್ಯಾಕೋ ಭಯ ಆಗುತ್ತೆ.. ಅವಳು ಹಾಗೆ ವರ್ತಿಸ್ತಾಳೆ..."

"ಅವಳು ಹೇಗೇ ವರ್ತಿಸಿದರೂ, ನಮ್ಮ ಮಗುವಿನ ಮೇಲೆ ಅವಳಿಗೆ ಯಾವ ಅಧಿಕಾರವಿರುವುದಿಲ್ಲ. ಅಷ್ಟು ತಿಳಿಯುಲ್ವಾ ನಿಂಗೆ?"

"ನೀವು ಅವಳು ಹೇಳಿದ ಹಾಗೆ ಕೇಳಿ ಬಿಡ್ತೀರಿ.. ಅವಳು ಕೇಳಿ ಬಿಟ್ಟರೆ ಖಂಡಿತಾ ಕೊಟ್ಟು ಬಿಡ್ತೀರಿ.. ನಾನು ಸತ್ತು ಹೋಗ್ತೀನಿ ಅಷ್ಟೇ..."

"ಬಾಯ್ಮುಚ್ಚು ಪಲ್ಲವೀ..ನಿನಗೆ ಏನೋ ಸಂಶಯ. ನಾನು ಮಗುವಿನ ಮೇಲೆ ಆಣೆ ಇಟ್ಟು ಹೇಳ್ತೀನಿ. ಅವಳ ನನ್ನ ಸಂಬಂಧ ಕೇವಲ ಸೋದರಿಕೆಯ ಸಂಬಂಧ. ಅವಳು ನಂಗೆ ತಂಗಿ ಇದ್ದ ಹಾಗೆ.. ನನ್ನ ವಾಣಿ ಇದ್ದ ಹಾಗೆ ತಿಳೀತಾ?.."

"ಅವಳ ಮನಸ್ಸಲ್ಲಿ ಏನಿದೆ ಅಂತ ನಿಮಗೆ ಗೊತ್ತಾ?.."

"ಹೂಂ, ಗೊತ್ತು. ಅವಳು ಡಾ॥ಗಿರೀಶ್ ಅನ್ನೋರನ್ನು ಪ್ರೀತಿಸಿ ಮದುವೆಯಾಗ್ತಾ ಇದಾಳೆ.. ಅವನ ಜೊತೆ ಫಾರಿನ್ನಿಗೆ ಹೊರಟು ಹೋಗ್ತಾಳೆ..." ಒತ್ತಿ ನುಡಿದ.. ಪಲ್ಲವಿ ಸ್ವಲ್ಪ ಹೊತ್ತು ಸುಮ್ಮನಿದ್ದು ಕೇಳಿದಳು.

"ಹಣಕ್ಕೆ ಏನು ವ್ಯವಸ್ಥೆ ಮಾಡ್ತೀರಿ?.."

"ನಂಗೊತ್ತಿಲ್ಲ, ಅವಳಿಗೆ ಬೇಕಾಗುವಷ್ಟು ಹಣ ನನ್ನ ಹತ್ತಿರ ಇಲ್ಲ, ಅಷ್ಟು ಹಣ ಸಾಲವಾಗಿಯೂ ಸಿಗುವುದಿಲ್ಲ. ನಾನು ಆ ಬಗ್ಗೆ ಅವಳನ್ನು ಕೇಳಿಲ್ಲ, ಏನ್ಮಾಡ್ತಾಳೋ?

"ನಾನೊಂದು ಮಾತು ಹೇಳಿದ್ದೆ.... ನನ್ನ ಅಕೌಂಟ್‌ನಲ್ಲಿ ಹಣ ಇದೆಯಲ್ಲ, ಅದರಲ್ಲಿ ಅವಳಿಗೆ ಎಷ್ಟು ಬೇಕೋ, ಕೊಡಿ ಅಂತ ಹೇಳಿದ್ನಲ್ಲ,

"ಬೇಡ ಪಲ್ಲವಿ, ಆ ಹಣ ನಿನ್ನದು.. ಅಂತ ಅವತ್ತೇ ನಾನು ಹೇಳಿದ್ದೆ."

"ಯಾಕೇ? ನನ್ನ ಹಣಾನ ಹೇಮಂಗೆ ಕೊಡ್ಬಾರ್ದಾ?.."

"ನಂಗೆ ಇಷ್ಟವಿಲ್ಲ.. ಅದಕ್ಕೇ ಮತ್ತೆ ಆ ಮಾತನ್ನೆತ್ತಿರಲಿಲ್ಲ ನಾನು."

"ಯಾಕೆ ಇಷ್ಟವಿಲ್ಲ!..ನೀವು ಹಣವನ್ನು ಹೊಂದಿಸದಿದ್ದರೆ, ಅವಳು ಇಲ್ಲೇ ಇರ್ತಾಳೆ. ಬೇಗ ಮದುವೆಯಾಗುವುದಿಲ್ಲ, ಅದು ನಿಮಗೂ ಇಷ್ಟವಿಲ್ಲ ಅಂತ ಅಂದ್ಕೊಂಡಿದೀನಿ.. ಅವಳಿಗೆ ನನ್ನ ಹಣದಿಂದ ಅನುಕೂಲವಾಗೋದಾದ್ರೆ ಆಗಲಿ.. ಬೇಗ ಹೋಗಲಿ.."

"ಅವಳು ಏನಂತಾಳೋ...ಅವಳು ಕೇಳದೇ ನಾನು ಈ ಮಾತನ್ನು ಎತ್ತುವುದಿಲ್ಲ."

"ಅವಳು ನಿಮ್ಮ ಮಾತನ್ನು ತೆಗೆದು ಹಾಕುವುದಿಲ್ಲ, ಅವಳನ್ನು ಒಪ್ಪಿಸಿ. ಅಥವಾ ಹೇಳಲೇ ಬೇಡಿ..." ಭುಜಂಗನಿಗೆ ಅವಳ ಇಂಗಿತ ಅರ್ಥವಾಗಿತ್ತು. ಆದಷ್ಟು ಬೇಗ ಹೇಮಾ ಹೋಗುವುದನ್ನು ಇವಳು ಬಯಸುತ್ತಿದಾಳೆ ಅಂತಂದುಕೊಂಡ. ಇವಳ ಮಾತಿಗೆ ಒಪ್ಪಬೇಕೋ ಬೇಡವೋ ಅಂತ ಒಂದು ಗಳಿಗೆ ಚಿಂತಿಸಿದ. ಇದರಿಂದ ಪಲ್ಲವಿಯ ಸಂಶಯ ದೂರವಾಗುವುದಾದರೆ, ನೆಮ್ಮದಿ ಸಿಗುವುದಾದರೆ, ಒಪ್ಪಿದರೆ ತಪ್ಪಿಲ್ಲ ಅಂತಂದುಕೊಂಡು ತಲೆಯಾಡಿಸಿದ.

"ಸರಿ ನಿನ್ನಿಷ್ಟ ಇದರ ಬಗ್ಗೆ ನಿನಗೆ ಹೇಗನ್ನಿಸುತ್ತೋ ಹಾಗೇ ಆಗಲಿ.. ಈಗ್ಲಾದ್ರೂ ಊಟ ಮಾಡ್ತೀಯ ತಾನೇ..? ಬಲವಂತವಾಗಿ ನಕ್ಕು ಕೇಳಿದ.."

"ನಿನಗೆ, ನನಗಿಂತ, ನಮ್ಮ ಮಗುವಿನ ಚಿಂತೆಯೇ ಹೆಚ್ಚು.." ದೂಷಿಸಿದಳು.

"ಇಲ್ಲ, ನಿನ್ನ ಚಿಂತೆಯೇ ಹೆಚ್ಚು. ನೀನು ಸರಿಯಾಗಿದ್ರೆ, ನಮ್ಮ ಮಗುವನ್ನು ಸರಿಯಾಗಿ ನೋಡ್ಕೋಳ್ತೀಯ ಅನ್ನೋ ನಂಬಿಕೆ ನನಗಿದೆ.. ಕೆಳಕ್ಕೆ ಇಳಿದು ಬರ್ತೀಯೋ...ಇಲ್ಲಿಗೇ ಊಟವನ್ನು ತರಿಸ್ಲೋ...?"

"ಅಲ್ಲಿಗೇ ಬರಬಹುದಾಗಿತ್ತು.. ಆದರೆ ನಿಮ್ಮ ಊಟ ಆಯ್ತುಂತೆ.. ಎಷ್ಟು ಸ್ವಾರ್ಥಿ ನೀವು.."

"ಹಾಗಂತ ಯಾರು ಹೇಳಿದ್ರು?.. ನಿನ್ನನ್ನ ಬಿಟ್ಟು ಊಟ ಮಾಡುವಷ್ಟು ನಿಷ್ಕರುಣಿ ನಾನಲ್ಲ, ಇಷ್ಟೇನಾ ನನ್ನ ಪ್ರೀತಿ ಬಗ್ಗೆ ನಿಂಗೆ ತಿಳಿದಿರೋದು.."

"ಮತ್ತೆ ವಾಣಿ ಹಾಗಂದ್ಲು.."

"ನೀನು ಬೇಗ ಊಟ ಮಾಡ್ಲಿ ಅಂತ ಹಾಗೆ ಹೇಳಿರ್ತಾಳೆ. ಎಲ್ಲರ ಊಟವೂ ಮುಗಿದಿರುತ್ತೇನೋ.. ಚಿದಾನಂದ, ಶ್ವೇತಾ ಊಟವನ್ನು ಮುಗಿಸಿ, ಮಲಗುವ ಮನೆಗೆ ಹೋಗಿರ್ತಾರೆ.. ಇವತ್ತು ಅವರ ಮೊದಲ ರಾತ್ರಿ ಅಲ್ವಾ!.." ಅವಳ ಕಡೆ ತುಂಟತನದಿಂದ ನೋಡಿ ಕೇಳಿದ...

"ಹುಂ, ಹೆಸರಿಗೆ ಮೊದಲ ರಾತ್ರಿ...ಅವಳೀಗ ಬಸಿರಿ.. ಚಿದಾನಂದನ್ನ ಹತ್ತಿರಕ್ಕೆ ಸೇರಿಸ್ಬೇಡ ಅಂತ ಡಾಕ್ಟ್ರು ಹೇಳಿದಾಳಂತೆ.."

"ಯಾವ ಡಾಕ್ಟ್ರು?" ನಗುತ್ತಾ ಕೇಳಿದ.

"ಇನ್ಯಾರು? ಡಾ॥ ಹೇಮಾ..ಒಂದು ತಮಾಷೆ ಗೊತ್ತಾ?.. ಅವಳು ಶ್ವೇತಾಳ ಮಗುವಿನ ಬಗ್ಗೆಯೂ ಹೀಗೇ ವಿಚಿತ್ರವಾಗಿ ಮಾತಾಡೋದು.. ಮುತ್ತಿಡೋದು ಎಲ್ಲಾ ಮಾಡ್ತಾಳಂತೆ..

ಶ್ವೇತಾ ತಮಾಷೆ ಅನ್ನೋ ಥರ ಹೇಳಿದ್ಲು. ಥೂ ಅಸಹ್ಯ..."

"ಹೋಗ್ಲಿ ಬಿಡು ಪಲ್ಲವೀ.. ಶ್ವೇತಂಗೆ ಸರಿ ಹೋಗಬಹುದು. ನಿಂಗೆ ಸರಿ ಹೋಗುಲ್ಲ ಶ್ವೇತಾನೂ ವಿಚಿತ್ರ ಸ್ವಭಾವದವಳೇ. ಚಿದಾನಂದನನ್ನು ಮದುವೆಯಾಗೋ ತೀರ್ಮಾನವೇ ಹೆಚ್ಚು ವಿಚಿತ್ರ ಅಂತ ಅನ್ನಿಸುತ್ತೆ. ಅವನ ಜೊತೆ ಸರಿ ಹೋಗುತ್ತೋ ಇಲ್ವೋ?" ಅವನಿಗೆ ಕಷ್ಟ" ಅವನು ಮುಗ್ಧ

"ಸರಿ ಹೋಗ್ದಿದ್ರೆ ಬಿಟ್ಟು ಹೋಗ್ತಾಳೆ ಅಷ್ಟೇ..." ಅನುಭವಿಸಲಿ.

"ಹಾಗಾಗ್ಬಾರ್ದು. ಅದು ಹುಟ್ಟುವ ಮಗುವಿನ ಭವಿಷ್ಯದ ಮೇಲೆ ಪರಿಣಾಮವನ್ನು ಬೀರುತ್ತೆ.. ನೀನು ಅವಳಿಗೆ ತಿಳುವಳಿಕೆಯನ್ನು ಹೇಳು.. ಚಿದಾನಂದನ ಅವಿವೇಕದಿಂದ ಮಂದಾಕಿನಿಗೆ ಕಷ್ಟ.." ಪಲ್ಲವಿ ಉತ್ತರಿಸಲಿಲ್ಲ ಮಂಚದಿಂದ ಇಳಿದಳು. ಇಬ್ಬರೂ ಕೆಳಗಿಳಿದು ಬಂದರು. ಊಟವನ್ನು ಮುಗಿಸಿ ಹೊರಡಲಿದ್ದ ಚಿದಾನಂದನನ್ನು ಕರೆದು ಭುಜಂಗ ಅವನ ಕಿವಿಯಲ್ಲಿ ಏನನ್ನೋ ಉಸುರಿದ. ಅವನು ಕಸಿವಿಸಿಕೊಂಡಿದ್ದನ್ನು ಪಲ್ಲವಿ ಗಮನಿಸಿದಳು. ಶ್ವೇತಾ ಭುಜಂಗನನ್ನೇ ನೋಡುತ್ತಿದ್ದಳು.

* * *

"ಭುಜಂಗ ಎಲ್ಲೇ ಎರಡು ದಿನಗಳಿಂದ ಕಾಣ್ತಿಲ್ಲ.." ಶ್ವೇತಾ ಚೈತ್ರಳನ್ನು ಕೇಳಿದಳು. ಪಲ್ಲವಿ ಮೂತಿ ಸೊಟ್ಟ ಮಾಡಿದಳು.

"ನಿಂಗ್ಯಾಕೇ? ಎಲ್ಲೋ ಹೋಗಿದಾರೆ.. ನಿಂಗೇನೂ ಹೇಳ್ಬೇಕಾಗಿಲ್ಲ" ಎಂದಳು.

"ಅದ್ಯಾಕೇ ಹಾಗೆ ಸಿಡುಕ್ತೀಯ? ಭುಜಂಗ ಅದ್ಹೇಗೆ ನಿನ್ನನ್ನ ಸಹಿಸ್ಕೋತಾರೋ ಮಾತು ಮಾತಿಗೂ ಗುರ್ ಅಂತೀಯಲ್ಲೇ..." ಚೈತ್ರಳ ಕೆನ್ನೆಯನ್ನು ಚಿವುಟಿದಳು.

"ಚಿದಾನಂದ ನಿನ್ನನ್ನು ಹೇಗೆ ಸಹಿಸ್ಕೋತಾನೋ.. ಹಾಗೇ...ಅಂದ್ಹಾಗೇ, ನಿಂಗೂ ಹೇಮಳ ಗಾಳಿ ಬೀಸ್ತೋ ಹೇಗೆ...ಕೆನ್ನೆ ಉರೀತಿದೆ.." ಕೆನ್ನೆಯನ್ನು ಸವರಿಕೊಂಡಳು.

"ಆಹಾಹಾ...ನಿನ್ಗಂಡ ಕೆನ್ನೇನ ಕಚ್ಚಿದ್ರೂ ತಡ್ಕೋತೀಯ.. ಈಗ ಉರಿಯುತ್ತಂತೆ. ಉಫ್ ಅಂತೀನಿ.." ಮುಖದ ಬಳಿಗೆ ತುಟಿಗಳನ್ನು ತಂದಾಗ, ಪಲ್ಲವಿ ಅವಳನ್ನು ದೂರಕ್ಕೆ ಸರಿಸಿದಳು.

"ದೂರ ಇರು.. ನನಗೆ ನಿಮ್ಮಂಥ ಹೆಂಗಸರ ಸಹವಾಸವೇ ಬೇಡ..."

"ಬರೀ ಗಂಡಸರ ಸಹವಾಸ ಮಾತ್ರ ಬೇಕು ಅಂತನ್ನು.. ಮತ್ತೆ! ರಾಜೀವನ್ನ ದೂರ ಹೇಗೇ ಇಟ್ಟಿದ್ದೆ?.. ಚಿದಾನಂದನನ್ನ ನೀನು ಬಯಸಿದ್ದೆ ಅಲ್ವಾ?.."

"ಶ್ವೇತಾ..ಸುಮ್ಮನೇ ತಲೆ ಹರಟೆ ಮಾತನ್ನಾಡ್ಬೇಡ.. ಇದಕ್ಕೇ ನಾನು ನಿನ್ನನ್ನ ಬೈಯೋದು. ನನ್ನ ಪಾಡಿಗೆ ನಾನು ಇಲ್ಲಿ ಆರಾಮವಾಗಿದ್ದೆ ನೀನ್ಯಾಕೆ ಈ ಊರಿಗೆ ಬಂದೆ? ಚಿದಾನಂದನಂಥವನು ನಿಂಗೆ ಸರಿ ಹೋಗುಲ್ಲ ಅಂತ ನಂಗೆ ಗೊತ್ತು..."

"ಅದೆಲ್ಲಾ ಒಂದು ದೊಡ್ಡ ಕತೆ.. ನಿನಗೆ ಸಹಾಯ ಮಾಡಿದ್ದಾಗ, ನಂಗೆ ಸ್ವಲ್ಪ ಹಣ ಕೊಡ್ತೀನಿ

ಅಂತಂದೆ.. ಕೆಲಸ ಕೊಡಿಸ್ತೀನಿ ಅಂತ ಹೇಳಿದ್ದೆ ನೀನು ಏನನ್ನೂ ಮಾಡ್ಲಿಲ್ಲ, ಮತ್ತೆ ಮತ್ತೆ ಕೇಳ್ತಾನೇ ಇದೀವಿ. ನನ್ನ ಉಪಕಾರವನ್ನು ಮರೆತೇ ಬಿಟ್ಟೆ ಅದಕ್ಕೇ ವಸೂಲು ಮಾಡೋಣ ಅಂತ ಇಲ್ಲಿಗೇ ಬಂದು ಸೇರ್ಕೊಂಡೆ ತಿಳೀತಾ?.." ಶರತ್ ಅಂತೂ ಸಖತ್ ಮೋಸ ಮಾಡ್ದ.."

"ಹಣ ಕೊಟ್ರೆ ಇಲ್ಲಿಂದ ಹೊರಟು ಹೋಗ್ತೀಯಾ? ನಿನ್ನನ್ನ ನಂಬ್ಲಾ?"

"ಸಧ್ಯಕ್ಕೇ ಹೋಗುಲ್ಲ ಈ ಕಂದ ಹುಟ್ಟೋವರ್ಗೂ ಇರ್ಬೇಕಲ್ಲ.. ಹಣ ಕೊಡ್ತೀನಿ ಅಂತಂದ್ರೆ ಬೇಡಾಂತೀನಾ?.. ನಂಗೂ ನನ್ನದೇ ಅದ ಸಂಸಾರಾನ ಹೂಡಿ ಮಜವಾಗಿ ಇರ್ಬೇಕು ಅಂತ ಆಸೆ.. ವೈದೇಹಿ ಆಂಟಿ ಮನೇಲಿ ಬೇಜಾರಾಗುತ್ತೇ ಕಣೇ.. ನನಗೆ, ಚಿದಾನಂದನಿಗೆ ಯಾವುದೇ ರೀತಿಯಲ್ಲಿ ಸ್ವತಂತ್ರವಿಲ್ಲ..ನಾವು ಮಲಗೋದು ಹೇಮಾಳ ರೂಮು. ಆ ರೂಮಿನ ತುಂಬಾ ಅವಳ ಸಾಮಾನುಗಳನ್ನು ತುಂಬಿಟ್ಟಿದ್ದಾರೆ.."

"ನಿಂಗೆ ಹಾಗೇ ಆಗ್ಬೇಕು. ಬಯಸಿ ಬಯಸಿ ಈ ಕೊಂಪೆಗೆ ಬಂದಿದೀಯಲ್ಲ.."

"ಇಲ್ಲಿ ನೀನು ಇದೀಯ ಅಂತ ಬಂದೆ.. ಈ ಮಗು, ಈ ಮದುವೆ ನಾನು ಬಯಸಿದ್ದು.. ಡೆಲಿವರಿ ಆದ್ಮೇಲೆ ಮಗೂನೂ ಕರ್ಕೊಂಡು ಹೊರಟು ಹೋಗ್ತೀನಿ.."

"ಹೋಗಿ ಏನ್ಮಾಡ್ತೀಯ.. ಅಲ್ಲಿ ನಿನ್ನನ್ನ ಯಾರು ನೋಡ್ಕೋತಾರೆ.. ಚಿದಾನಂದನಿಗೆ ಕೆಲಸವಿಲ್ಲ, ಸಂಪಾದನೆ ಇಲ್ಲ, ನಿನಗೆ ತವರಿನವರ ಬೆಂಬಲ ಇಲ್ಲ.. ನಿಂಗೆ ಈ ಮದುವೆ, ಈ ಮಗು ಬೇಕಾಗಿತ್ತಾ?.. ಏನೇ ಆದ್ರೂ ಇಲ್ಲೇ ಸಹಿಸ್ಕೊಂಡಿರ್ಬೇಕು."

"ಹಾಗೆನ್ಬೇಡ ಚೈತ್ರಾ.. ಹೆಣ್ಣು ಬಯಸುವುದು, ಪ್ರೀತಿಯನ್ನು, ವಾತ್ಸಲ್ಯವನ್ನು ಅಲ್ವಾ?.. ಶರತ್‌ನಿಂದ ನಂಗೆ ಅನ್ಯಾಯವಾಯ್ತು. ಅವನ ಮಗುವನ್ನು ಉಳಿಸಿಕೊಳ್ಳಲಿಲ್ಲವಲ್ಲ ಅಂತ ದುಃಖವಾಗ್ತಿತ್ತು. ಈಗ್ಲೂ ಅಷ್ಟೇ.. ಹೇಮಾ ಸಹಾಯ ಮಾಡ್ದೇ ಇದ್ದಿದ್ರೆ.. ಏನಾಗ್ತಿತ್ತೋ.." ಅವಳು ವ್ಯಥೆಯನ್ನೂ ನಟಿಸಿದಾಗ ಪಲ್ಲವಿ ಸಮಾಧಾನ ಮಾಡಿದಳು.

"ಹೋಗ್ಲಿ ಸಮಾಧಾನ ಮಾಡ್ಕೋ.. ತಾಯಿಯಾಗ್ಬೇಕು ಅನ್ನೋ ಹಂಬಲ, ಬಯಕೆ ಏನೂಂತ ನಂಗೂ ಗೊತ್ತು. ನಾನೂ ಬಯಸಿ ಬಯಸಿ ಈ ಮಗೂನ ಒಡಲಲ್ಲಿ ತುಂಬಿಕೊಂಡಿದೀನಿ. ಭುಜಂಗ ತುಂಬಾ ಒಳ್ಳೆಯವರು. ಅವರ ಮಗುವಿಗೆ ನಾನು ತಾಯಿಯಾಗ್ತಾ ಇರೋದು ನನಗೆ ಬಹಳ ಖುಷೀನ ಕೊಡ್ತಿದೆ. ಆದರೆ ಯಾಕೋ ಹೇಮನ್ನ ಕಂಡ್ರೆ ನನ್ನ ಮೈಯೆಲ್ಲಾ ಉರಿದು ಹೋಗ್ತಿದೆ.." ಶ್ವೇತಾ ಮೌನವನ್ನು ವಹಿಸಿದಳು. ನಿಜ ಏನೂಂತ ಗೊತ್ತಾದ್ರೆ ನೀನು ಅವಳನ್ನು ಮಾತ್ರವಲ್ಲ ನನ್ನನ್ನೂ ದ್ವೇಷಿಸ್ತೀಯ ಅಂತಂದುಕೊಂಡಳು.

"ಯಾಕೇ ಸುಮ್ಮನಾಗ್ಬಿಟ್ಟೆ ಅವಳೂ ಚಿದಾನಂದನೊಂದಿಗೆ ಸಲುಗೆಯಿಂದ ಇದ್ದಿದ್ರೆ ನಿಂಗೂ ಹಾಗೇ ಅನ್ನಿಸ್ತಿತ್ತು.."

"ಇಲ್ಲ ಚೈತ್ರಾ...ನೀನು ಭುಜಂಗನನ್ನು ತುಂಬಾ ಪ್ರೀತಿಸ್ತೀಯ ಅದಕ್ಕೇ ಹಾಗೆನ್ನಿಸುತ್ತೆ. ಅಲ್ದೇ ಚಿದಾನಂದ ಅವಳಿಗೆ ಚಿಕ್ಕಮ್ಮನ ಮಗ. ಅಣ್ಣನ ಸಮಾನ. ಅಲ್ದೇ ಭುಜಂಗನ ಪರ್ಸನಾಲಿಟಿ ಹಾಗಿದೆ, ಎಲ್ಲರೂ ಲೈಕ್ ಮಾಡುವ ಹಾಗೆ.. ನಾನೂ ಶರತ್‌ನ ಇಷ್ಟೇ ಪ್ರೀತಿಸ್ತಿದ್ದೆ. ಏನಾಯ್ತು ನೋಡು. ನೀನೂ ಹುಶಾರಾಗಿರು. ನೀನೂ ಮೋಸ ಹೋಗ್ಬೇಡ.."

"ಸುಮ್ನಿರು ಶ್ವೇತಾ, ಶರತ್ ಮೋಸಗಾರನಾಗಿದ್ದ, ತಂಗಿಗೇ ಮೋಸ ಮಾಡ್ತೋನು.. ಗೆಳತಿಗೆ ಮಾಡ್ದೇ ಇರ್ತಾನಾ? ನೀನು ಅವನನ್ನು ನಂಬಿದ್ದು ಅವನ ತಪ್ಪಲ್ಲ.."

"ನೀನೂ ಅವನನ್ನು ನಂಬಿದ್ದೆ. ನೀನೂ ರಾಜೀವಂಗೆ ಮೋಸ ಮಾಡ್ಲಿಲ್ವಾ?.."

"ಅದಕ್ಕೇ ಕಾರಣ ನಾನಲ್ಲ, ನನ್ನ ತಪ್ಪು ಏನೂಂತ ನಂಗೀಗ ಅರಿವಾಗಿದೆ... ಅದಕ್ಕೇ ಅವನಿಂದ ಬಂದ ಹಣಾನೆಲ್ಲಾ ದಾನ ಮಾಡ್ಬೇಕು ಅಂತ ಇದೀನಿ.."

"ದಾನಾನಾ?.. ಯಾರಿಗೆ ಮಾಡ್ತಿದೀಯ.. ಅಷ್ಟೊಂದು ಹಣಾನ..?"

"ಈಗ್ಲೇ ಹೇಳುಲ್ಲ, ನೀನೂ ಯಾರಿಗೂ ಹೇಳ್ಬೇಡ.. ನಿನ್ನ ಅಣ್ಣನಿಗೂ ಸ್ವಲ್ಪ ಕೊಡ್ತೀನಿ. ನಿಂಗೂ ಕೊಡ್ತೀನಿ. ಉದ್ಧಾರವಾಗಿ.."

"ಹೀಗೆ ಅಹಂಕಾರದ ಮಾತಾಡ್ಬೇಡ.. ಶರತ್ ಜೈಲಿಗೆ ಹೋಗ್ದೇ ಇದ್ದಿದ್ರೆ ನಾನು ನಿನ್ನನ್ನ ಖಂಡಿತಾ ಕೇಳ್ತಿರಲಿಲ್ಲ, ಭುಜಂಗ ಒಪ್ತಾರಾ?"

"ಇದು ಅವರದ್ದೇ ಸಲಹೆ, ರಾಜೀವನ ಮುಲಾಜು ಇಲ್ದಿದ್ರೆ ನಾವಿಬ್ರೂ ಹಾಯಾಗಿರಬಹುದು ಅಲ್ವಾ?.."

"ಆದರೆ ಹೇಮ! ಅವಳು ಹಾಯಾಗಿರುಕ್ಕೆ ಬಿಡ್ಬೇಕಲ್ಲ?"

"ಅದಕ್ಕೂ ಒಂದು ಉಪಾಯವನ್ನು ಕಂಡು ಹಿಡ್ದಿದೀನಿ ಎನ್ನುತ್ತಾ, ಹೇಮಳ ಮದುವೆ ಹಾಗೂ, ವಿದೇಶಕ್ಕೆ ಹೋಗಲಿರುವ ವಿಷಯವನ್ನು ತಿಳಿಸಿದಳು. ಈಗ್ಲೇ ಯಾರ್ಗೂ ಹೇಳ್ಬೇಡ.. ಗುಟ್ಟಾಗಿರಲಿ. ವೈದೇಹಿ ಆಂಟಿಗೆ ತಿಳಿದರೆ ರಂಪ ಆಗುತ್ತೆ.."

"ನೀನು ಏನೇ ಮಾಡು. ಈ ಜನ್ಮದಲ್ಲಿ ನನ್ನ ಹಾಗೂ ಹೇಮಳ ಉಪಕಾರವನ್ನು ಮರೆಯುವಂತಿಲ್ಲ." ಅರ್ಥಗರ್ಭಿತವಾಗಿ ಹೇಳಿದಳು.

"ಅದಕ್ಕೇ ತಾನೇ ಹಣಾನ ತರ್ತಾ ಇರೋದು.. ನಂಗೆ ಹಣ ಬೇಕಿಲ್ಲ, ಬೇಕಾಗಿರೋದು ನೆಮ್ಮದಿ ಮಾತ್ರ.."

"ನಿಜ ಏನೂಂತ ತಿಳಿದ್ರೆ ನಿನ್ನ ನೆಮ್ಮದಿ ಹಾರಿ ಹೋಗುತ್ತೆ.." ಅಂತಂದುಕೊಂಡು ಶ್ವೇತ ಮನದಲ್ಲೇ ನಕ್ಕಳು.

* * *

ಊರಿಗೆ ಹಿಂತಿರುಗಿದ ಭುಜಂಗ ಪಲ್ಲವಿಯೊಡನೆ ಹೇಳಿದ. "ನಾನು ಮತ್ತೆ ಮುಂದಿನ ವಾರ ಬೆಂಗಳೂರಿಗೆ ಹೋಗ್ಬೇಕು. ಹೇಮಾ, ಗಿರೀಶರ ಮದುವೆಯ ದಿನ ಗೊತ್ತಾಗಿದೆ."

"ಇಷ್ಟು ಬೇಗ?.. ಹಣ ಸಿಕ್ಕ ಕೂಡ್ಲೇ, ಹಣಾನ ಉಢಾಯಿಸ್ತಾ ಇದಾಳಾ?"

"ಹಾಗೆಲ್ಲ ಹಗುರವಾಗಿ ಮಾತಾಡ್ಬೇಡ ಪಲ್ಲವೀ.. ಅವಳು ಹಣಾನ ಕೇಳಿದ್ದು ನಿಜ. ಆದರೆ ಕೆಲವೇ ತಿಂಗಳುಗಳಲ್ಲಿ ಹೊರಟು ಹೋಗ್ತಾಳಲ್ಲ, ವೈಭವವಾಗಿ ಮದುವೆಯಾಗ್ತಿಲ್ಲವಂತೆ.

ಸರಳವಾಗಿ, ರಿಜಿಸ್ಟ್ರಾರರ ಆಫೀಸ್ನಲ್ಲಿ ಮದುವೆ ಅಷ್ಟೇ.. ಆಫೀಸರ್ಸ್ ಎದುರಿಗೆ...''

"ಯಾಕಂತೆ? ಅವಳ ಗಂಡನ ಮನೆಯವರಿಗೂ ಬೇಡವಾದ ಮದುವೇನಾ?''

"ಏನೋ ನಂಗೊತ್ತಿಲ್ಲ ನಾನು ಕೇಳ್ಲಿಲ್ಲ ಮದುವೆಗೆ ನಿನ್ನನ್ನು ಕರ್ಕೊಂಡ್ಬಾ ಅಂತ ಹೇಳಿದಾಳೆ.. ಬರ್ತೀಯ ತಾನೆ?''

"ಇಲ್ಲ, ನಾನು ಬರುಲ್ಲ, ನಂಗೆ ಪ್ರಯಾಣ ಅಂತಂದ್ರೇ ಬೇಜಾರು.''

"ನಿನ್ನಿಷ್ಟ ನೀನು ನಿನ್ನ ಮಗ ಇಬ್ರೂ ಹೇಗಿದೀರಿ..? ಅವಳ ಒಡಲ ಮೇಲೆ ಕೈಯಾಡಿಸಿದ.

"ಹೂಂ. ಚೆನ್ನಾಗಿದೀವಿ. ಅವನಿಗೆ ತಾಯಿ ಮೇಲೆ ಬಹಳ ಪ್ರೀತಿ. ತೊಂದರೇನೇ ಕೊಡುಲ್ಲ ಒಳ್ಳೇ ಮಗು..''

"ಹೌದು, ಕೆಟ್ಟವನು ಈ ಮಗುವಿನ ತಂದೆ..'' ಎನ್ನುತ್ತಾ ಅವಳ ತೊಡೆಯ ಮೇಲೆ ತಲೆಯನ್ನಿಟ್ಟು ಮಲಗಿದ. ಎರಡ್ದಿನದಿಂದ ನಿನ್ನನ್ನ ನೋಡದೇ, ಮಂಕಾಗಿದ್ದೆ..'' ಎಂದ.

"ನಿಜ ಹೇಳ್ತಿದೀರಾ?..''

"ನನ್ನ ಮಾತಿನ ಮೇಲೆ ನಿಂಗೆ ನಂಬಿಕೆ ಇಲ್ಲ, ನಾನು ಹೇಮಾ ಒಟ್ಟಿಗೇ ಬೆಳೆದು ದೊಡ್ಡವರಾದೆವು ನಿಜ.. ಆದರೆ ಒಂದು ದಿನವೂ ನಾನು ಅವಳೊಡನೆ ಅಯೋಗ್ಯನಂತೆ ವರ್ತಿಸಿರಲಿಲ್ಲ, ನಮ್ಮ ಮಗುವಿನ ಮೇಲಾಣೆ. ಇದು ನಿಜ.. ಏನೋ ಪುಟ್ಟಾ.. ನಿಮ್ಮಮ್ಮನಿಗೆ ನನ್ನ ಮಾತಿನ ಮೇಲೆ ನಂಬಿಕೇನೇ ಇಲ್ಲ.. ನೀನು ಬೇಗ ಹೊರಕ್ಕೆ ಬಂದು ಇವಳಿಗೆ ತಿಳುವಳಿಕೆ ಹೇಳ್ಬೇಕು.. ತಿಳೀತಾ!.. ಬಸಿರ ಬಳಿಗೆ ತುಟಿಗಳನ್ನು ಒಯ್ದು

"ಶ್ವೇತಾ ಚಿದಾನಂದನ ಮಗುವಿಗೆ ತಾಯಿಯಾಗ್ತಿದಾಳೆ. ಆದರೆ ಅವಳಿಗೆ ಅವನ ಮೇಲೆ ಪ್ರೀತೀನೇ ಇಲ್ಲ..'' ಅವನ ತಲೆಗೂದಲಲ್ಲಿ ಕೈಯಾಡಿಸುತ್ತಾ ನುಡಿದಳು.

"ಪಾಪ ಬಡಪಾಯಿ ಚಿದಾನಂದ.. ಮೋಸ ಹೋದ.. ಶ್ವೇತಾ ಅಂಥೋಳು ಅನ್ನೋ ಅನುಮಾನ ನಂಗೆ ಇತ್ತು. ಆದರೆ ಚಿದಾನಂದ ತಪ್ಪು ಮಾಡ್ದ ಅಲ್ವಾ?''

"ಚಿದಾನಂದನಿಗೆ ಬೇರೆ ಮನೇನ ಗೊತ್ತು ಮಾಡ್ಕೊಡಿ.. ನಿಮ್ಮ ಅತ್ತೆ ಮನೇಲಿ ಇರೋದು ಕಷ್ಟ ಅಲ್ವಾ?''

"ನಾನೂ ಅದನ್ನೇ ಯೋಚಿಸಿದ್ದೆ ಆದರೆ..?''

"ನಾನು ಹಣಾನ ಕೊಡ್ತೀನಿ.. ನೀವು ಯಾಕೆ ಬೇಡಾಂತ ಹೇಳ್ತೀರಿ !''

"ಬೇಡ, ಎಲ್ರಿಗೂ ನೀನ್ಯಾಕೆ ಕೊಡ್ಬೇಕು. ಅದು ನಿನ್ನ ಹಣ.. ನಂಗಿಷ್ಟವಾಗುಲ್ಲ..''

"ಅದು ನನ್ನ ಹಣ ಅಲ್ಲ, ರಾಜೀವನ ಹಣ. ಅದರ ಮೇಲೆ ನನಗೆ ಯಾವ ಹಕ್ಕೂ ಇಲ್ಲ, ಆದರಿಂದ ನಂಗೆ ನೆಮ್ಮದಿ ಇಲ್ಲ..'' ಭುಜಂಗ ನಕ್ಕ.

"ಹಣ ಇದ್ರೂ ನೆಮ್ಮದಿ ಇಲ್ಲ ಅಂತ ಅಂತೀಯಲ್ಲ ಪಲ್ಲವೀ.. ವಿಚಿತ್ರ..''

"ಹೌದು..ಹಣದಿಂದ, ಪ್ರೀತಿ, ವಿಶ್ವಾಸ, ನೆಮ್ಮದಿ, ಸಂಬಂಧ ಯಾವುದನ್ನೂ ಕೊಂಡುಕೊಳ್ಳೋಕೆ ಆಗುಲ್ಲ. ಈಗ ನನಗೆ ನಿಮ್ಮ ಪ್ರೀತಿ ಮುಖ್ಯ. ಮಗುವಿನ ಆರೈಕೆ ಮುಖ್ಯ.. ಬೇರೆ ಏನೂ ಬೇಡ.. ಬೇರೆ ಯಾವ ಅಗತ್ಯವೂ ಇಲ್ಲ"

"ಸರಿ ನಿನ್ನಿಷ್ಟ ಆದರೆ ಎಲ್ಲವನ್ನೂ ದಾನ ಮಾಡಿ ಬಿಡ್ಬೇಡ.. ನಿನಗೂ ಸ್ವಲ್ಪ ಇಟ್ಕೋ.. ನಿನಗೂ ಅಧಿಕಾರವಿದೆ.. ನಿಮ್ಮ ತಂದೆಯ ಕಡೆಯಿಂದ ಬರಬೇಕಾದದ್ದು."

"ಅದನ್ನು ನಿಮಗೆ ಕೊಟ್ಟು ಬಿಡ್ತೀನಿ.. ನಮ್ಮಿಬ್ಬರ ಮದುವೆಯ ಖರ್ಚನ್ನು ನೀವೇ ಮಾಡಿ ಬಿಟ್ರಿ.. ಅದು ನನ್ನ ಕೊರಿಯುತ್ತೆ.."

"ವರದಕ್ಷಿಣೆ, ವರೋಪಚಾರ ಯಾವುದೂ ನನಗೆ ಬೇಕಿರಲಿಲ್ಲ."

"ಹೇಮನ್ನ ಮದುವೆಯಾಗಿದ್ದೆದ್ರೆ, ಅವಳ ಆಸ್ತಿ ಎಲ್ಲಾ ನಿಮಗೆ ಸಿಕ್ತಿತ್ತು ಅಲ್ವಾ?"

"ನಾನು ಮನೆ ಅಳಿಯನಾಗ್ತಿದ್ದುದ್ದು ನಿಜ. ಆದರೆ ಆಸ್ತಿ ಎಲ್ಲಾ ಹೇಮಳ ಹೆಸರಿನಲ್ಲೇ ಇರ್ತಿತ್ತು. ನನಗೆ ನಮ್ಮದೇ ಬೇಕಾದಷ್ಟಿದೆ. ನನಗೆ ದುರಾಸೆ ಇಲ್ಲ, ನನ್ನನ್ನ ಏನು ಅಂತ ತಿಳ್ದಿದೀಯ ನೀನು...? ಹೇಮನ್ನ ನಾನು ಮದುವೆ ಆಗದಿದ್ರೇನಂತೆ! ನಾನು ಅವರಿಬ್ಬರಿಗೂ ಈಗಲೂ ಮನೆ ಮಗನಂತೆ.. ಅವರಿಬ್ಬರ ಜವಾಬ್ದಾರಿ ನನ್ನ ಮೇಲಿದೆ.. ಈ ವಿಷಯದಲ್ಲಿ ಮಾತ್ರ ನೀನು ಅಡ್ಡ ಬರ್ಬೇಡ.." ಅವನು ತೋರು ಬೆರಳನ್ನು ತೋರಿ ನುಡಿದಾಗ ಅವಳು ಕಿಸಕ್ಕನೆ ನಕ್ಕು ಆ ಬೆರಳನ್ನು ಹಿಡಿದಳು.

"ಆಯ್ತು. ಅವರ ಬಗ್ಗೆ ನಾನು ಏನನ್ನೂ ಆಡುಲ್ಲ.. ಕೆಲವು ತಿಂಗಳು ಅವರ ಮನೆಯಲ್ಲಿ ಅವರ ಮಗಳಂತೆ ಇದೀನಿ. ಅದಕ್ಕೆ ಚಿರಋಣಿಯಾಗಿರ್ಬೇಕು ನಾನು."

"ಹಾಗೇ ಮಂದಾಕಿನಿಯ ಬಗ್ಗೆಯೂ ಈ ವಿಶ್ವಾಸವನ್ನಿಟ್ಕೋ ಪಲ್ಲವೀ..ಅವರೂ ನಿಂಗೆ ತಾಯಿಯಂತೆ.."

"ಈ ವಿಷಯದಲ್ಲಿ ನೀವು ನಂಗೆ ಏನೂ ಹೇಳ್ಬೇಡಿ.." ಅತ್ತ ತಿರುಗಿದಳು.

"ಯಾಕೆ ಹೇಳ್ಬಾರ್ದು? ಮಂದಾಕಿನಿಯಿಂದ್ಲೇ ನೀನು ಈ ಭೂಮಿಗೆ ಬಂದದ್ದು, ನಿನಗೆ ನಾನು ಸಿಕ್ಕಿದ್ದು.. ಹೌದು ತಾನೆ?"

"ಇರಬಹುದು, ಆದರೆ ಬಾಡಿಗೆ ತಾಯಿಯ ಹೊಟ್ಟೇಲಿ ನಾನ್ಯಾಕೆ ಬೆಳೀಬೇಕಿತ್ತು..? ಅದು ನೆನಪಿಗೆ ಬಂದಾಗಲೆಲ್ಲಾ ನನಗೆ ಹಿಂಸೆ ಆಗುತ್ತೆ.. ಹುಟ್ಟಿದ್ದೇ ಸರಿಯಿಲ್ಲ."

ಈ 'ಬಾಡಿಗೆ ತಾಯಿ' ಅನ್ನೋದು ಎಷ್ಟೋ ಜನ ಮಕ್ಕಳಿಲ್ಲದ ದಂಪತಿಗಳಿಗೆ ವರವಾಗಿದೆ ಪಲ್ಲವೀ...ಅವರ ವಂಶದ ಕುಡಿಯನ್ನು ಪಡೆಯುವುದಕ್ಕೆ ಸಹಾಯಕವಾಗಿದೆ. ಇಲ್ದಿದ್ರೆ ನೀನು ಈ ಭೂಮಿ ಮೇಲೆ ಜನ್ಮ ಎತ್ತಿ ಬರೋಕೆ ಆಗ್ತಿತ್ತಾ?.."

"ಜನ್ಮ ಎತ್ತೋಕೆ ಯಾವ ರೀತಿ ಆದ್ರೂ ಸರಿ ಅಂತೀರಾ ನೀವು?.. ಇದು ತಪ್ಪು ಅಂತ ನಂಗೆ ಅನ್ನಿಸುತ್ತೆ.. ಕಾಮುಕ ಗಂಡಸರಿಗೆ ಬಲಿಯಾಗಿ, ಅತ್ಯಾಚಾರಕ್ಕೆ ಬಸಿರಾಗಿ ಮಕ್ಕಳನ್ನು ಹೆತ್ತು ಅನಾಥರನ್ನಾಗಿ ಮಾಡಿ, ಸುಮ್ಮನೇ ಪ್ರಜಾ ಸಂಖ್ಯೆಯನ್ನು ಬೆಳೆಸಿದಂತೆ.. ಇದೂ ದುರುಪಯೋಗಕ್ಕೆ

ಒಂದು ನೆಪ.. ನಾನು ಈ ವಿಧಾನವನ್ನು ದ್ವೇಷಿಸ್ತೀನಿ.''

''ಛೀ...ಇಷ್ಟು ಕಳಪೆಯಾಗಿ ಯೋಚಿಸ್ಬೇಡ. ಇದು ಅನೈತಿಕವಲ್ಲ.. ಇದಕ್ಕೆ ಸಮಾಜದ ಸಮ್ಮತಿ ಇದೆ. ಕಾನೂನಿನ ಬೆಂಬಲವಿದೆ.. ಒಂದು ಗೌರವವಿದೆ...''

''ಆದರೆ ಹಣ ತಗೊಂಡು, ಮಗೂನ ಹೆತ್ತುಕೊಡೋದು ತಪ್ಪಲ್ವಾ..? ಇದರಲ್ಲಿಸಹಾಯ ಏನ್ಬಂತು? ಇದೂ ಒಂದು ರೀತಿಯ ಮಾರಾಟ...ವ್ಯವಹಾರ..''

''ಇದರಲ್ಲಿ ಮಂದಾಕಿನಿಯ ತಪ್ಪು ಏನಿದೆ ನೀನೇ ಹೇಳು. ನಿನ್ನ ನಿಜವಾದ ತಂದೆ ತಾಯಿ ಇವರನ್ನು ಒಪ್ಪಿಸಿರಬಹುದು. ಇವರಿಗೆ ಹಣದ ಅಗತ್ಯವಿದ್ದುದನ್ನು ಅವರು ಹೀಗೆ ಉಪಯೋಗಿಸಿಕೊಂಡಿರಬಹುದು. ಇದರಿಂದ ನಿನಗೇನು ನಷ್ಟ!...ನನಗಂತೂ ಯಾವ ನಷ್ಟವಿಲ್ಲ.. ನನಗೆ ನೀನು ಸಿಕ್ಕಿದ್ದು ನನ್ನ ಅದೃಷ್ಟ ಅಂತ ಅಂದ್ಕೊಳ್ತೀನಿ.''

''ನಿಮಗೆ ನನ್ನ ತಳಮಳ ಅರ್ಥ ಆಗ್ತಿಲ್ಲ.. ಭುಜಂಗ್...''

''ಅರ್ಥವಾಗಬೇಕಾದ ಅಗತ್ಯವೂ ಇಲ್ಲ, ಒಂದು ವೇಳೆ ನಮಗೇ ಒಂದು ಮಗುವಾಗದೇ ಇದ್ದಿದ್ರೆ, ನೀನೇ ಒಬ್ಬ ಬಾಡಿಗೆ ತಾಯಿಯನ್ನು ಹುಡುಕ್ತಿದ್ದೆ.''

''ಇಲ್ಲ, ಖಂಡಿತಾ ಇಲ್ಲ.'' ಕಿರುಚಿದಳು. ನಾನು ಆತ್ಮಹತ್ಯೆ ಮಾಡ್ಕೊಂಡಿರ್ತಿದ್ದೆ ಆ ಆತಂಕ ನನ್ನನ್ನ ಎಷ್ಟು ಕಾಡಿತು ನಿಮಗೆ ಅರ್ಥವಾಗ್ತಿಲ್ಲ ಭುಜಂಗ.. ಸಧ್ಯ ದೇವರು ದೊಡ್ಡವನು.. ನನಗೆ ಆ ಕೊರತೆ ಬರ್ಲಿಲ್ಲ..''

''ಒಂದು ವೇಳೆ ನನ್ನಲ್ಲೇ ಆ ಕೊರತೆ ಇದ್ದಿದ್ರೆ...?''

''ಥೂ ಬಿಡ್ತು ಅಂತನ್ನಿ.. ನಾಲ್ಕು ಮದುವೆಯಾದ್ರೂ...ಹತ್ತಾರೂ ಮಕ್ಕಳನ್ನು ಹುಟ್ಟಿಸುವ ಸಾಮರ್ಥ್ಯ ನಿಮ್ಮಲ್ಲಿದೆ.. ನಂಗೊತ್ತು.. ಹಾಗಂತ ನೀವೇ ಹೇಳಿದ್ರಿ..''

''ನಿಂಗೆ ನನ್ನ ಪ್ರೀತಿ ಹೆಚ್ಚಾಯ್ತು. ಅದಕ್ಕೇ ಏನೇನೋ ಮಾತಾಡ್ತೀಯ.. ನಿನ್ನ ಆಸೇನ ತೀರಿಸೋಕಾದ್ರೂ, ನಾನು ಇನ್ನು ಮೂರು ಜನ ಹುಡುಗಿರಯರನ್ನ ಮದುವೆಯಾಗ್ಬೇಕು..'' ಅವಳಿಗೆ ಕಚಗುಳಿಯನ್ನಿಟ್ಟ..

''ಎಲ್ರನ್ನೂ ಒದ್ದು ಓಡಿಸ್ತೀನಿ ಅಷ್ಟೇ...ನಾಲ್ಕು ಜನ ಹೆಂಗಸರಿಂದ ಸಿಗುವಷ್ಟು ಸುಖಾನ ನಾನೊಬ್ಬೇ ಕೊಡ್ತೀನಿ.. ಆದರೆ ನೀವು ಎಂದೂ ನನಗೆ ಮೋಸ ಮಾಡಬಾರದು...'' ಅವನ ಗಲ್ಲವನ್ನು ಚಿವುಟಿದಳು.

''ಹಾಗಾದ್ರೆ.. ನಂಗೆ ಒಂದು ಡಜನ್ ಮಕ್ಕಳು ಬೇಕು. ಅದಕ್ಕೇ ನಿನ್ನ ಸಹಕಾರ ಬೇಕು.. ಇಲ್ಲ ಎನ್ನಬಾರ್ದು.'' ಹೂಂ, ಎನ್ನುತ್ತಾ ನಾಚಿ, ಅವನ ಮುಖದ ಮೇಲೆ ಬಾಗಿದಳು.

* * *

ಭುಜಂಗ ಮತ್ತೊಮ್ಮೆ ಬೆಂಗಳೂರಿಗೆ ಹೊರಟಾಗ, ಅವನ ತಾಯಿ ಸಂದೇಹದಿಂದ ಪ್ರಶ್ನಿಸಿದಳು. ''ಇದೇನೋ ಭುಜೀ.. ಮೊನ್ನೆ ಮೊನ್ನೆ ಹೋಗಿದ್ದೆ, ಏನಂಥಾ ಮಹತ್ವದ ಕೆಲಸ?.. ನಂಗೂ

ಹೇಳ್ಬಾರ್ದಾ?'' ಅಂಥಾ ಗುಟ್ಟಿನ ವಿಷಯ ಏನದು?''

``ಹೇಳ್ಬಾರ್ದು ಅಂತೇನಿಲ್ಲಮ್ಮ.. ಆದರೆ ಎಲ್ರಿಗೂ ಈಗಲೇ ತಿಳಿಯೋ ವಿಷಯ ಅಲ್ಲ ಸುಮ್ನೇ ಯಾಕೆ ಅಂಥ ತಿಳಿಸ್ಲಿಲ್ಲ ಅಷ್ಟೇ..''

``ನಿನ್ನ ಹೆಂಡತಿಯ ವಿಷಯ ಆದ್ರೆ ಹೇಳ್ಬೇಡ ಬಿಡು. ಅವಳನ್ನು ಸಾಕಿದವರು ಇಬ್ಬರೂ ಇಲ್ಲ ಅಂತಂದ್ಲು ಮಂದಾ.. ಅವಳ ಆಪ್ತರು ಅಲ್ಲಿ ಯಾರಿದಾರೆ?''

``ಅವಳ ವಿಷಯ ಅಲ್ಲಮ್ಮ.. ಹೇಮಾಳ ವಿಷಯ.. ಇಲ್ಲಿ ಬೇಡ. ಹಿತ್ತಲಿಗೆ ಹೋಗೋಣ ನಡೀ. ಅಲ್ಲಿ ಹೇಳ್ತೀನಿ...''

``ಅವಳದ್ದೇನು ವಿಷಯವೋ'' ಎನ್ನುತ್ತಾ ಅವನ ಹಿಂದೆ ನಡೆದಳು.

``ಹೇಮಾ ಮುಂದಿನ ವಾರ ರಿಜಿಸ್ಟರ್ಡ್ ಮದುವೆಯಾಗ್ತಿದಾಳೆ.. ಆದರ ತಯಾರಿ ಎಲ್ಲಾ ಅವಳದ್ದೇ.. ಅವಳಿಗೆ ಕೆಲವು ಸಹಾಯ ನಾನು ಮಾಡ್ತಿದೀನಿ.. ಸಾಕ್ಷಿಯಾಗ್ತೀನಿ..''

``ಏನೋ ಹಾಗಂದ್ರೆ! ಮದುವೇನಾ?.. ಯಾರ್ಗೂ ಗೊತ್ತಿಲ್ದ ಹಾಗೆ.. ವೈದೇಹಿಗೂ ಗೊತ್ತಿಲ್ವಾ!.. ಇದೆಂಥಾ ವ್ಯವಹಾರವೋ ಗುಟ್ಟು ಗುಟ್ಟಾಗಿ..''

``ಇಲ್ಲಮ್ಮ ಯಾರ್ಗೂ ಗೊತ್ತಿಲ್ಲ, ನೀನೂ ಅತ್ತೆಗೆ ಈಗ್ಲೇ ಹೇಳ್ಬೇಡ..''

``ನಂಗೆ ಇದು ಸರಿ ಅಂತ ಅನ್ನಿಸ್ತಿಲ್ಲ ಭುಜೀ.. ಈಗ ನಿನಗೂ ಹೆಂಡತಿ, ಬಂದಿದಾಳೆ. ತಂದೆ ಆಗ್ತಿದೀಯ.. ಇವೆಲ್ಲಾ ನಿಂಗ್ಯಾಕೆ?.. ಅವಳಿಗೆ ತಿಳುವಳಿಕೆ ಹೇಳೋದನ್ನ ಬಿಟ್ಟು ಅವಳು ಹೇಳ್ದ ಹಾಗೆ ಕೇಳ್ತೀಯಲ್ಲ.. ವೈದೇಹಿಗೆ ತಿಳಿದ್ರೆ ಸುಮ್ನೆ ಬಿಡ್ತಾಳಾ? ಇಲ್ಲಿ ಅವಳ ಎದುರಿಗೆ ನಾವು ಇರಬೇಕಾದೋರು.. ಹಂಗಿಸ್ದೇ ಬಿಡ್ತಾಳಾ?''

``ನಂಗೂ ಗೊತ್ತಮ್ಮ.. ಹೇಮಂಗೆ ತಿಳುವಳಿಕೆ ಹೇಳಿ, ಈ ಮದುವೇನ ತಪ್ಪಿಸೋದು ಎಷ್ಟು ಸರಿ ನೀನೇ ಹೇಳು. ಅತ್ತೆಗೆ ನಿಧಾನವಾಗಿ ಅವಳೇ ಹೇಳ್ತಾಳಂತೆ.. ನಾನು ಈ ಮದುವೆಗೆ ಸಾಕ್ಷಿ ಅಷ್ಟೇ.. ನಿರ್ಧಾರ ಎಲ್ಲಾ ಅವಳದ್ದೇ..''

``ವೈದೇಹಿ ನಿನ್ನನ್ನ ಏನಾದ್ರೂ ಅಂದ್ರೆ ನಾನು ಸುಮ್ನಿರಲ್ಲ ನೋಡು.. ಚಿದಾನಂದನ್ನ ಇಲ್ಲಿಗೆ ತಂದು ಸೇರಿಸಿ, ಅವನ ಮದುವೆ ಮಾಡಿಸಿದ್ದನ್ನೇ ಆಗ ಈಗ ಗೊಣಗ್ತಾ ಇರ್ತಾಳೆ.. ಚಿದಾನಂದನ ಸಂಸಾರಕ್ಕೆ ಅವಳ್ಯಾಕೆ ಮಾಡ್ಬೇಕು...''

``ಅದಕ್ಕೂ ವ್ಯವಸ್ಥೆ ಮಾಡ್ತೀನಮ್ಮ. ಅವನಿಗೆ ಬೇರೆ ಮನೇನ ಗೊತ್ತು ಮಾಡಿಕೊಡ್ತೀವಿ ಇಷ್ಟರಲ್ಲೇ...''

``ಸಮಾಜ ಸೇವೆ ಮಾಡ್ತೀನಿ ಅಂತ ಬರೆದು ಕೊಟ್ಟಿದೀಯ!.. ದಿಕ್ಕಿಲ್ಲದೋಳು ಅಂತ ಪಲ್ಲವೀನ ಮದುವೆಯಾದೆ. ಹೇಮನ ಮದುವೆಗೆ ಸಾಕ್ಷಿ ಆಗ್ತೀಯ.. ಶ್ವೇತಾ ತಾಯಿಯಾಗೋಕೆ ನೀನೇ ಕಾರಣ ಅನ್ನೋ ಥರ, ಚಿದಾನಂದನಿಗೆ ಆತುರಾತುರವಾಗಿ ಮದುವೆ ಮಾಡಿಸಿದೆ. ಅವನ ಸಂಸಾರ ಹೂಡಿಸಿ ಬೇರೆ ಕೊಡ್ಬೇಕಾ ನೀನು?''

“ಇದನ್ನೆಲ್ಲ ಆಡೋ ಸಮಯಾನೇನಮ್ಮ ಇದು.. ಇದರಲ್ಲಿ ನನ್ನ ತಪ್ಪು ಏನೂ ಇಲ್ಲ ಅಂತ ನಿಂಗೂ ಗೊತ್ತು. ಅಪ್ಪಯ್ಯಂಗೆ ತಿಳಿದ್ರೆ ರಂಪ ಆಗುತ್ತೆ. ಪಲ್ಲವಿಗೆ ಮಾತ್ರ ಗೊತ್ತು. ಆದರೆ ಅವಳನ್ನು ಕೇಳೋಕೆ ಹೋಗ್ಬೇಡ.”

“ಹೆಂಡತಿಯ ಗುಲಾಮನಾಗಿದೀಯ ನೀನು...” ಚುಡಾಯಿಸಿದಳು.

“ಅಪ್ಪನೂ ನಿನ್ನ ಗುಲಾಮ ಅಲ್ವೇನಮ್ಮ.. ನಿಂಗೆ ಹೆದರ್ತಾರೆ..”

“ಹೆದರಿಸ್ತಾರೆ ಅಷ್ಟೇ...ನೀನಾಗಿಯೇ ಅವರಿವರ ಸಮಸ್ಯೆಗಳಗೆ ಸಾಕ್ಷಿ ಆಗ್ತಿದೀಯ.. ನಿನ್ನ ಬಗ್ಗೆ ನಿನ್ನ ಸಂಸಾರದ ಬಗ್ಗೆ ಎಚ್ಚರ ಇರಲಿ.. ಪಲ್ಲವಿಗೆ ಐದು ತಿಂಗಳು ತುಂಬುತ್ತೆ. ಅವಳನ್ನು ಕರ್‍ಕೊಂಡು ಹೋಗು.. ಯಾರಾದ್ರೂ ದೊಡ್ಡ ಡಾಕ್ಟರ್‍ರ್ರು ನೋಡ್ಲಿ..”

“ಈಗ ಬೇಡಮ್ಮ.. ಚಿದಾನಂದನ ಮದುವೆ ಸಮಯದಲ್ಲಿ ಹೇಮಾನೇ ಚೆಕ್ ಮಾಡಿ ಎಲ್ಲಾ ಸರಿಯಾಗಿದೆ ಅಂತ ಹೇಳಿದಾಳೆ..”

“ಅಂದ್ಹಾಗೇ, ಶ್ವೇತಂಗೂ ಐದು ತಿಂಗಳು ತುಂಬಿರಬಹುದು. ಚಿದಾನಂದ ನನಗಿಂತ ಮೊದಲು ತಂದೆ ಆಗ್ತಾನೆ.. ಅವನಿಗೋ ಯಾವ ಅನುಕೂಲವಿಲ್ಲ. ಏಳನೇ ತಿಂಗಳಿನಲ್ಲಿ ಇಬ್ಬರಿಗೂ ಒಟ್ಟಿಗೇ ಆರತಿ ಶಾಸ್ತ್ರವನ್ನು ನಾವೇ ಮಾಡೋಣ...ತಾಯಿಯಾಗ್ತಾ ಇರೋ ಸಂಭ್ರಮ ಅವಳ ಮುಖದಲ್ಲಿ ಎದ್ದು ಕಾಣ್ತಿದೆ.. ವೈದೇಹಿಯಾಗ್ಲೀ ಮಂದಾ ಆಗ್ಲಿ ಆ ಹುಡುಗಿಯ ಬಯಕೆ ಏನೂಂತ ಕೇಳಿದ್ರೋ ಬಿಟ್ರೋ...ವಿಜಯನನ್ನು ಸರಿಯಾದ ಡಾಕ್ಟರಿಗೆ ತೋರಿಸ್ಬೇಕು. ಮದುವೆಯಾಗಿ ಐದು ವರ್ಷಗಳಾಗ್ತಾ ಬಂತು.. ಅವರ ಮನೆಯವರಿಗೆ ಯಾವ ಚಿಂತೆ ಇದ್ದಂತಿಲ್ಲ. ತನಗೆ ತೋಚಿದ್ದನ್ನು ಸ್ವಗತ ಎಂಬಂತೆ ನುಡಿದಳು.

“ಅವಳನ್ನು ಕರೆಸು.. ಒಂದೆರಡು ತಿಂಗಳು ಇಲ್ಲಿಟ್ಕೋ.. ಹೇಮಾ ಹೊರಡೋಕ್ಮುಂಚೆ ಅವಳನ್ನು ನೋಡಿ ಸಲಹೆ ನೀಡ್ಲಿ..” ಭುಜಂಗ ತನ್ನ ಆಲೋಚನೆಯನ್ನು ಸೇರಿಸಿದ.

“ಹೇಮಾ ಎಲ್ಲಿಗೆ ಹೋಗ್ತಿದಾಳೆ...?” ಭುಜಂಗ ತುಟಿ ಕಚ್ಚಿದ.

“ಅವಳ ಗಂಡನ ಮನೆಗೆ.. ಅವನು ಎಲ್ಲಿರ್ತಾನೋ.. ಅಲ್ಲಿಗೆ ಅವಳು ಹೋಗ್ತಾಳೇ ತಾನೇ..? ಜಾಣನಂತೆ ಮಾತನಾಡಿದ. ತಾಯಿ ಮತ್ತೆ ಮಗಳ ಬಗ್ಗೆ ಹೇಳಿದಳು.

“ಅದಕ್ಕೆಲ್ಲ ಖರ್ಚು ಬೀಳಬಹುದು. ಮೊದಲು ಪಲ್ಲವಿಯ ಹೆರಿಗೆ ಆಗಲಿ...ಬಾಣಂತನದ ಸಮಯದಲ್ಲಿ ಸಹಾಯಕ್ಕೆ ಬೇಕು ಅಂತ ವಿಜಯನ್ನ ಕರೆಸ್ಕೊಳ್ತೀನಿ..” ತಾಯಿಯ ಮಾತಿಗೆ ತಲೆಯಾಡಿಸಿದ. ಇಬ್ಬರೂ ಒಳ ಬಂದರು. ಹಾಲಿನಲ್ಲಿ ಮಲಗಿದ್ದ ಅಜ್ಜಿ ಎದ್ದು ಕುಳಿತಿತ್ತು.

“ಏನೋ ಅದು ಭುಜೀ.. ಗುಸು ಗುಸು ಪಿಸು ಪಿಸು ಅಂತ.. ನನ್ನ ತನಕ ಯಾವ ಮಾತು ಬರುಲ್ಲ. ಯಾತಕ್ಕೂ ಬೇಡದವಳಾಗಿ ಬಿಟ್ಟಿದೀನಿ ನಾನು” ಅಜ್ಜಿ ಗೊಣಗಿತು.

“ಹಾಗೇನಿಲ್ಲ ಅಜ್ಜಿ.. ನೀವು ಮುತ್ತಜ್ಜಿ ಆಗ್ತಿದೀರಲ್ಲ. ನಿಮ್ಮ ಕನಕಾಭಿಷೇಕದ ಬಗ್ಗೆ ಮಾತಾಡ್ತಾ ಇದ್ದೆವು.. ನಿಮಗೆಂಥಾ ಸೀರೆ ಬೇಕು ಹೇಳಿ...” ಕೇಳಿದ.

“ಕೂಸು ಹುಟ್ಟೋಕೆ ಮುಂಚೆ ಕುಲಾವಿ ಹೊಲಿಸಿದ್ರು ಅಂತ ಹೇಳ್ತಾರಲ್ಲ ಹಾಗೆ...ಮೊದಲು

ನಿನ್ನ ಹೆಂಡ್ತಿ ಗಂಡು ಮಗೂನ ಹಡೀಲಿ..ಭಾರಿ ಸೀರೇನೇ ಕೊಡಿಸೂವಂತೆ.. ಅದಿರ್ಲಿ ನಿನ್ನ ಹೆಂಡ್ತಿ ಬಸಿರಿ ಅಂತ ನಂಗೆ ಯಾರೂ ಹೇಳ್ಲೇ ಇಲ್ಲ.. ಭಾರೀ ಗುಟ್ಟು.."

"ಈಗ ಹೇಳ್ತಾ ಇದೀನಲ್ಲ ಅಜ್ಜಿ.. ಡಾಕ್ಟ್ರು ಈಗ್ಲೇ ಯಾರ್ಗೂ ತಿಳಿಸ್ಬೇಡಿ ಅಂತ ಹೇಳಿದ್ರು.. ಅದಕ್ಕೇ ಹೇಳಿರ್ಲಿಲ್ಲ ಅಷ್ಟೇ..." ತಾಯಿಯ ಕಡೆ ನೋಡಿ ನಸುನಕ್ಕ.

"ಯಾವ ಡಾಕ್ಟ್ರೋ.? ಹೇಮಾ ತಾನೇ? ಅದಕ್ಕೇನು ತಿಳಿಯುತ್ತೆ? ಮದುವೆ ಇಲ್ಲ ಗಂಡನ ಸುಖ ಗೊತ್ತಿಲ್ಲ.. ಬಸಿರು, ಹೆರಿಗೆ, ಬೇನೆ ಅಂತ ಏನೂಂತ ನನ್ನನ್ನ ಕೇಳಿದ್ರೆ ನೋಡ್ತಿದ್ದ ಹಾಗೇ ಹೇಳಿ ಬಿಡ್ತೀನಿ.." ಭುಜಂಗ ತಾಯಿಯ ಕಡೆ ನೋಡಿ ನಸುನಕ್ಕ.

"ಬಿಡಿ ಅತ್ತೇ...ಇವರೆಲ್ಲಾ ಈಗಿನ ಕಾಲ್ದೋರು. ಡಾಕ್ಟ್ರು ಹೇಳಿದ ಹಾಗೇ ಕೇಳೋರು.. ಏನು ನನ್ನ ನಿಮ್ಮ ಕಾಲ ಅಲ್ಲ ಈಗ. ಹೇಗೋ ಸುಖ ಮುಖವಾಗಿ ಹೆತ್ತರೆ ಸಾಕು.. ಮಗು ಆರೋಗ್ಯವಾಗಿದ್ದರೆ ಸರಿ..."

"ಅದ್ಸರಿ.. ಒಂದು ದಿನವಾದ್ರೂ ವಾಂತಿ ಮಾಡಿದ್ದು ಕಾಣ್ಲೆಲ್ಲ, ವಾಕರಿಸಿದ್ದು ಕೇಳಿಸ್ಲಿಲ್ಲ, ಬಯಕೆ ಅಂತ ಬಾಯಿ ಬಿಟ್ಟು ಕೇಳಿದ್ದು ತಿಳೀಲಿಲ್ಲ..ಹೊಟ್ಟೆಯಾದ್ರೂ ಮುಂದೆ ಬರುತ್ತೋ ಇಲ್ವೋ.. ಒಳ ಹೊಟ್ಟೆ ಆದ್ರೆ ಗಂಡು ಮಗೂನೇ.. ಎಲ್ಲಿ ಕರಿ ನಿನ್ನ ಹೆಂಡ್ತೀನ, ನೋಡಿ ಹೇಳ್ತೀನಿ.."

"ಅವಳು ಮನೇಲಿಲ್ಲ.. ಅವಳ ಸ್ನೇಹಿತೆ ಜೊತೇಲಿ ತಿರುಗಾಡುಕ್ಕೆ ಹೋಗಿದಾಳೆ.."

"ಬೀದೀಲಿ ಸುಮ್ನೆ ತಿರುಗ್ಬೇಡ ಅಂತ ಹೇಳು ನಿನ್ನ ಹೆಂಡ್ತಿಗೆ.. ದೃಷ್ಟಿ ತಾಗುತ್ತೆ. ಅವಳು ಚಿದಾನಂದನ ಹೆಂಡ್ತಿ ತಾನೇ.. ಮದುವೆಗೆ ಮೊದಲೇ ಬಸಿರಿ ಆದೋಳು.. ಅವಳ ಜೊತೆ ಎಂಥಾ ಸ್ನೇಹ?.."

"ಅದೆಲ್ಲಾ ನಮಗ್ಯಾಕೆ ಅತ್ತೇ.. ಅವಳು ಮೊದಲ್ನಿಂದ್ಲೂ ಪಲ್ಲವಿಯ ಗೆಳತಿ.. ಇಲ್ಲಿಗೆ ಬಂದಿದ್ದಾಗ ಏನೋ ಅವಿವೇಕ ನಡೆದು ಹೋಯ್ತು.. ಅದನ್ಯಾಕೆ ಆಡ್ಬೇಕು..?.."

"ಆಡ್ಲಿಲ್ಲ ಅಂತಂದ್ರೆ ಏನೂ? ಎಲ್ಲಾ ಮುಚ್ಚಿ ಹೋಗುತ್ತಾ?... ಹೊಟ್ಟೆ ಮುಂದಕ್ಕೇ ಬೆಳೀದೇ ಇರುತ್ತಾ?... ಊರಿಗೆಲ್ಲಾ ಗೊತ್ತಾಗುತ್ತೆ....ಅವರೆಲ್ಲಾ ಆಡಿಕೊಳ್ಳುಲ್ವಾ?.."

"ನಿಮ್ಮ ಹತ್ರ ಮಾತಾಡೋದೇ ತಪ್ಪು.." ಎಂದು ಗೊಣಗಿ ಸಾವಿತ್ರಿ ಅಲ್ಲಿಂದ ಸರಿದಿದ್ದಳು. ಪಲ್ಲವಿ, ಶ್ವೇತಾ ಇಬ್ಬರೂ ವಾಕಿಂಗ್ ಮುಗಿಸಿ ಒಳಕ್ಕೆ ಬಂದಿದ್ದರು. ಕಿಲ ಕಿಲನೆ ನಗುತ್ತಾ ಒಳ ಬಂದವರು, ಅಲ್ಲಿ ಭುಜಂಗ ಇದ್ದುದನ್ನು ಕಂಡು ನಗುವನ್ನು ನಿಲ್ಲಿಸಿದರು.

"ವಾಕಿಂಗ್ ಮುಗೀತಾ? ಎಷ್ಟು ದೂರ ಹೋಗಿದ್ರಿ?" ಭುಜಂಗ ಪ್ರಶ್ನಿಸಿದ.

"ಹೆಚ್ಚು ದೂರ ಹೋಗ್ಲಿಲ್ಲ, ಸುಸ್ತಾಯ್ತು ಅಂತ ಹಾಗೇ ವಾಪಸ್ಸು ಬಂದೆವು. ಶ್ವೇತಾ ನುಡಿದಳು. ಅಜ್ಜಿ ಕಣ್ಣುಗಳನ್ನು ಕಿರಿದು ಮಾಡಿ ನೋಡಿತು.

"ಯಾರೇ...ಭುಜಿಯ ಹೇಂಡ್ತೀನಾ!.. ಹೊತ್ತಿಲ್ಲದ ಹೊತ್ನಲ್ಲಿ ಹೊರಕ್ಕೆ ಏಕೆ ಹೋಗಿದ್ದೆ. ಹೊರಗಿನ ಗಾಳಿ ಚೆನ್ನಾಗಿರುಲ್ಲ.. ಹಡೆಯುವವರ್ಗೂ ಮನೆಯೊಳ್ಗೇ ಇರು.. ಅಲ್ಲಿ ಇಲ್ಲಿ ತಿರುಗ್ಬೇಡ..." ಶ್ವೇತಾ ಅಜ್ಜಿಯ ಕಡೆ ತಿರುಗಿದಳು.

"ಹಾಗಲ್ಲ ಅಜ್ಜಿ..ವಾಕಿಂಗ್ ಮಾಡ್ಬೇಕು ಅಂತ ಡಾಕ್ಟ್ರು ಹೇಳಿದಾರೆ..."

"ಹೇಮಾ ತಾನೇ!... ಅವಳಿಗೇನು ಅನುಭವ ಇದೆ?...ನನಗೆ ನಿನ್ನ ಮೂರರಷ್ಟು ವಯಸ್ಸಾಗಿದೆ.. ನೀನು ಏನು ಬೇಕಾದ್ರೂ ಮಾಡ್ಕೋ.. ನಮ್ಮ ಮನೆಯ ಹುಡುಗಿಯ ತಲೆಯನ್ನು ಕೆಡಿಸ್ಬೇಡ.." ಶ್ವೇತಾಳ ಮುಖ ಕಪ್ಪಿಟ್ಟಿತು. ಭುಜಂಗ ಪಲ್ಲವಿಗೆ ಸಂಜ್ಞೆ ಮಾಡಿದ. ಇಬ್ಬರೂ ಅಲ್ಲಿಂದ ಹೊರ ನಡೆದರು.

"ಅಜ್ಜಿ ಹಾಗೆಲ್ಲಾ ಮಾತಾಡ್ಬೇಡಿ...ಅವರಿಗೆ ಬೇಜರಾಗುತ್ತೆ.."

"ತಿಳುವಳಿಕೆ ಹೇಳ್ತೀನಿ. ಅದಕ್ಕೆಲ್ಲ ಬೇಸರಿಸಿಕೊಂಡ್ರೆ ಅವರಿಗೇ ನಷ್ಟ..ನೀನು, ಆ ಹುಡುಗಿಯ ಜೊತೆ ಓಡಾಡುಕ್ಕೆ ನಿನ್ನ ಹೆಂಡ್ತೀನ ಬಿಡ್ಬೇಡ.. ಈ ಊರಿನ ಜನರ ಕಣ್ಣು ಸರಿ ಇಲ್ಲ.. ಏನಾದ್ರೂ ಹೆಚ್ಚು ಕಡಿಮೆ ಆದ್ರೆ ನಷ್ಟ ಆಗೋದು ನಿಂಗೆ...ಆ ಹುಡುಗಿ ತಲೆ ಹರಟೆ.. ಅದು ಮರ್ಯಾದಸ್ಥರ ಲಕ್ಷಣ ಅಲ್ಲ.." ಭುಜಂಗ ಮಾತನ್ನು ಮುಂದುವರೆಸುವ ಇಚ್ಛೆ ಇಲ್ಲದೆ ಮುಂಬಾಗಿಲಿಗೆ ಬಂದ. ಅಲ್ಲಿ ಶ್ವೇತಾ, ಪಲ್ಲವಿ ಇಬ್ಬರೂ ಇರಲಿಲ್ಲ. ಅವರಿಬ್ಬರಿಗೆ ಅಜ್ಜಿಯ ಮಾತು ಕೇಳಿಸಿರಲಿಲ್ಲ. ನೆಮ್ಮದಿಯ ಉಸಿರನ್ನು ಬಿಟ್ಟ.

* * *

ಹಾಸ್ಟೆಲ್ಲಿನ ವಿಸಿಟರ್ಸ್ ರೂಂನಲ್ಲಿ ಭುಜಂಗನಿಗಾಗಿ ಕಾಯುತ್ತಾ ಕುಳಿತಿದ್ದ ಹೇಮಾಳ ಮುಖ ಅವನನ್ನು ಕಂಡೊಡನೆ ಅರಳಿತು. ಅವಳ ಬಳಿಗೆ ಹಾರಿ ಬಂದಳು. ಅವನ ಕೈ ಹಿಡಿದಳು. "ಸಧ್ಯ ಬಂದ್ಯಲ್ಲಾ, ನೀನೂ ಎಲ್ಲಿ ಕೈ ಕೊಡ್ತೀಯೋ ಅಂತ ಹೆದರಿದ್ದೆ ನಾನು..."

"ಬರ್ತೀನಿ ಅಂತ ಹೇಳಿದ್ನಲ್ಲ, ಆತಂಕ ಯಾಕೆ?.."

"ಒಬ್ಬನೇ ಬಂದ್ಯಾ! ಪಲ್ಲವಿ ಬರ್ಲಿಲ್ವಾ!.."

"ಇಲ್ಲ, ಆಯಾಸ ಆಗುತ್ತೆ, ಬೇಡಾಂತ ಅಮ್ಮ ಅಂದ್ಲು."

"ಅಮ್ಮ ಹೇಗಿದ್ಲು? ಭುಜೀ..." ಅವಳ ಗಂಟಲು ಕಟ್ಟಿತ್ತು.

"ಯಥಾ ಪ್ರಕಾರ...ಈಗ ಸ್ವಲ್ಪ ಕೆಲಸ ಜಾಸ್ತಿ. ಚಿದಾನಂದ, ಅವನ ಹೆಂಡ್ತಿ, ಮಂದಾಕಿನಿ ಅತ್ತೆ ಎಲ್ಲಾ ಇದಾರಲ್ಲ."

"ಶ್ವೇತಾ ಹೇಗಿದಾಳೇ?.. ಅಮ್ಮ ಚೆನ್ನಾಗಿ ನೋಡ್ಕೋತಿದಾಳೆ ತಾನೆ?.."

"ಹೂಂ, ನೋಡ್ಕೋಳ್ದೆ ಇರ್ತಾರಾ?.. ಆದರೆ ನಾನು ಅದನ್ನೆಲ್ಲ ಕೇಳುಲ್ಲ.. ಅಮ್ಮ ಮುಂದಿನ ತಿಂಗಳು, ಅವಳಿಗೂ ಪಲ್ಲವಿಗೂ ಆರತಿ ಶಾಸ್ತ್ರ ಮಾಡ್ಬೇಕು ಅಂತ ಹೇಳ್ತಿದ್ಲು, ನೀನು ಬರ್ತೀಯ ತಾನೆ?.."

"ಹುಂ, ನೋಡೋಣ, ವೀಸಾ, ಟಿಕೆಟ್ ಎಲ್ಲಾ ಆಗಿಲ್ಲದಿದ್ರೆ ಬರಬಹುದು. ನಿಂದು ತಿಂಡಿ ಆಯ್ತಾ? ಹೋಟೆಲ್ಲಿಗೆ ಹೋಗೋಣ್ವಾ!"

"ಹುಂ, ನನ್ನ ತಿಂಡಿ ಕಾಫಿ ಎಲ್ಲಾ ಆಯ್ತು.. ಡಾ॥ ಗಿರೀಶ್ ಎಲ್ಲಿ ಇಳಿದುಕೊಂಡಿದಾರೆ?..

ರಿಜಿಸ್ಟ್ರಾರ್ ಆಫೀಸ್ಗೆ ಎಷ್ಟು ಹೊತ್ತಿಗೆ ಹೋಗೋಣ.?.."

"ಮೊದಲು ಗಿರೀಶ್ ಇಳಿದುಕೊಂಡಿರುವ ಹೋಟೆಲ್ಲಿಗೆ ಹೋಗೋಣ. ಅಲ್ಲಿಂದ ರಿಜಿಸ್ಟ್ರಾರ್ ಆಫೀಸಿಗೆ ಹೋಗೋಣ. ಗಿರೀಶನ ಫ್ರೆಂಡ್ಸ್ ಒಂದಿಬ್ಬರು ಬರ್ತಾರೆ. ನನ್ನ ಕಡೆಯಿಂದ ನೀನೊಬ್ಬನೇ.." ಮುಖ ಮುದುಡಿತ್ತು.

"ಗ್ರ್ಯಾಂಡಾಗಿ ಮದುವೇನೇ ಆಗಬಹುದಾಗಿತ್ತಲ್ಲಾ ಹೇಮಾ! ಯಾಕೆ ಹೀಗೆ ಮಾಡ್ದೆ?.. ನನಗಾದ್ರೂ ಹೇಳಿದ್ದಿದ್ರೆ ಎಲ್ಲಾ ವ್ಯವಸ್ಥೆ ಮಾಡ್ತಿದ್ದೆ."

"ನಮ್ಮಿಬ್ಬರ ಮನೆಯವರಿಗೆ ಬೇಡವಾದ ಮದುವೆ ಇದು.."

"ಅಂದ್ರೇ...ನಿನ್ನ ಅತ್ತೆ ಮಾವ ನಿನ್ನನ್ನು ಒಪ್ಕೊಂಡಿಲ್ವಾ?.."

"ಇಲ್ಲ, ಅವರಿಗೆ ಸೂಟ್‌ಕೇಸ್ ತುಂಬಾ ಹಣವನ್ನು ವರದಕ್ಷಿಣೆಯಾಗಿ ತರುವ ಹುಡುಗಿ ಬೇಕಾಗಿದ್ದಳು. ಗಿರೀಶ್ ನನ್ನನ್ನ ಮೆಚ್ಚಿದರು. ಅದು ಅವರಿಗೆ ಸರಿ ಹೋಗಲಿಲ್ಲ. ಈಗ ನಮಗೆ ಯಾರೂ ಇಲ್ಲ. ನನ್ನ ಆಪ್ತ ನೀನೊಬ್ಬನೇ.. ಹೊರಡೋಣ್ವಾ?"

"ಹೀಗೇ ಬರ್ತೀಯಾ ಹೇಮಾ!.. ಮದುಮಗಳ ಅಲಂಕಾರ?.."

ಹೇಮಾ ವಿಚಿತ್ರವಾಗಿ ನಕ್ಕಳು. "ಸಾಂಪ್ರದಾಯಿಕವಾದ ಮದುವೇಲಿ ನಾನು ಮದುಮಗಳು. ಅಲಂಕಾರ ಬೇಕೇ ಬೇಕು. ಇಲ್ಲಿ ಸಿವಿಲ್ ಮ್ಯಾರೇಜ್‌ಗೆ ಅದರ ಅವಶ್ಯಕತೆ ಇಲ್ಲ. ಯಾರಾದ್ರೂ ಹಾರ ತಂದಿರ್ತಾರೆ.. ಬದಲಾಯಿಸಿಕೊಂಡರಾಯ್ತು.." ಪೆಚ್ಚು ನಗೆ ನಕ್ಕಳು.

"ನಿಂಗೆ ಉತ್ಸಾಹವೇ ಇಲ್ಲವಲ್ಲೇ ಹೇಮಾ?.."

"ಅಮ್ಮ ಅಪ್ಪನ ನೆನಪಾಗಿ, ಬೇಸರ ಆಯ್ತು ಅಷ್ಟೇ..." ಎಂದು ಹೇಳಿ, ಕಾರಿಡಾರಿನಲ್ಲಿ ಅವನೊಂದಿಗೆ ಹೆಜ್ಜೆ ಹಾಕಿದಳು. ಇಬ್ಬರೂ ಒಂದು ಟ್ಯಾಕ್ಸಿಯನ್ನೇರಿ, ಗಿರೀಶ ಉಳಿದುಕೊಂಡಿದ್ದ ಹೋಟೆಲ್ಲಿಗೆ ಬಂದರು. ಅಲ್ಲಿ ಡಾ|| ಗಿರೀಶ್ ತನ್ನ ಕೆಲವರು ಸ್ನೇಹಿತರೊಡನೆ ಸಿದ್ಧನಾಗಿ ಕುಳಿತಿದ್ದ ಹೇಮಾ ಭುಜಂಗನನ್ನೂ ತನ್ನ ಭಾವೀ ಪತಿಗೆ ಪರಿಚಯ ಮಾಡಿಕೊಟ್ಟಳು.

"ಇವನು ಭುಜಂಗ್.. ನನ್ನ ಕಸಿನ್..." ಗಿರೀಶ್ ನೀಡಿದ ಕೈಯನ್ನು ಹಿಡಿದು ಕುಲುಕಿ 'ಹಲೋ' ಎಂದ.

ಇವನು ಡಾ||ಗಿರೀಶ್...ನನ್ನ ಪತಿಯಾಗುವವನು ಎಂದು ಪರಿಚಯ ಮಾಡಿದಳು. ಭುಜಂಗ ಹಿಡಿದ ಕೈಯನ್ನು ಸಡಲಿಸಿದ. ಅವನ ಕೈ ಸಣ್ಣಗೆ ನಡುಗಿತು. ತನ್ನ ಎದುರಿಗೆ ಕುಳಿತಿದ್ದ ಯುವಕನನ್ನೇ ಮಿಕಿ ಮಿಕಿ ನೋಡಿದ. ಸುಂದರ ತರುಣ. ವಿದ್ಯಾವಂತನ ಕಳೆ. ಸೊಗಸಾದ ಮುಗುಳ್ನಗೆ. ಆದರೆ...? ಕುಳಿತಿದ್ದ ವೀಲ್‌ಚೇರ್ ಕಡೆ ದೃಷ್ಟಿ ನಿಂತಿತು. ಹೇಮಾಳ ಕಡೆ ಕಳ್ಳ ನೋಟ ಬೀರಿದ. ಅವಳು ಅವನ ದೃಷ್ಟಿಯನ್ನು ತಪ್ಪಿಸಿದಳು.

ಅಲ್ಲಿಂದ ಎಲ್ಲರೂ ಸಬ್‌ರಿಜಿಸ್ಟ್ರಾರ್‌ರ ಆಫೀಸಿನ ಕಡೆಗೆ ಟ್ಯಾಕ್ಸಿಗಳಲ್ಲಿ ಹೊರಟರು. ಕೆಲವೇ ಗಂಟೆಗಳಲ್ಲಿ ಹೇಮ, ಗಿರೀಶ್ ದಂಪತಿಗಳಾಗಿದ್ದರು. ಆಫೀಸರರ ಮುಂದೆ ಇದ್ದ ದಪ್ಪ ಪುಸ್ತಕದಲ್ಲಿ ಇಬ್ಬರೂ ಸಹಿ ಹಾಕಿದ್ದರು. ಸಾಕ್ಷಿಗಳಾಗಿ, ಭುಜಂಗ ಹಾಗೂ, ಗಿರೀಶನ ಸ್ನೇಹಿತನೊಬ್ಬ ಸಹಿ

ಹಾಕಿದ್ದರು. ಸ್ನೇಹಿತನೊಬ್ಬ ತಂದಿದ್ದ ಹಾರಗಳನ್ನು ದಂಪತಿಗಳು ಪರಸ್ಪರ ಹಾಕಿಕೊಂಡ. ಸ್ನೇಹಿತರು ಶುಭವನ್ನು ಕೋರಿದರು. ಎಲ್ಲರಿಗೂ ಸಹಿಯನ್ನು ಹಂಚಿದರು. ಎಲ್ಲರೂ ಅಲ್ಲಿಂದ ಸೀದಾ, ಸಮೀಪದಲ್ಲಿದ್ದ ಒಂದು ಭಾರಿ ಹೋಟೆಲ್ಲಿಗೆ ಬಂದರು. ಭುಜಂಗ ಅಗತ್ಯಕ್ಕಿಂತ ಹೆಚ್ಚಿನ ಮೌನಿಯಾಗಿದ್ದ. ಹೇಮಾ ಗಂಭೀರಳಾಗಿದ್ದಳು. ಭುಜಂಗ ಪ್ರಶ್ನಿಸದೇ ಬಿಡುವವನಲ್ಲ ಎಂದು ತಿಳಿದಿತ್ತು. ಭುಜಂಗ ಕಸಿವಿಸಿಯಿಂದ ಆಗಾಗ್ಗೆ ಅವಳ ಕಡೆ ನೋಡುತ್ತಿದ್ದ. ಎಲ್ಲರು ಸೊಗಸಾದ ಊಟವನ್ನು ಮಾಡುತ್ತಿದ್ದರು.

ಹೇಮಾಳ ಮುಖದಲ್ಲಿ ಯಾವ ವ್ಯಥೆಯಾಗಲೀ, ಕೊರಗಾಗಲಿ ಇಲ್ಲದಿರುವುದನ್ನು ಅವನು ಗಮನಿಸಿದ. ನಗು ನಗುತ್ತಾ ಗಿರೀಶನೊಡನೆ ಮಾತನ್ನಾಡುತ್ತಿದ್ದಳು. ಇದು ಮುಖವಾಡವಿರಬಹುದೇ ಎಂಬ ಅನುಮಾನ ಕಾಡದೇ ಇರಲಿಲ್ಲ. ಊಟದ ನಂತರ ಸ್ನೇಹಿತರೆಲ್ಲರೂ ಉಡುಗೊರೆಗಳನ್ನು ನೀಡಿದರು. ಭುಜಂಗ ಬೇಕೆಂದೇ ತಾನು ತಂದಿದ್ದ ಉಡುಗೊರೆಗಳನ್ನು ಅವಳಿಗೆ ಕೊಡಲಿಲ್ಲ. ಅವನ ಮನದ ತುಮುಲವನ್ನು ಗಮನಿಸಿದ ಹೇಮಾ ಭುಜಂಗನ ಬಳಿಗೆ ಬಂದಳು.

"ಈಗ ನಾನು ನಿನ್ನ ಜೊತೇಲಿ, ನೀನು ಇಳಿದುಕೊಂಡಿರುವ ಹೋಟೆಲ್ಲಿಗೆ ಬರ್ತೀನಿ. ನಂಗೊತ್ತು, ನೀನು ನನ್ನನ್ನು ಕೇಳೋ ವಿಷಯ ಬಹಳ ಇದೆ ಅಂತ..." ಅವಳ ನಗುವಿಗೆ ಇವನು ನಗುವನ್ನು ಸೇರಿಸಲಿಲ್ಲ. ಸುಮ್ಮನೆ ನೋಡಿದ. ಊಟದ ನಂತರ ಸ್ನೇಹಿತರೊಂದಿಗೆ ಗಿರೀಶ ತನ್ನ ಹೋಟೆಲ್ಲಿಗೆ ಹೊರಟ. ಹೇಮಾ ಭುಜಂಗನೊಂದಿಗೆ ಹೊರಟಳು. ರೂಮಿಗೆ ಬರುವವರೆಗೂ ಇಬ್ಬರೂ ಮಾತನಾಡಲಿಲ್ಲ. ಒಳಗೆ ಬಂದವಳು, ಮಂಚದ ಮೇಲೆ ಕಾಲು ಚಾಚಿ ಕುಳಿತಳು. ಭುಜಂಗ ಎದುರಿಗಿದ್ದ ಕುರ್ಚಿಯಲ್ಲಿ ಕುಳಿತ.

"ನಿನ್ನ ತಲೆ ತುಂಬಾ ಪ್ರಶ್ನೆಗಳೇ ತುಂಬಿಕೊಂಡಿವೆ. ಆದರೂ ಮೌನವಾಗಿದೀಯಲ್ಲ" ನಗುತ್ತಾ ಪ್ರಶ್ನಿಸಿದಳು."

"ನನ್ನ ಬಾಯಿಗೆ ಹೊಲಿಗೆ ಹಾಕಿದಂತಾಗಿದೆ. ನೀನು ಇಂಥಾ ಶಾಕ್ ಕೊಡ್ತೀಯ ಅಂತ ನಾನಂದ್ಕೊಂಡಿರಲಿಲ್ಲ. ಇದೆಂಥಾ ಆಯ್ಕೆ ನಿಂದು? ಈ ಆದರ್ಶದ ನಾಟಕ ಯಾಕೆ?.. ನೀನು ಸುಖವಾಗಿರ್ತೀಯಾ?" ಗಂಭೀರವಾಗಿ ಪ್ರಶ್ನಿಸಿದ.

"ಹೌದು, ಇದು ನನ್ನ ಆಯ್ಕೆ. ನಾನು ಸುಖವಾಗಿರಲು ಪ್ರಯತ್ನಿಸ್ತೀನಿ.."

"ಏನು ಈ ಮಾತಿನ ಅರ್ಥ? ಇಂಥಾ ನಿರ್ಧಾರ ಯಾಕೋ?"

"ಗಿರೀಶ್ ಹೀಗಿರಲಿಲ್ಲ. ಕೆಲವಾರು ತಿಂಗಳ ಹಿಂದೆ, ಡೆಲ್ಲಿಯಲ್ಲಿ ಆದ ಬಾಂಬ್ ಸ್ಫೋಟದ ಸಮಯದಲ್ಲಿ ಕಾಲುಗಳು ನಿಷ್ಕ್ರಿಯಗೊಂಡವು. ನಾನು ಅವರನ್ನು ಪ್ರೀತಿಸುತ್ತಿದ್ದೆ. ಹೇಗೆ ತಿರಸ್ಕರಿಸಲಿ..? ಅವನ ದೃಷ್ಟಿಯಲ್ಲಿ ಚೀಪ್ ಆಗಲು ನನಗಿಷ್ಟವಿಲ್ಲ."

"ಈ ಪ್ರೀತಿಗಾಗಿ ನಿನ್ನ ಸ್ವಂತ ಸುಖವನ್ನು ಬಲಿಕೊಡ್ತೀಯಾ?"

"ಈಗ ಇವನಿಗೆ ನನ್ನ ಪ್ರೀತಿಯ ಅವಶ್ಯಕತೆ ಇದೆ. ಇವನ ತಂದೆ ತಾಯಿ ಇವನನ್ನು ನನಗಾಗಿ ಬಿಟ್ಟು ಕೊಟ್ಟಿದಾರೆ.."

"ಅಂದರೇ.. ಈ ಕಾರಣದಿಂದ ಅವರು ಮಗನನ್ನು ದೂರ ಮಾಡ್ಕೊಂಡಿದಾರಾ?"

"ಲಕ್ಷಗಟ್ಟಳೆ ವರದಕ್ಷಿಣೆ ಸಿಗುತ್ತದೆಂಬ ಅಹಂ ಇದ್ದ ಸಮಯದಲ್ಲಿ ನಮ್ಮಿಬ್ಬರ ಮದುವೆಯನ್ನು ವಿರೋಧಿಸಿದ್ದರು. ಈಗ ಯಾವ ಹುಡುಗಿಯೂ ಇವನನ್ನು ಮದುವೆಯಾಗಲು ಸಿದ್ಧಳಿಲ್ಲ ಎನ್ನುವ ಸತ್ಯದ ಅರಿವಾಗಿದೆ.."

"ಅದು ಅವರ ಸ್ವಾರ್ಥ.. ಅದಕ್ಕೇ ನೀನ್ಯಾಕೆ ಬಲಿ ಆಗ್ಬೇಕು?"

"ಹೀಗೆಲ್ಲಾ ಮಾತಾಡ್ಬೇಡ ಭುಜಂಗ. ನಂಗೆ ಹಿಂಸೆ ಆಗುತ್ತೆ. ಇವನ ಅಸಹಾಯಕತೆಯನ್ನು ಧಿಕ್ಕರಿಸುವಷ್ಟು ನೀಚತನ ನನಗಿಲ್ಲ."

"ಅತ್ತೆ ಮಾವಂಗೆ ತಿಳಿದ್ರೆ ಅವರ ಹೃದಯ ಒಡೆದು ಹೋಗುತ್ತಲ್ಲೇ ಹೇಮಾ.."

"ಗೊತ್ತು, ಈ ಮೊದಲು ಒಂದಲ್ಲ ಒಂದು ದಿನ ಅವರುಗಳನ್ನು ಒಪ್ಪಿಸಬಹುದೆಂಬ ನಂಬಿಕೆ ನನಗಿತ್ತು.. ಈಗ...? ಹಾಗಂತ ಗಿರೀಶಂಗೆ ವಂಚನೆ ಮಾಡುಕ್ಕಾಗ್ತಿತ್ತಾ? ವಿದೇಶದಲ್ಲಿ ತಕ್ಕ ಚಿಕಿತ್ಸೆಯನ್ನು ಕೊಡಿಸುವ ಆಸೆಯನ್ನು ಇಟ್ಟುಕ್ಕೊಂಡಿದೀನಿ. ನನ್ನ ಆಸೆ ನೆರವೇರಲಿ ಅಂತ ಹಾರೈಸು.."

"ನನ್ನ ಹಾರೈಕೆ ಸದಾ ನಿನ್ನ ಮೇಲಿರುತ್ತೆ ಹೇಮಾ...ಆದರೆ ಎಲ್ಲಾ ಸರಿ ಹೋಗುವವರೆಗೂ ಅತ್ತೆ ಮಾವಂಗೆ ತಿಳಿಸೋದು ಹೇಗೆ?"

"ಗಿರೀಶ್‌ಗೆ ಗುಣವಾಗಿ, ನಡೆದಾಡುವಂತೆ ಆಗುವವರೆಗೂ ನಾನು ವಾಪಸ್ಸು ಬರುವುದಿಲ್ಲ."

"ಹೀಗೆಲ್ಲಾ ಮಾತಾಡ್ಬೇಡ. ಏನೇ ಬಂದರೂ ಎದುರಿಸ್ಬೇಕು. ಅತ್ತೆ ಮಾವ ಬೈದರೂ ಆಶೀರ್ವಾದ ಅಂತ ಅಂದ್ಕೋಬೇಕು. ಹೊರಡೋಕೆ ಮುಂಚೆ ಬಂದು ಹೋಗು...ಅಂದ್ಹಾಗೇ ಸಧ್ಯದಲ್ಲೇ ಫಂಕ್ಷನ್ ಆಗುತ್ತಲ್ಲ ಆಗ ಬರ್ತೀಯ ತಾನೇ?.."

"ಹೂಂ, ಬರ್ತೀನಿ. ಒಬ್ಬಳೇ ಬರ್ತೀನಿ..." ಮುಖ ತಿರುಗಿಸಿ ಹೇಳಿದಳು. ಅವನಿಗೂ ಸ್ವಲ್ಪ ಪೆಚ್ಚಾಗಿತ್ತು. ಎದ್ದು ಬಂದು ಅವಳ ತಲೆಯ ಮೇಲೆ ಕೈಯಾಡಿಸಿದ.. ಅವಳ ಕಣ್ಣುಗಳು ತುಂಬಿ ಬಂದವು. "ನೀನು ನನ್ನ ಕಡೆ ಇದೀಯಲ್ಲ, ಅದೇ ನನಗೆ ಧೈರ್ಯ" ಎಂದಳು ಅವನ ಕೈ ಹಿಡಿದು,.

"ನಿನ್ನ ನಿರ್ಧಾರದಿಂದ ನನಗೆ ನಿರಾಸೆಯಾಗಿದೆ ನಿಜ. ಆದರೆ ಹಾಗಂತ ನಾನೂ ನಿನ್ನ ಪರವಾಗಿಲ್ಲದೇ ಇದ್ದರೆ ಅದು ದ್ರೋಹ ಆಗುಲ್ವಾ?.. ಆ ಕೊರಗು ಸದಾ ಕಾಲಕ್ಕೂ ಉಳಿದು ಬಿಡುತ್ತೆ. ನಿನ್ನ ಏನೇ ಸಮಸ್ಯೆಗಳು, ಎಷ್ಟೇ ಇದ್ದರೂ ಮುಚ್ಚು ಮರೆ ಇಲ್ಲದೇ ನನ್ನ ಹತ್ರ ಹೇಳು...ತಿಳೀತಾ?"

"ನಿಂಗಲ್ಲದೇ ಇನ್ಯಾರಿಗೆ ಹೇಳ್ಲಿ ಭುಜೀ...ನನ್ನದೊಂದು ರಿಕ್ವೆಸ್ಟ್ ಅಮ್ಮನ್ನ ಅಪ್ಪಯ್ಯನ ಚೆನ್ನಾಗಿ ನೋಡ್ಕೋ.. ನನ್ನಿಂದ ಅವರಿಗೆ ಸುಖವಿಲ್ಲ, ನಿನ್ನ ಮೇಲೆ ಅಮ್ಮನಿಗೆ ಬಹಳ ಪ್ರೀತಿ. ನಿನ್ನ ಮಕ್ಕಳೇ ಅವಳಿಗೆ ಮೊಮ್ಮಕ್ಕಳು. ಅಮ್ಮ ಖುಷಿಯಾಗಿರುವಂತೆ ನೋಡ್ಕೋ. ನಿನ್ನ ಸಂಸಾರದಲ್ಲಿ ಅವರು ಸದಸ್ಯರು ಅಂತ ಅಂದ್ಕೋ..."

"ಇದನ್ನು ನೀನು ಹೇಳಿ ಕೊಡ್ಬೇಕಾ...?"

“ಇನ್ನೂ ಒಂದ್ಮಾತು ಭುಜಂಗ...ನಾನು ನಿನ್ನನ್ನು ತಿರಸ್ಕರಿಸ್ಬಿಟ್ಟೆ ನಿನಗೆ ಕೋಪ ಬಂದಿರಬಹುದು.. ಆದರೆ, ಪ್ಲೀಸ್ ನನ್ನನ್ನ ದ್ವೇಷಿಸ್ಬೇಡ ಕಣೋ..” ಬೇಡಿಕೊಂಡಳು.

“ಏಯ್...ಯಾಕಿಂಥಾ ಮಾತುಗಳ್ನಾಡ್ತೀಯ? ನಿನ್ನ ಮೇಲೆ ಕೋಪ ಬಂದದ್ದು ನಿಜ. ಆದರೆ ದ್ವೇಷಿಸುವಷ್ಟು ನೀಚನಲ್ಲ ನಾನು. ಋಣಾನುಬಂಧ ಇರಲಿಲ್ಲ, ತಡೀ ಒಂದು ನಿಮಿಷ” ಎನ್ನುತ್ತಾ ತಾನು ಅವಳಿಗಾಗಿ ತಂದಿದ್ದ ಸೀರೆಯನ್ನು, ಒಡವೆ ಸೆಟ್‌ಗಳನ್ನು ಅವಳ ಕೈಗಿತ್ತ.

“ಇದೆಲ್ಲಾ ಯಾಕಪ್ಪಾ.” ಎಂದರೂ, ‘ಥ್ಯಾಂಕ್ಸ್’ ಹೇಳಿ ತೆಗೆದಿಟ್ಟುಕೊಂಡಳು.

“ನನ್ನನ್ನ ಗಿರೀಶ್ ಇರುವ ಹೋಟೆಲ್ಲಿಗೆ ಕರ್ಕ್ಕೊಂಡು ಹೋಗಿ ಬಿಟ್ಟು ಬಿಡು.. ಸ್ವಲ್ಪ ಹೊತ್ತು ಅಲ್ಲಿದ್ದು ನನ್ನ ಹಾಸ್ಟೆಲ್ಲಿಗೆ ವಾಪಸ್ಸು ಹೋಗ್ತೀನಿ..” ಭುಜಂಗ ಹುಬ್ಬೇರಿಸಿ ಅವಳನ್ನು ನೋಡಿದ. ಆದರೆ ಪ್ರಶ್ನಿಸಲಿಲ್ಲ, ಇಬ್ಬರೂ ಅಲ್ಲಿಂದ ಹೊರಟರು. ಟ್ಯಾಕ್ಸಿಯಲ್ಲಿ ಕುಳಿತಾಗ ಅವಳು ಅವನ ಕೈ ಹಿಡಿದು ‘ಥ್ಯಾಂಕ್ಸ್’ ಎಂದಳು

“ಥ್ಯಾಂಕ್ಸ್ ಯಾಕೇ? ಅಂಥಾದ್ದೇನು ಮಾಡಿದೆ.”

“ನೀನು ಬಂದೆ...ನನಗೆ ಧೈರ್ಯ ಬಂತು. ಏನೋ ಅಪರಾಧಿಭಾವ ಕಾಡ್ತಿತ್ತು. ನಿನ್ನ ಹತ್ತಿರ ಮಾತಾಡಿದ್ಮೇಲೆ ಮನಸ್ಸು ಹಗುರವಾಯ್ತು..” ಅಂಗೈ ಒತ್ತಿದಳು. ಅವನೂ ವಿಶ್ವಾಸವನ್ನು ಪ್ರಕಟಿಸಿ ಕೈಯನ್ನು ಒತ್ತಿದ.

“ಪಲ್ಲವಿಗೆ ಆರತಿ ಶಾಸ್ತ್ರ ಮಾಡುವ ದಿನವನ್ನು ತಿಳಿಸ್ತೀನಿ. ನೀನು ಖಂಡಿತಾ ಬರ್ಬೇಕು” ಮತ್ತೊಮ್ಮೆ ಹೇಳಿದ. ಹೋಟೆಲ್ಲಿನ ಬಳಿ ಟ್ಯಾಕ್ಸಿಯಿಂದ ಇಬ್ಬರೂ ಇಳಿದರು. ನಾನು ನಿನ್ನನ್ನು ಬಿಟ್ಟು ಮತ್ತೊಮ್ಮೆ ಗಿರೀಶ್‌ನ ಮಾತನಾಡಿಸ್ಬಿಟ್ಟು ಹೊರಡ್ತೀನಿ..” ಅಂತಂದ.

“ಹಣದ ವ್ಯವಸ್ಥೆ ನಿನ್ನ ಕಡೆಯಿಂದ ಆಯ್ತು ಅಂತ ಗಿರೀಶ್‌ಗೆ ತಿಳೀಬಾರ್ದು ಭುಜಂಗ” ಪಿಸುದನಿಯಲ್ಲಿ ಹೇಳಿದಳು.

“ಮತ್ತೇ? ಏನಂತ ಹೇಳಿದೀಯ?”

“ಮನೇನ ಅಡವಿಟ್ಟು ಬ್ಯಾಂಕಿನಲ್ಲಿ ಸಾಲ ತಗೊಂಡಿದೀನಿ ಅಂತ ಹೇಳಿದೀನಿ.. ಆದರೆ, ಅಮ್ಮಂಗೆ ಮಾತ್ರ ಯಾವ ವಿಷಯ ತಿಳಿಯಬಾರ್ದು.”

“ಎಷ್ಟು ದಿನಾಂತ ಮುಚ್ಚಿಡ್ತೀಯ”

“ನೋಡೋಣ. ಆಗೂವಷ್ಟು ದಿನ” ಎಂದಳು ಬಲವಂತವಾಗಿ ನಕ್ಕು. ಇಬ್ಬರೂ ಲಿಫ್ಟ್ ಇದ್ದೆಡೆಗೆ ಬಂದರು.

* * *

ದಿನಗಳು ಬೇಗ ಬೇಗ ಸರಿಯುತ್ತಿವೆ ಅಂತೆನ್ನಿಸಿತ್ತು. ಶ್ವೇತಾಳಿಗೆ ಏಳನೇ ತಿಂಗಳು ತುಂಬುವುದರಲ್ಲಿತ್ತು. ಹೊಟ್ಟೆ ಸಾಕಷ್ಟು ಬೆಳೆದಿತ್ತು. ಚಿದಾನಂದ ಅವಳನ್ನೇ ತನ್ಮಯತೆಯಿಂದ ನೋಡುತ್ತಿದ್ದ. ಅವಳನ್ನು ತಬ್ಬಿಕೊಳ್ಳಬೇಕು. ಮುದ್ದಿಸಬೇಕು ಅಂತೆಲ್ಲಾ ಅನ್ನಿಸುತ್ತಿತ್ತು. ಆದರೆ ಶ್ವೇತಾ

ಅವನನ್ನು ದೂರವೇ ಇಟ್ಟಿದ್ದಳು. "ನನ್ನ ಮಗೂಗೆ ಹಿಂಸೆ ಆಗುತ್ತೆ ಚಿದಾನಂದ್...ಬಾಣಂತನ ಮುಗಿದ ಮೇಲೆ ನನ್ನ ನಿಮ್ಮ ಸಂಬಂಧ..." ಕಿಲ ಕಿಲ ನಕ್ಕು ಅವನನ್ನು ಕೆಣಕುತ್ತಿದ್ದಳು. ಅವಳನ್ನೇ ಮೆಚ್ಚುಗೆಯಿಂದ ನೋಡಿದ.

"ಚೈತ್ರಳನ್ನ ಕೇಳು.. ಅವರಿಬ್ಬರೂ ದೂರ ದೂರ ಇದಾರಾ ಅಂತ..."

"ಆಹಾ...ಆಸೆ ನೋಡು...ಅದೆಲ್ಲಾ ಏನೂ ಬೇಡ...ನಿಮ್ಮ ಸಹವಾಸದಿಂದಲೇ ನನಗೆ ಈ ಅವಸ್ಥೆ. ತಿಳಿತಾ?"

"ಹೀಗೆಲ್ಲಾ ಮಾತಾಡಿದ್ರೆ ನಂಗೂ ಕೆರಳುತ್ತೆ.. ಹೊಟ್ಟೆಯ ಮೇಲೆ ಕೈಯಾಡಿಸಿ, ಮುಖವಿಟ್ಟು ಮುದ್ದಿಸಬೇಕು ಅಂತ ನಂಗೂ ಆಸೆ ಆಗುತ್ತೆ ಶ್ವೇತಾ.. ಅದರಿಂದ ಏನು ತೊಂದ್ರೇ, ನಾನು ನಿನ್ನನ್ನ ಎಷ್ಟು ಪ್ರೀತಿಸ್ತೀನಿ ಗೊತ್ತಾ?" ತುಂಬಾ ಮುದ್ದಾಗಿ ಕಾಣ್ತೇಯ.

"ನಿಮ್ಮದು ಅತಿ ಅತಿಯಾಯ್ತು. ಯಾರೂ ತಂದೆ ಆಗುಲ್ವಾ! ಯಾವ ಗಂಡನೂ ಹೀಗೆಲ್ಲಾ ಆಡುಲ್ಲ, ನೀವು ಪ್ರೀತಿಯ ಮಾತನ್ನಾಡಿದರೆ ನನ್ನ ಉಸಿರು ಕಟ್ಟುತ್ತೆ.."

"ಹಾಗಾದ್ರೆ, ನೀನು ನನ್ನನ್ನು ಪ್ರೀತಿಸೋದೇ ಇಲ್ವಾ?.."

"ಪ್ರೀತಿ ಪ್ರೀತಿ ಅಂತ ಸದಾ ಬಾಯಲ್ಲಿ ಹೇಳ್ಕೊಂಡು ತಿರುಗಾಡುಕ್ಕೆ ನಂಗಿಷ್ಟವಿಲ್ಲ, ನನಗೆ ಇದೆಲ್ಲಾ ಅಭ್ಯಾಸವಿಲ್ಲ."

"ನೀನು ಶರತ್‌ನ ಈಗಲೂ ಪ್ರೀತಿಸ್ತಿದೀಯಾ! ಮರೆತಿಲ್ವಾ?" ಅವನು ಇದ್ದಕ್ಕಿದ್ದಂತೆ ಕೇಳಿದಾಗ ಅವಳು ಎಚ್ಚೆತ್ತಳು, ಸಿಡುಕಿದಳು.

"ಹಿಂದಿನದನ್ನೆಲ್ಲಾ ನಾನು ಮರೆತಿದೀನಿ. ಮತ್ತೆ ಮತ್ತೆ ನೀವು ಕೇಳ್ಬೇಡಿ.."

"ಸರಿ, ನಾನು ಕೇಳುಲ್ಲ.. ಆದರೆ ಮದುವೆಯಾದ್ಮೇಲೆ ನೀನು ಬದಲಾಗಿ ಬಿಟ್ಟಿದೀಯ ಅಂತ ಅನ್ನಿಸುತ್ತೆ. ಮೊದಲ್ನಿಂದ ನಾನು ಒಂಟಿಯಾಗಿ ಬೆಳೆದವನು. ಆದರೆ ಈಗ ನೀನು ಹತ್ತಿರವಾಗಿದೀಯ.. ಹೀಗೆ ನಿನ್ನ ನನ್ನ ಸಂಬಂಧ ಬೆಳೆಯುತ್ತೆ. ನಮ್ಮದೇ ಒಂದು ಸಂಸಾರ ಅಂತ ಆಗುತ್ತೆ.. ನಮ್ಮ ಪ್ರೀತಿಯ ಮಗು ಹುಟ್ಟುತ್ತೆ ಅನ್ನುವ ಕಲ್ಪನೆಯೇ ನನಗಿರಲಿಲ್ಲ, ಎಲ್ಲಾ ನನಗೆ ತಿಳಿಯದೇ ಬೇಗ ಬೇಗ ನಡೆದು ಹೋಯ್ತು. ನೀನಾಗಿಯೇ ನಿನ್ನ ಬಳಿಗೆ ನನ್ನನ್ನ ಕರ್ಕೊಂಡೆ..."

"ಸಾಕು, ಆ ಮಾತುಗಳೆಲ್ಲಾ ಸಾಕು. ಏನೋ ಆ ಗಳಿಗೆ ಹಾಗೆ ಕೂಡಿ ಬಂತು. ಅಬಾರ್ಷನ್ ಮಾಡಿಸ್ಕೋ ಬೇಕು ಅಂತ ಹೇಮಾಳ ಬಳಿಗೆ ಹೋಗಿದ್ದೆ, ಅವಳು ಒಪ್ಪಲಿಲ್ಲ."

"ಒಳ್ಳೇದೇ ಆಯ್ತು.. ನನ್ನನ್ನ ಕೇಳಿದ್ರೆ ಈ ಪಾಪವನ್ನು ಮಾಡ್ಬೇಡ ಅಂತ ನಾನೇ ಹೇಳ್ತಿದ್ದೆ. ಯಾಕೆ ನಿಂಗೆ ಮಗು ಅಂತಂದ್ರೆ ಇಷ್ಟ ಇಲ್ವಾ?.."

"ಇಲ್ಲ, ಈಗ ತುಂಬಾ ಇಷ್ಟವಾಗ್ತಿದೆ.. ನಾನು ಬಯಸಿದವರ ಮಗು ನನ್ನ ಒಡಲಲ್ಲಿ ಬೆಳೆಯುತ್ತಿದೆ.. ಆ ಆನಂದ ನನಗಿದೆ." ಎನ್ನುತ್ತಾ ಕಣ್ಣು ಮುಚ್ಚಿ ತನ್ನ ಹೊಟ್ಟೆಯ ಮೇಲೆ ಕೈಯಾಡಿಸಿಕೊಂಡಳು. ತನ್ಮಯತೆಯಿಂದ ತನ್ನಲ್ಲೇ ಏನನ್ನೋ ಹೇಳಿಕೊಂಡಳು.

"ನಾನೂ ಮುಟ್ಲಾ?" ಚಿದಾನಂದ ಆಸೆಯಿಂದ ಕೇಳಿದಾಗ, ಅವನನ್ನೇ ದುರು ದುರು ನೋಡಿದಳು. ಬೇಡ ಎನ್ನುವಂತೆ ತಲೆಯಾಡಿಸಿದಳು.

"ಈಗ್ಲೇ ಬೇಡ.. ಇನ್ನೆಂದಾದ್ರೂ ನಾನೇ ಪರ್ಮಿಷನ್ ಕೊಡ್ತೀನಿ.." ಅವನು ಮುಜುಗರದಿಂದ ತಲೆ ತಗ್ಗಿಸಿದ. ಒಂದು ಗಳಿಗೆ ಅಯ್ಯೋ ಅಂತೆನ್ನಿಸಿದರೂ, ಅವಳ ಮನದಲ್ಲಿದ್ದ ಆಲೋಚನೆ ಬೇರೆಯಾಗಿತ್ತು. ಸಾರೀ ಅಂತ ಹೇಳಬೇಕೆಂದುಕೊಂಡರೂ ಹೇಳಿರಲಿಲ್ಲ. ಅವಳ ವರ್ತನೆ ಅವನಿಗೆ ಬೇಸರವನ್ನುಂಟು ಮಾಡಿತ್ತು.

ಪಲ್ಲವಿಗೆ ಏಳನೇ ತಿಂಗಳು ಪ್ರಾರಂಭವಾಗುವುದರಲ್ಲಿತ್ತು. ಅವಳ ಸೌಂದರ್ಯ ಅರಳಿತ್ತು. ಮೈ ಕೈ ತುಂಬಿಕೊಂಡಿದ್ದಳು. ಭುಜಂಗ ಅವಳನ್ನು ಕಣ್ತುಂಬಾ ನೋಡಿ ಮೆಚ್ಚುಗೆಯ ನೋಟವನ್ನು ಅವಳ ದೇಹಶ್ರೀಯ ಮೇಲೆ ಚೆಲ್ಲಿದ. ಅವಳ ಮುಖ ರಂಗೇರಿತು.

"ನಿನ್ನ ಮುಖದಲ್ಲಿ ಎಂಥಾ ಕಳೆ ಬಂದಿದೆ ಗೊತ್ತಾ?.." ಒಂದು ಹೆಣ್ಣು ತಾಯ್ತನದ ಸಾಫಲ್ಯವನ್ನು ಪಡೆಯುವಾಗ ಎಷ್ಟು ವಿಜೃಂಭಿಸುತ್ತಾಳೆ ಅನ್ನೋದನ್ನ ನಾನು ಕಣ್ಣಾರೆ ಕಾಣ್ತಾ ಇದೀನಿ. ತಾಯಿಯಾಗ್ಬೇಕು.. ಒಡಲಲ್ಲಿ ಮಗು ತುಂಬಬೇಕು ಅಂತ ನೀನು ವಿಪರೀತವಾಗಿ ಹಂಬಲಿಸಿದಾಗ ಎಷ್ಟೋ ಸಾರಿ ನನಗೆ ನಿನ್ಮೇಲೆ ಬೇಸರ ಮೂಡಿತ್ತು. ಆದರೆ ಈಗ ನೀನು ಚೈತ್ರದ ಪಲ್ಲವಿ. ನಿನ್ನನ್ನ ನೋಡ್ತಾ ಇದ್ದರೆ, ಮೈ ತುಂಬಿ ನಿಂತ ಪ್ರಕೃತಿ ಮಾತೆಯ ತರಹ ಕಾಣ್ತೀಯ.. ಚೈತ್ರದ ಸೊಗಸು ಪಲ್ಲವಿಸಿದೆ.." ಪಲ್ಲವಿ ವೈಯಾರದಿಂದ ನಕ್ಕಳು.

ನೀನು ಹೀಗೆ ವೈಯಾರ ಆಡಿದ್ರೆ, ನಾನು ಕವಿಯಾಗ್ಬೇಕು.. ಕವನದಲ್ಲಿ ನಿನ್ನನ್ನ ಹೊಗಳಬೇಕು.. ಉಪವನದಲ್ಲಿ ನಿನ್ನೊಡನೆ ಹಾಡ್ಬೇಕು ಅಂತ ಏನೇನೋ ಅನ್ನಿಸುತ್ತೆ ಎನ್ನುತ್ತಾ ಅವಳ ಗಲ್ಲವನ್ನು ಹಿಡಿದೆತ್ತಿದ. ಅವಳ ಮುಖ ಕೆಂದಾವರೆಯಂತೆ ಅರಳಿತ್ತು. ಅವಳನ್ನು ಎಬ್ಬಿಸಿ ಕನ್ನಡಿಯ ಮುಂದೆ ನಿಲ್ಲಿಸಿದ. ಅವಳ ಭುಜದ ಮೇಲೆ ತಲೆಯನ್ನಿಟ್ಟು, ಎದುರಿನಲ್ಲಿ ಕಂಡ ಪ್ರತಿಬಿಂಬ ಮೋಡಿ ಮಾಡಿತು. ಅವಳನ್ನು ನಿಧಾನವಾಗಿ ತನ್ನೆಡೆಗೆ ತಿರುಗಿಸಿಕೊಂಡು, ಅವಳ ಮುಖವನ್ನು ತನ್ನ ಬೊಗಸೆಯಲ್ಲಿ ಹಿಡಿದ...ಮೃದುವಾಗಿ ಅವಳ ಕೆನ್ನೆಗಳನ್ನು ಚುಂಬಿಸಿದ. ತುಟಿಗೆ ತುಟಿಯನ್ನು ಸೇರಿಸಿದ.

ಕೆಳಗಿನಿಂದ ಶ್ವೇತಾ, 'ಚೈತ್ರಾ' ಎಂದು ಕರೆದದ್ದನ್ನು ಕೇಳಿ, ಭುಜಂಗ ಬೇಸರಿಸಿ, ತನ್ನ ಹಿಡಿತವಾಗಿ ನಿಧಾನವಾಗಿ ಸಡಿಲಿಸಿದ. ಆ ರಸಗಳಿಗೆಯನ್ನು ತಪ್ಪಿಸಿದ ಶ್ವೇತಾಳನ್ನು ಚೈತ್ರಾ ಬೈದುಕೊಂಡಳು. ಭುಜಂಗ ನಿರಾಸೆಯಿಂದ ಅವಳ ಕಡೆ ನೋಡಿ, ಅವಳ ಕೆನ್ನೆಯನ್ನು ಮೃದುವಾಗಿ ತಟ್ಟಿದ. ಪಲ್ಲವಿ ನಕ್ಕಂತೆ ತುಟಿಗಳನ್ನು ಅಲುಗಿಸಿದಳು. ಬಾಗಿಲನ್ನು ತೆರೆದು, ಭುಜಂಗ ಮೆಟ್ಟಿಲುಗಳನ್ನಿಳಿದ. ಕಡೆಯ ಮೆಟ್ಟಿಲಿನ ಬಳಿ ನಿಂತಿದ್ದ ಶ್ವೇತಾಳ ಕಡೆ ಕಳ್ಳ ನೋಟ ಬೀರಿದ. ಮಿಂಚು ಸುಳಿದಂತಾಗಿತ್ತು. ಮತ್ತೊಮ್ಮೆ ನೋಡಿದ. ಮುಡಿಯಿಂದ ಅಡಿಯವರೆಗೆ ಅವಳ ದೇಹ ಸೌಂದರ್ಯವನ್ನು ವೀಕ್ಷಿಸಿದ. ಕಣ್ಣುಗಳು ಅರಳಿದವು. ಅವಳ ಕಣ್ಣುಗಳು ಅವನ ಮೆಚ್ಚುಗೆಯ ನೋಟವನ್ನು ಕಂಡು ಹಿಡಿದವು. ಅವಳು ಮಿಂಚಿನ ನೋಟವನ್ನು ಬೀರಿದಳು. ತುಂಟ ನಗೆಯನ್ನು ಎಸೆದಳು. ಅವನು ಬೆದರಿದ. ಗಲಿಬಿಲಿಗೊಂಡು ನುಡಿದ "ನೀವು ಅಲ್ಲೇ ಹೋಗಿ.." ಅವಳು ನಿಧಾನವಾಗಿ ಮೆಟ್ಟಿಲುಗಳನ್ನೇರಿದಳು. ಮೈ ಭಾರವನ್ನು ಹೊತ್ತು ಪರಿಶ್ರಮದಿಂದ

ಮೆಟ್ಟಿಲುಗಳನ್ನೇರುವವಳನ್ನು ಕಂಡು ಮರುಕವೂ ಬಾಗಿತ್ತು. ಅವಳನ್ನೇ ದಿಟ್ಟಿಸಿದ. ಅಬ್ಬಾ...ಈ ಹೆಂಗಸರು! ಎಂಥಾ ಅದ್ಭುತ ಸೃಷ್ಟಿ!! ಪ್ರಕೃತಿದತ್ತವಾದ ಸಹಜ ಸೊಬಗು, ಒಂದೊಂದು ಸನ್ನಿವೇಶದಲ್ಲಿ ಒಂದೊಂದು ಥರ ಇಮ್ಮಡಿಸುತ್ತೆ.. ಕೌಮಾರ್ಯದಲ್ಲಿ ಮುಗ್ಧ ಸೌಂದರ್ಯ.. ಕೌಮಾರ್ಯದಿಂದ ಯೌವನಕ್ಕೆ ಕಾಲಿಡುವಾಗ ಆಕರ್ಷಕ ಸೌಂದರ್ಯ ಮದುಮಗಳಾಗಿ ಮೆರೆದಾಗ, ಪತಿಯ ಕಣ್ಣುಗಳನ್ನು ತುಂಬುವ ತುಂಬು ಸೌಂದರ್ಯ.. ಇಂಥಾ ಸಮಯದಲ್ಲಿ..? ಸೃಷ್ಟಿಯ ಸೊಬಗು, ಸೆಳೆವು ಎಲ್ಲವನ್ನೂ ಮೈ ತುಂಬಿಕೊಂಡ ಎಣೆ ಇಲ್ಲದ ಸೌಂದರ್ಯ ತಾಯ್ತನದ ಸೊಬಗನ್ನು ಎತ್ತಿ ತೋರುವ ದೇಹಾಕರ್ಷಣೆ, ಉತ್ಸಾಹ, ಉಲ್ಲಾಸ.. ಏನಿಲ್ಲ? ಹೇಗ್ಹೇಗೋ ಇದ್ದವಳು ಹೇಗೆ ಚೆಲುವನ್ನು ಮೈಗೂಡಿಸಿಕೊಂಡಿದಾಳೆ.. ಇವಳ ಒಡಲಲ್ಲಿ ಅಂಕುರಗೊಂಡಿರುವ ಶಿಶು ಹೇಗಿರಬಹುದು? ಚಿದಾನಂದನಂತೆ?....ಇವಳಂತೆ?.. ಮಗು ಹೇಗೇ ಇರಲಿ.. ಸೃಷ್ಟಿಯ ಅದ್ಭುತ ಕೊಡುಗೆ. ಇದಕ್ಕಾಗಿಯೇ ಪಲ್ಲವಿ ತಾಯಿಯಾಗಲು ಹಗಲು ಇರುಳೂ ಹಂಬಲಿಸಿದ್ದು.. ಶ್ವೇತಾ ಅನೀತಿಯಲ್ಲೂ ನೀತಿಯನ್ನು ಉಳಿಸಿಕೊಂಡದ್ದು?..

ಚಿದಾನಂದನಂತಿದ್ದರೆ, ಸ್ವಲ್ಪ ಸಪ್ಪೆ...ಶ್ವೇತಾಳಂತಿದ್ದರೆ ಚಂಚಲ...ಇಂಥಾ ತಂದೆ ತಾಯಿಗಳಿಗೆ ಜನಿಸುವ ಮಗು ಹೇಗಿರುತ್ತೋ...? ಹೇಗೆ ಬೆಳೆಯುತ್ತೋ? ಇವಳು ಸರಿಯಾಗಿ ಸಾಕಬಲ್ಲಳೆ?. ಚಿದಾನಂದ ಪೋಷಿಸಬಲ್ಲನೆ?...ಇದ್ದಕ್ಕಿದ್ದಂತೆ ತಾನೇಕೆ ಇವಳ ಗರ್ಭದಲ್ಲಿರುವ ಶಿಶುವಿನ ಬಗ್ಗೆ ಚಿಂತಿಸುತ್ತಿದ್ದೇನೆ.. ಅಂತೆನ್ನಿಸಿದಾಗ ಗಲಿಬಿಲಿಗೊಂಡಿದ್ದ.

ನನಗೆ ಅನುಕೂಲವಿದೆ. ಪಲ್ಲವಿಯ ಬಳಿ ಸಾಕಷ್ಟು ಹಣವಿದೆ. ನಮ್ಮ ಮಗುವನ್ನು ಸಾಕಲು ನಮಗೆ ಕಷ್ಟವಾಗಲಾರದು.. ಆದರೆ ಈ ಮಗು ಕಷ್ಟಕೋಟಲೆಗಳ ನಡುವೆ ಬೆಳೆಯಬೇಕೆ?..ಪಲ್ಲವಿ ಹೇಳುವಂತೆ, ನಾನು ಆದಷ್ಟು ಬೇಗ ಇವರುಗಳಿಗೆ ಅನುಕೂಲಗಳನ್ನು ಒದಗಿಸಿಕೊಡಬೇಕೆಂದುಕೊಂಡ...

ಅಜ್ಜಿ ಮಲಗಿತ್ತು.. ತಾಯಿ ಅಡಿಗೆ ಮನೆಯಲ್ಲಿದ್ದಳು. ತಂದೆ ಹೊರಗೆಲ್ಲೋ ಹೋಗಿದ್ದರು. ವಾಣಿ ಸ್ಕೂಲಿನಿಂದ ಬಂದಿರಲಿಲ್ಲ, ಇವನು ಅತ್ತಿತ್ತ ನೋಡಿ ಅತ್ತೆಯ ಮನೆಯ ಕಡೆಗೆ ನಡೆದ. ವೈದೇಹಿ ಇವನ ಕಡೆ ನೋಡಿ ನಕ್ಕಳು.

"ಏನೋ ಭುಜೀ.. ಅಪರೂಪವಾಗ್ಬಿಟ್ಯಲ್ಲೋ...ನಿನ್ನ ಹೆಂಡ್ತಿ ಕಳಿಸಿಕೊಟ್ಲಾ?"

"ಏನತ್ತೇ ಹೀಗಂತೀರಿ? ದಿನಾ ಬರ್ತೀನಲ್ಲ.. ಏನೇನು ಸಾಮಾನುಗಳು ಬೇಕು ಅಂತ ಪಟ್ಟಿ ಮಾಡ್ಕೊಡಿ. ನಾನೂ ಚಿದಾನಂದ ಹೋಗಿ ತರ್ತೀವಿ.."

"ಹೆಂಡ್ತಿ ಬಸಿರಿ ಅಂತ ಎಷ್ಟು ಸಂಭ್ರಮ ನೋಡು ನಿಂಗೆ ಹಸಿರು ಸೀರೆ, ರವಿಕೆ ತರ್ಬೇಕು. ಹಣ್ಣು ಹಂಪಲು ತರ್ಬೇಕು. ಉಂಡೆ ಚಕ್ಕುಲಿ ಮಾಡಿಸ್ಬೇಕು. ನಿಮ್ಮಮ್ಮಂಗೆ ಹೇಳು ಅವರಿಗಾದ್ರೆ ಎಲ್ಲಾ ಗೊತ್ತಿರುತ್ತೆ. ನಂಗೇನು ಗೊತ್ತಿರುತ್ತೆ..?"

"ನೀವಾದ್ರೂ ಬರೆದ್ಕೊಡಿ ಅತ್ತೆ. ಇವರು ಜಂಭ ಆಡ್ತಾರೆ." ಮಂದಾಕಿನಿಯ ಕಡೆ ತಿರುಗಿ ನುಡಿದ. ಅವಳು ಪೆಚ್ಚಾಗಿ ನಕ್ಕಳು.

"ನಿಮಗೆಲ್ಲಾ ಏನು ಸಾಧ್ಯವೋ ಅದನ್ನು ಮಾಡಿ.. ಚಿದಾನಂದನಿಗೆ ನಿನ್ನಷ್ಟು ತಿಳುವಳಿಕೆ

ಇಲ್ಲ.."

"ಯಾಕೆ ತಿಳುವಳಿಕೆ ಇಲ್ಲ!.. ಅವನೇ ತಾನೇ ಈ ಮಗುವಿನ ತಂದೆ?" ಮಂದಾಕಿನಿಯ ಮುಖ ಕೆಂಪಗಾಗಿತ್ತು. ವೈದೇಹಿಯ ಕಡೆ ಕೋಪದ ನೋಟವನ್ನು ಎಸೆದಳು.

"ಅಕ್ಕಾ ಪದೇ ಪದೇ ಇದೇ ಮಾತನ್ನು ಹೇಳಿ ಹಂಗಿಸ್ಬೇಡ. ಏನೋ ಅವಿವೇಕ ನಡೆದು ಹೋಯ್ತು. ಈಗ ಎಲ್ಲಾ ಸರಿಯಾಗಿದೆಯಲ್ಲ."

"ಭುಜಂಗ ಸರಿ ಮಾಡಿದ್ದಕ್ಕೆ ಸರಿ ಹೋಯ್ತು.. ಭುಜಂಗನ್ನ ಹೇಮನ್ನ ಒಂದೇ ಮನೇಲಿ ತಿಂಗಳಾನುಗಟ್ಟಳೆ ಬಿಟ್ಟು ಹೋದ್ರೂ ಇಂಥಾ ಅವಿವೇಕ ನಡೀತಿರ್ಲಿಲ್ಲ, ಶ್ವೇತಾ ಅಂತೂ ಚೆಲ್ಲು ಹುಡುಗಿ ಅಂತಂದ್ರೆ. ನಿನ್ನ ಮಗನಿಗೆ ಏನು ಆತುರವಿತ್ತು..?"

"ಅತ್ತೆ ಬಿಡಿ, ಈ ಮಾತನ್ನೆಲ್ಲ.. ಶ್ವೇತಾ ಕೂಡ ಸಧ್ಯದಲ್ಲೇ ತಾಯಿಯಾಗ್ತಾಳೆ...ನೀವು ಅಜ್ಜಿ ಆಗ್ತೀರಿ.. ಈ ವಯಸ್ನಲ್ಲೂ ಕಾದಾಡ್ಬೇಕಾ?"

"ಅದ್ಹೇಗೋ ನಾನು ಅಜ್ಜಿ ಆಗ್ತೀನಿ?.. ಚಿದಾನಂದ ನನ್ನ ಮಗನಲ್ಲ, ಶ್ವೇತಾ ನನ್ನ ಮಗಳಲ್ಲ ಹೇಮಂಗೆ ಮಗುವಾದರೆ ಮಾತ್ರ ನಾನು ಅಜ್ಜಿ ಆಗೋದು. ಅದನ್ನು ಭಗವಂತ ಯಾವಾಗ ಈಡೇರಿಸ್ತಾನೋ? ನೀನೂ ಹೇಮಾ ಇಬ್ಬರೂ ನನ್ನ ಆಸೆಗೆ ಕಲ್ಲು ಹಾಕಿ ಬಿಟ್ರಿ?.." ಚುಚ್ಚುವಂತೆ ನುಡಿದಳು.

"ಹಾಗಾದ್ರೆ ನನ್ನ ಮಗುವಿಗೆ ನೀವು ಅಜ್ಜಿ ಅಲ್ವಾ?.. ಅಜ್ಜೀ ಅಂತ ಕರೆದ್ರೆ ಮಾತಾಡ್ಸಲ್ವಾ?..." ಕುಹಕದ ಭಾವವಿತ್ತು ಅವನ ಮಾತಿನಲ್ಲಿ.

"ನಂಗೊತ್ತಿಲ್ಲ, ನಾನಿನ್ನು ಅಜ್ಜಿ ಅಂತ ಕರೆಸ್ಕೊಳ್ಳೋಕೆ ತಯಾರಿಲ್ಲ."

"ಹೇಮಂಗೆ ಹೇಳ್ಬಿಡಿ.. ಬೇಗ ತಾಯಿಯಾಗು.. ನಾನು ಮೊಮ್ಮಗು ಜೊತೆ ಆಡ್ಬೇಕು ಅಂತ.." ಅವನೂ ನಗುತ್ತಾ ಹೇಳಿದ.

"ಮಗು ಆಕಾಶದಿಂದ ಉದುರುತ್ತಾ?.. ಮದುವೆಯಾಗ್ಬೇಕು ತಾನೇ?.." ಭುಜಂಗ ಬೆಚ್ಚಿ ಸುಮ್ಮನಾದ.. ಸಾವರಿಸಿಕೊಂಡು ನುಡಿದ.

"ಫಂಕ್ಷನ್‌ಗೆ ಬಾ ಅಂತ ಹೇಮಂಗೂ ಹೇಳಿದೀನಿ. ಆಗ ಅವಳ ಹತ್ತಿರ ಯಾವ ಮುಚ್ಚು ಮರೆ ಇಲ್ಲದೇ ನೇರವಾಗಿ ಮಾತ್ನಾಡಿ.. ಅವಳು ಒಪ್ಪಬಹುದು.."

"ಬರ್ತಾಳೋ ಬರುಲ್ವೋ...ಅವಳಿಗೆ ಇದರಲ್ಲೆಲ್ಲಾ ಆಸಕ್ತಿ ಇದ್ರೆ ತಾನೇ?" ವೈದೇಹಿ ಲೊಚಗುಟ್ಟಿದಳು. ಭುಜಂಗ ಗಂಭೀರನಾದ. ಮತ್ತೊಮ್ಮೆ ಪಟ್ಟಿಯನ್ನು ಬರೆದಿಡುವಂತೆ ಹೇಳಿ ತನ್ನ ಮನೆಗೆ ಹೊರಟ.

* * *

ಸಮಾರಂಭಕ್ಕೆ ಎಲ್ಲಾ ಸಿದ್ಧತೆಗಳೂ ನಡೆದಿದ್ದವು. ಭುಜಂಗ, ಪಲ್ಲವಿಗೆ ಹಾಗೂ ಶ್ವೇತಾಳಿಗೆ ಒಂದೇ ಥರದ ಹಸಿರು ಬಣ್ಣದ ಒಡಲಿನ, ಜರಿಯ ಹೂಗಳ, ಜರಿಯ ಅಂಚಿನ ರೇಶಿಮೆಯ

ಸೀರೆಗಳನ್ನು ತಂದಿದ್ದ. ತಾಯಿಯೊಡನೆ ಮಾತನಾಡಿ, ಚಿನ್ನದ ನೆಕ್ಲೆಸ್ ಹಾಗೂ ಬಳೆಗಳನ್ನು ಮಾಡಿಸಿದ್ದ. ಪಲ್ಲವಿ ಹುಬ್ಬೇರಿಸಿದಳು. ಅವಳು ಕೇಳುವ ಮೊದಲೇ ಇವನು ಮಾತಾಡಿದ.

''ಇದು ಅಮ್ಮನ ನಿರ್ಧಾರ.. ಬಸಿರಿ ಹೆಂಗಸರ ಮನಸ್ಸು ಸೂಕ್ಷ್ಮವಾಗಿರುತ್ತೆ. ಒಡಲೊಳಗಿರುವ ಮಗು ನೊಂದುಕೊಳ್ಳುತ್ತೆ. ಇಬ್ಬರಲ್ಲೂ ತಾರತಮ್ಯ ಮಾಡಬಾರದು. ದೇವರು ನಮಗೆ ಸಾಕಷ್ಟು ಅನುಕೂಲವನ್ನು ಕೊಟ್ಟಿದ್ದಾನೆ. ಅಂತ ಅಮ್ಮ ಹೇಳಿದ್ಲು.''

''ಈಗ ನಾನೇನಂದೆ?''

''ನೀನು ಒಳ್ಳೆಯವಳು...ನಿನಗೂ ನಿನ್ನ ಸ್ನೇಹಿತೆಯ ಬಗ್ಗೆ ವಿಶ್ವಾಸ...''

''ಹಾಗೇನಿಲ್ಲ.. ಅವಳು ಶರತ್‌ನ ಮದುವೆಯಾಗಿದ್ದರೂ, ನಾನು ಅವಳ ಬಗ್ಗೆ ಚಿಂತಿಸುತ್ತಿರಲಿಲ್ಲ ಈಗ ಇಲ್ಲೇ ಎದುರಿಗೇ ಇದಾಳೆ. ಅವಳಿಗೆ ಅಸೂಯೆ ಆಗದಿರಲಿ ಅಂತ ಸುಮ್ಮನಿದೀನಿ. ಆದರೆ ಮುಂದೆ, ಮಗೂನ ನಾವೇ ಸಾಕೋಣ ಅಂತೆಲ್ಲಾ ಅನ್ಬೇಡಿ.. ಅವಳ ಹೊಟ್ಟೇಲಿ ಹುಟ್ಟುವ ಮಗುವಿನ ಜವಾಬ್ದಾರಿ ಅವರದು...''

''ಆ ಮಗು ನಿನ್ನನ್ನೇ ಅತ್ತೆ ಅಂತ ಕರೆಯೋದು.. ಮಕ್ಕಳು ದೇವರ ಸಮಾನ..ನಾವು ಬೇಧ ಮಾಡ್ಬಾರ್ದು.. ಮುಂದೆ ಅವರವರ ಹಣೇಲಿ ಬರೆದಂತೆ ಆಗುತ್ತೆ..''

''ಹಣೇ ಬರಹಾನ ಬರ್ಕ್ಕೊಂಡು ಹುಟ್ಟುತ್ವೆ..ನಂಗೊಂದಾಸೆ.. ನಮ್ಮ ಮಗುವಿಗೆ ನಿಮಗೆ ಇರೋ ಥರ ಗರುಡ ಮಚ್ಚೆ ಇದ್ದರೆ ಚೆನ್ನಾಗಿರುತ್ತೆ.. ಧೈರ್ಯಶಾಲಿಯಾಗಿರ್ತಾನೆ..''

''ಗರುಡ ಮಚ್ಚೆ ಇದ್ದರೆ ಎಲ್ರೂ ಹೆದರ್ತಾರೆ..'' ತಮಾಷೆ ಮಾಡಿದ.

''ನಾನೆಲ್ಲಿ ಹೆದರಿದೆ ನಿಮಗೆ?'' ಗರುಡ ಮಚ್ಚೆ ಇದ್ದ ಜಾಗವನ್ನು ಮುಟ್ಟಿದಳು.

''ಇಲ್ಲಿ ಮಚ್ಚೆ ಇದೆ ಅಂತ ನಿಂಗೇನು ಗೊತ್ತಿತ್ತು?.. ನೋಡಿದ್ದೇ ಮದುವೆ ಆದ್ಮೇಲೆ ತಾನೇ?'' ಅವಳು ಮೆಲ್ಲನೆ ಚಿವುಟಿದಳು. ಅವನು 'ಹ್ಲಾಂ' ಎಂದ.

''ಮುಂಚೇನೇ ತೋರ್ಸಿದ್ರೆ ಹೆದರ್ತಿದ್ನೋ ಏನೋ?..'' ಕಿಲ ಕಿಲ ನಕ್ಕಳು.

''ಹೌದು, ಖಂಡಿತಾ ಹೆದರ್ತಿದ್ದೆ.. ನಮ್ಮಿಬ್ಬರ ಮದುವೇನೂ ಆಗ್ತಿರ್ಲಿಲ್ಲ..'' ಅವನೂ ನಕ್ಕ. ಪಲ್ಲವೀ ನಮ್ಮ ಮಗೂಗೆ ಏನು ಹೆಸರನ್ನಿಡೋಣ?.. ಇದ್ದಕ್ಕಿದ್ದಂತೆ ಕೇಳಿದ.

''ಭುಜೀ ಪಿಜಿ ಅಂತ ಕರೆಯೋ ಹೆಸರು ಬೇಡ. ಸರಿಯಾದ ಹೆಸರನ್ನಿಡೋಣ..''

''ಯಾವುದೇ ಹೆಸರನ್ನಿಟ್ಟರೂ ಅಡ್ಡ ಹೆಸರು ಸುಲಭವಾಗಿ ಬಂದು ಬಿಡುತ್ತೆ...''

''ಶ್ವೇತಾ, ಮಗೂಗೆ 'ಅನಂಗ' ಅಂತ ಹೆಸರನ್ನಿಡ್ತಾಳಂತೆ.. ಈ ಹೆಸರನ್ನು ಸೂಚಿಸಿದವಳು ಹೇಮಾ ಅಂತೆ..''

''ಅನಂಗ ಅಂತಾ? ಹೆಸರೇನೋ ಚೆನ್ನಾಗಿದೆ. ಅರ್ಥ ಗೊತ್ತಾ ನಿಂಗೆ?.. ಮನ್ಮಥ ಅಂತ. ನಾವೂ ಹೇಮಾ ಹೇಳೋ ಹೆಸರನ್ನೇ ಇಡೋಣ..''

''ಏನೂ ಬೇಡ. ಅವಳ್ಯಾಕೆ ನಮ್ಮ ಮಗೂಗೆ ಹೆಸರಿಡ್ಬೇಕು?.. ನಾವು ತಂದೆ ತಾಯಿ ಅಂತ

ಇಲ್ವಾ! ಶ್ವೇತಂಗೆ ಹೇಮಳ ಬಗ್ಗೆ ಅತೀ ವಿಶ್ವಾಸ.. ಏನು ಹೇಳಿದ್ಲು ಗೊತ್ತಾ? ಭುಜಂಗ ಅನ್ನೋ ಹೆಸರಿಗೆ ಹೊಂದುತ್ತೆ ಅಂತಂದ್ಲು.. ಅವಳ ಮಾತಿಗೆ ಭುಜಂಗ ಗೊಳ್ಳನೆ ನಕ್ಕಾಗ ಅವಳು ಒಂದೇಟು ಹಾಕಿದಳು. ಏನು? ಬಹಳ ಖುಷಿ ಆಗ್ತಿದೆ?'' ಮುನಿಸಿನಿಂದ ಕೇಳಿದಳು.

''ಕೋಪ ಮಾಡ್ಕೋ ಬೇಡ್ವೇ?.. ನಮ್ಮ ಮಗೂಗೆ 'ಪತಂಗ' ಅಂತ ಹೆಸರನ್ನಿಡೋಣ. 'ಪ'ಕಾರದಿಂದ ಪ್ರಾರಂಭವಾಗುತ್ತೆ. 'ಗ'ಕಾರ ಕಡೆಯಲ್ಲಿ ಬರುತ್ತೆ, ಏನಂತೀಯ?''

''ನಿಮಗೆ ತಮಾಷೆ! ನಾನು ಒಂದು ಒಳ್ಳೆಯ ಹೆಸರನ್ನು ಯೋಚಿಸ್ತೀನಿ. ಇನ್ನು ಸಮಯವಿದೆಯಲ್ಲ.'' ಭುಜಂಗ ಅವಳ ದಪ್ಪಗಾದ ಬಸಿರನ್ನೇ ನೋಡಿದ.

''ದಿನ ದಿನಕ್ಕೂ ನಿನ್ನ ಅಂದ ಹೆಚ್ಚಾಗ್ತಿದೆ. ದಪ್ಪವೂ ಆಗಿ ಬಿಟ್ಟಿದ್ದೀಯ. ಅವಳಿ ಮಕ್ಕು ಹುಟ್ಟಿದರೆ?''

''ನಂಗೆ ಬೇಸರವೇನೂ ಇಲ್ಲ, ಒಳ್ಳೇದೇ ಆಯ್ತು. ಒಂದೇ ಸಲಕ್ಕೆ ಎರಡು, ಎಷ್ಟು ಚೆನ್ನಾಗಿರುತ್ತಲ್ವಾ! ಒಟ್ಟಿಗೇ ಬೆಳೆದು ದೊಡ್ಡವರಾಗ್ತಾರೆ.''

''ಈ ಸಾರಿ ಹೇಮಾ ಬಂದಾಗ, ಅವಳನ್ನು ಕೇಳ್ಬೇಕು. ಅವಳಿಗೆ ತಿಳಿಯುತ್ತೆ.''

''ನಾನು ಅವಳ ಹತ್ರ ನೋಡಿಸ್ಕೊಳ್ಳುಲ್ಲ.'' ಮೂತಿ ಊದಿಸಿದಳು.

''ನಿನ್ನಿಷ್ಟ. ಆದರೆ ಡಾಕ್ಟರು ಯಾರಾದ್ರೂ ಬೇಕಲ್ವಾ.. ಫಂಕ್ಷನ್ ಮುಗಿದ ಮೇಲೆ, ಈ ಊರಿನ ಲೇಡಿ ಡಾಕ್ಟರ್ ಹತ್ರ ಕರ್ಕೊಂಡು ಹೋಗ್ತೀನಿ.. ಹೇಗೂ ಸಧ್ಯದಲ್ಲೇ ಹೇಮಾ ಹೊರಟು ಹೋಗ್ತಾಳಲ್ಲ'' ಪಲ್ಲವಿ ಓರೆಗಣ್ಣಿನಿಂದ ಅವನ ಕಡೆ ನೋಡಿದಳು. ಮುಖದಲ್ಲಿ ಬೇಸರದ ಕಳೆ ಇಲ್ಲದುದನ್ನು ಕಂಡು ನೆಮ್ಮದಿಗೊಂಡಳು.

* * *

ಶ್ವೇತಾ, ಪಲ್ಲವಿ ಇಬ್ಬರೂ, ತಲೆಗೆ ಎಣ್ಣೆಯನ್ನು ಒತ್ತಿಸಿಕೊಂಡು, ಅಭ್ಯಂಜನ ಸ್ನಾನವನ್ನು ಮಾಡಿದರು. ಬಿಸಿಲಲ್ಲಿ ತಲೆಗೂದಲನ್ನು ಒಣಗಿಸಿಕೊಂಡು, ಸಿಕ್ಕನ್ನು ಬಿಡಿಸಿ ಬಾಚಿ, ಅಳ್ಳಕವಾಗಿ ಜಡೆಯನ್ನು ಹೆಣೆದುಕೊಂಡು ಹೂವನ್ನು ಮುಡಿದುಕೊಂಡು ಸಿದ್ಧಳಾದ ಪಲ್ಲವಿಯನ್ನು ಭುಜಂಗ ಹತ್ತಿರದಿಂದ ವೀಕ್ಷಿಸಿದ. ಪಲ್ಲವಿ ನಾಚಿದಳು.

''ಒಳ್ಳೇ ರತಿ ತರಹ ಕಾಣ್ತಿದೀಯ. ನನ್ನ ಹತ್ತಿರ ಕ್ಯಾಮೆರಾ ಇಲ್ಲ, ನಾನು ಈಗಲೇ ಹೋಗಿ, ಫೋಟೋಗ್ರಾಫರ್‌ನ ಕರ್ಕೊಂಡು ಬರ್ತೀನಿ..''

''ನೀವು ಹೋಗ್ಬೇಡಿ. ಚಿದಾನಂದನಿಗೆ ಹೇಳಿ ಅವನೂ ಸ್ವಲ್ಪ ಕೆಲ್ಸ ಮಾಡ್ಲಿ.''

''ಪರವಾಗಿಲ್ಲ, ಎಷ್ಟು ಹೊತ್ತಾಗುತ್ತೆ? ಬೈಕ್‌ನಲ್ಲಿ ಹೋಗಿ ಬಂದು ಬಿಡ್ತೀನಿ..''

''ನಾನೂ ನೋಡ್ತಿದೀನಿ ಎಲ್ಲವನ್ನು, ಅವನೇನೂ ಮಾಡ್ತಿಲ್ಲ...ಸುಮ್ನೆ ಅವನಿಗೆ ಹೇಳಿ'' ಭುಜಂಗ ಮುಗುಳ್ನಕ್ಕು ಅವಳ ಕೆನ್ನೆಯನ್ನು ಸವರಿದ. ರೂಮಿನ ಬಾಗಿಲಿನಲ್ಲಿ ನಿಂತಿದ್ದ ಹೇಮಾ ಮೆಲ್ಲನೆ ಕೆಮ್ಮಿದಳು. ಭುಜಂಗ ಬೆಚ್ಚಿ ಹಿಂತಿರುಗಿ ನೋಡಿದ.

"ಅರೇ ಹೇಮಾ...ಯಾವಾಗ ಬಂದ್ಯೇ?... ಒಬ್ಬಳೇ ಬಂದ್ಯಾ?" ಎಂದು ಕೇಳುತ್ತಾ ಅವಳನ್ನು ಸಮೀಪಿಸಿದ. ಪಲ್ಲವಿ ನಿರುತ್ಸಾಹದಿಂದ ಹಾಸಿಗೆಯ ಮೇಲೆ ಕುಳಿತಳು.

"ಈಗ್ತಾನೇ ಬಂದೆ. ಹೇಗಿದೀರಿ ಪಲ್ಲವೀ...? ಏನಂತಾನೆ ನಮ್ಮ ರಾಜಕುಮಾರ, ತುಂಟಾಟ ಮಾಡ್ತಾನಾ! ಓಡಾಡ್ತಾನಾ?" ಪಲ್ಲವಿ ಮುಜುಗರದಿಂದ ಭುಜಂಗನ ಕಡೆ ನೋಡಿದಳು. ಅವನು ಭುಜವನ್ನು ಎತ್ತಿ ಕತ್ತನ್ನು ಅತ್ತಿತ್ತ ಆಡಿಸಿದ. ಅಲ್ಲಿಂದ ಹೊರ ನಡೆದ.

"ಶ್ವೇತನ್ನ ನೋಡಿ ಮಾತ್ನಾಡ್ಸಿದ್ರಾ..?.. ನಂಗಿಂತ ಮೊದಲು ಅವಳಿಗೆ ಹೆರಿಗೆ ಆಗುತ್ತಂತೆ. ಅದ್ಹೇಗೆ?" ಪಲ್ಲವಿ ಪ್ರಶ್ನಿಸಿದಳು.

"ಹೂಂ, ಸ್ವಲ್ಪ ಲೆಖ್ಖಾಚಾರ ತಪ್ಪಿದೆ. ಅವಳು ಪರ್ಫೆಕ್ಟ್ ಆಗಿದಾಳೆ. ಮಗುವಂತೂ ತುಂಬಾ ಆಕ್ಟಿವ್ ಆಗಿದೆಯಂತೆ.." ಎನ್ನುತ್ತಾ ಪಲ್ಲವಿಯ ಹೊಟ್ಟೆಯ ಮೇಲೆ ಕೈಯನ್ನಿಟ್ಟು ಪರೀಕ್ಷಿಸಿದಳು. ಪಲ್ಲವಿ ಅಸಹನೆಯಿಂದ ಚಡಪಡಿಸಿದಳು.

"ಯಾರಾದ್ರೂ ಕೈಯನ್ನಿಟ್ಟರೆ ಭಾರ ಅಂತ ಅನ್ಸುತ್ತೆ.." ಮುಖವನ್ನು ಕಿವುಚಿದಳು.

"ನನ್ನ ಕೈ ಭಾರವೇ ಇಲ್ಲ ಶ್ವೇತನನ್ನು ಹೀಗೇ ಪರೀಕ್ಷಿಸಿದೆ" ಎನ್ನುತ್ತಾ ಮುಂದುವರೆಸಿದಳು. ಪಲ್ಲವಿ ಅಸಹ್ಯದಿಂದ ಸಹಿಸಿಕೊಂಡಳು.

"ನೀವು ಲಕ್ಕೀ ಪಲ್ಲವಿ. ಎಲ್ಲಾ ಪರ್ಫೆಕ್ಟ್ ಆಗಿದೆ..." ಎಂದಳು ಖುಷಿಯಿಂದ.

"ನೀವು ಫಾರಿನ್ನಿಗೆ ಯಾವಾಗ ಹೊರಡ್ತಿದೀರಿ...?"

"ಓ, ಭುಜಂಗ ಹೇಳಿದ್ನಾ! ಇನ್ನು ಟಿಕೆಟ್ ಆಗಿಲ್ಲ..ಏನೂ ವರಿ ಮಾಡ್ಕೋ ಬೇಡಿ.. ಇಲ್ಲಿಯ ನರ್ಸಿಂಗ್ ಹೋಂ ನ ಡಾಕ್ಟರ್ರು ನನ್ನ ಪರಿಚಯದವರು. ನಾನೇ ಅವರ ಹತ್ರ ನಿಮ್ಮಿಬ್ಬರ ಬಗ್ಗೆ ಮಾತಾಡ್ತೀನಿ. ಭುಜಂಗನ ಮಗುವಿಗೆ 'ಪುರು' ಅಂತ ಹೆಸರಿಡಿ. ಚೆನ್ನಾಗಿರುತ್ತೇ...ಒಪ್ತೀರ್ತೇ."

"ಪುರು" ಅಂತ್ಲಾ..? ಬೇಸರದಿಂದ ಕೇಳಿದಳು. "ನೋಡೋಣ" ಗೊಣಗಿದಳು.

"ಯಾಕೆ ಇಷ್ಟವಾಗ್ಲಿಲ್ವಾ!.. ನನಗೆ ಇಷ್ಟವಾದ ಹೆಸರು.."

"ನಿಮಗೇ ಹುಟ್ಟುವ ಮಗುವಿಗೆ ಇಡಬಹುದಲ್ಲ.." ಕೆಟ್ಟದಾಗಿ ನಕ್ಕಳು.

"ಷ್...ಮೆಲ್ಲಗೆ.. ನನಗೆ ಮದುವೆಯಾಗಿರುವ ವಿಚಾರ ಇಲ್ಲಿ ಯಾರಿಗೂ ಗೊತ್ತಿಲ್ಲ"

"ಬಂದಿದೀರಲ್ಲ ಎಲ್ರಿಗೂ ಹೇಳ್ಬಿಡಿ..." ಪಿಸುದನಿಯಲ್ಲಿ ಸ್ಪಷ್ಟವಾಗಿ ಹೇಳಿದಳು.

"ಪಲ್ಲವೀ.. ಅದು ನನ್ನ ಸ್ವಂತ ವಿಚಾರ..." ಖಾರವಾಗಿ ಹೇಳಿದಳು.

"ಸಾರೀ.. ಹೋಗ್ಲಿ ಬಿಡಿ..." ಉದಾಸೀನತೆಯನ್ನು ತೋರಿದಳು.

"ಪರವಾಗಿಲ್ಲ ಎನಿವೇ ಥ್ಯಾಂಕ್ಸ್ ಎ ಲಾಟ್...ಹಣ ಕೊಟ್ಟಿದ್ದಕ್ಕೆ..."

"ನನ್ನ ಹತ್ರ ಇತ್ತು.. ನಂಗೆ ಬೇಕಿರ್ಲಿಲ್ಲ ಕೊಟ್ಟೆ.. ಅಷ್ಟೇ..."

"ಇದ್ದರೂ ಕೊಡೋವಷ್ಟು ದೊಡ್ಡ ಗುಣ ಯಾರಿಗಿರುತ್ತೇ?.. ನಿಧಾನವಾಗಿ ಎಲ್ಲವನ್ನೂ ವಾಪಸ್ಸು ಕೊಟ್ಬಿಡ್ತೀನಿ."

"ಪರವಾಗಿಲ್ಲ, ಕೊಡೋದೇನೂ ಬೇಡ.. ಹಣದ ಅಗತ್ಯ ನಂಗಿಲ್ಲ."

"ಯಾಕೇ? ಅದು ರಾಜೀವ ಕೊಟ್ಟ ಹಣ ಅಂತ್ಲಾ?" ಪಲ್ಲವಿಯ ಮುಖ ಬೆಳ್ಳಗಾಯಿತು.. ಅವಳನ್ನೇ ನೇರವಾಗಿ ನೋಡಿದಳು.

"ರಾಜೀವ ನಿಮಗೆ ಗೊತ್ತಾ?"

"ಹುಂ, ಗೊತ್ತು." ಎಂದಷ್ಟೇ ಹೇಳಿದಳು. ಯಾರು ಹೇಳಿದ್ದು ಅಂತ ಇವಳೂ ಕೇಳಲಿಲ್ಲ, ಅವಳೂ ಹೇಳಲಿಲ್ಲ, ಹೇಮಾ, ಅವಳ ಚಡಪಡಿಕೆಯನ್ನು ಗಮನಿಸಿದಳು. ಅವಳ ಆರೋಗ್ಯಕ್ಕೆ ಒಳ್ಳೆಯದಲ್ಲ ಎಂದು ಅರಿತು, ಅವಳ ಕೆನ್ನೆಯನ್ನು ಸವರಿದಳು.

"ಹೆದರ್ಬೇಡಿ, ನಾನು ಯಾರನ್ನೂ ಕೇಳುಲ್ಲ, ಯಾರಿಗೂ ಹೇಳುಲ್ಲ.. ಓ.ಕೇ.." ಎನ್ನುತ್ತಾ ಅಲ್ಲಿಂದ ಹೊರ ನಡೆದಳು. ಮೈಯ ಬೆವರನ್ನು ಒರೆಸಿಕೊಳ್ಳುತ್ತಾ, ಗಂಭೀರವಾಗಿ ಕುಳಿತಿದ್ದವಳನ್ನು ಭುಜಂಗ ಎಚ್ಚರಿಸಿದ.

"ಏನಾಯ್ತು ಪಲ್ಲವಿ? ಹೇಮಾ ಏನಂದ್ಲು?"

"ಏನೂ ಇಲ್ಲ, ನಾನು ಅವತ್ತೇ ಹೇಳಿರ್ಲಿಲ್ವಾ? ನನಗೆ ಅವಳು ಚೆಕಪ್ ಮಾಡುವುದು ಸುತರಾಂ ಇಷ್ಟವಿಲ್ಲ."

"ಅಷ್ಟೇ ತಾನೇ? ಕೆಲವು ಸಾರಿ ನಮಗೆ ಇಷ್ಟವಿಲ್ಲದ ಕೆಲಸಗಳನ್ನು ಸಹಿಸಿಕೊಳ್ಳಬೇಕಾಗುತ್ತದೆ. ನನಗೋಸ್ಕರ, ನನ್ನ ಮಗುವಿಗೋಸ್ಕರ ಇನ್ನೆರಡು ಮೂರು ತಿಂಗಳು ಎಲ್ಲವನ್ನು ಸಹಿಸ್ಕೋ...ಈಗ ಕೆಳಗಿಳಿದು ಬಾ.. ಎಲ್ರೂ ಕಾಯ್ತಾ ಇದಾರೆ. ತಿಂಡಿ ಕಾಫಿ ಸಿದ್ಧವಾಗಿದೆ..

"ನಿಮ್ಮಕ್ಕ ಬರ್ಲೇ ಇಲ್ಲ.."

"ಅವಳು ಅತ್ತೇ ಮನೆಯ ಸೊಸೆ, ಎಲ್ರೂ ನಿನ್ನ ಹಾಗೆ ಅದೃಷ್ಟವಂತರಾಗಿರುಲ್ಲಮ್ಮ. ಅವಳಿಗೆ ಮದುವೆಯಾಗಿ ಐದು ವರ್ಷಗಳಾದ್ರೂ ಮಕ್ಕಳಾಗಿಲ್ಲ. ಅವರತ್ತೆಗೆ ಅದೇ ಕೋಪ.."

"ಅದರಲ್ಲಿ ನಿಮ್ಮ ಅಕ್ಕನ ತಪ್ಪೇನಿದೆ ! ನಿಮ್ಮ ಭಾವಂದೂ ಏನು ಕತೆಯೋ?.."

"ಈ ಕಾಲದಲ್ಲೂ ಗಂಡಸ್ರು ಟೆಸ್ಟ್ ಮಾಡಿಸ್ಕೊಳ್ಳೋಕೆ ಹೆದರ್ತಾರೆ..ಅದಕ್ಕೇ ಹೇಳಿದ್ದು ಹೇಮಾ ಹೇಳಿದ್ದೊಡ್ಲೇ ನಾನು ಟೆಸ್ಟ್ ಮಾಡಿಸ್ಕೊಂಡೆ.." ಬೀಗುತ್ತಾ ಹೇಳಿದ.

"ಒಂದು ವೇಳೆ...ರಿಪೋರ್ಟ್‌ನಲ್ಲಿ ಹೆಚ್ಚು ಕಡಿಮೆ ಆಗಿದ್ದಿದ್ರೆ?..ರೇಗಿಸಿದಳು.

"ನಿನಗೆ ಡೈವೋರ್ಸ್ ಕೊಟ್ಟು ಬಿಡ್ತಿದ್ದೆ" ತಮಾಷೆಗಾಗಿ ನುಡಿದ.

"ಅಷ್ಟು ಸುಲಭವಾಗಿ ನನ್ನನ್ನು ಬಿಟ್ಟು ಬಿಡ್ತಿದ್ರಾ? ಇಷ್ಟೇನಾ ನಿಮ್ಮ ಪ್ರೀತಿ?"

"ಮತ್ತೇನು ಮಾಡಬಹುದು ನೀನೇ ಹೇಳು..." ಅವಳ ಎದುರಿಗೆ ಕುಳಿತ.

"ನಂಗೊತ್ತಿಲ್ಲ, ಡಾಕ್ಟ್ರು ಹೇಳೋ ಸಲಹೆಗಳನ್ನು ಕೇಳಿದ್ರೆ ಒಂಥರಾ ಆಗುತ್ತೆ.." ಹೋಗ್ಲಿ ಬಿಡಿ. ಆ ಮಾತು ಈ ಹೊತ್ನಲ್ಲಿ ಬೇಡ. ನಮ್ಮ ಪುಟ್ಟಂಗೂ ಇವತ್ತು ಸಂಭ್ರಮ ಉತ್ಸಾಹದಿಂದ ಓಡಾಡ್ತಾ ಇದಾನೆ..."

"ಹೌದಾ? ಎನ್ನುತ್ತಾ ಅವಳ ಹೊಟ್ಟೆಯ ಮೇಲೆ ಕೈಯಾಡಿಸಿದ. "ಅಪ್ಪಾ...ಅತ್ಗೇ.." ವಾಣಿ

ಕೆಳಗಿನಿಂದ ಏರು ಧ್ವನಿಯಲ್ಲಿ ಕರೆದಾಗ, ಇಬ್ಬರೂ ಮಂಚದಿಂದ ಇಳಿದರು.. ಏಕಾಂತದಲ್ಲಿರೋಕೇ ಬಿಡುಲ್ಲ, ಒಬ್ಬರಲ್ಲ ಒಬ್ಬರು ಕರೀತಾನೇ ಇರ್ತಾರೆ...ಇವತ್ತು ನಿನ್ನನ್ನು ತುಂಬಾ ಮುದ್ದಿಸ್ಬೇಕು ಅಂತ ಆಸೆ ಆಗ್ತಿದೆ.. ಎಂದ ಅವಳ ತಲೆಗೆ ತಲೆಯನ್ನು ತಾಗಿಸಿ.."

"ಚಿದಾನಂದ, ಶ್ವೇತನ್ನ ಹೀಗೆ ಸತಾಯಿಸುವುದೇ ಇಲ್ಲ.. ಅವಳು ಹೇಳಿದ ಹಾಗೆ ಕೇಳ್ತಾನೆ..."

"ನಾನು ನೀನು ಹೇಳಿದಂತೆ ಕೇಳುಲ್ವಾ! ನಿಂಗೂ ಇದೆಲ್ಲಾ ಬೇಕು ಅಲ್ವಾ?" ಪಲ್ಲವಿ ನಾಚಿದಳು. ನನಗೆ ಹತ್ತು ಮಕ್ಕಳಾದರೂ, ನಾನು ನಿನ್ನನ್ನು ಹೀಗೇ ಸತಾಯಿಸ್ತೀನಿ. ಪಲ್ಲವೀ ನಾನು ತುಂಬಾ ಅದೃಷ್ಟವಂತ.. ನೀನು ನನ್ನ ಮೆಚ್ಚಿನ ಮಡದಿ.." ಎನ್ನುತ್ತಾ ಮುದ್ದಿಸಿದ.

"ಮುಚ್ಚಟೆ ಜಾಸ್ತಿಯಾಯ್ತು, ನಡೀರಿ.. ಇಲ್ದಿದ್ರೆ, ನಿಮ್ಮ ಅಜ್ಜೀನೇ ಬಂದು ಬಿಡ್ತಾರೆ," ಅವಳು ನಕ್ಕಳು. ಅವನೂ ನಗುವನ್ನು ಸೇರಿಸಿದ. ಇಬ್ಬರೂ ಕೆಳಕ್ಕೆ ಬಂದರು.

* * *

ಮೊದಲು ಶ್ವೇತಾಳಿಗೆ ಹೇಮಾ ಅಲಂಕಾರ ಮಾಡಿದಳು. ತನ್ನ ಬಳಿ ಇದ್ದ ಒಡವೆ ಸೆಟ್‌ನ್ನು ಅವಳಿಗೆ ಕೊಟ್ಟಳು.. ಶ್ವೇತಾ ಸಂಕೋಚದಿಂದ ತೆಗೆದುಕೊಂಡಳು.

"ಇಷ್ಟೆಲ್ಲಾ ಭಾರಿ ಒಡವೆ ಯಾಕೆ?"...

"ನನ್ನ ಭುಜಂಗನ ಮಗುವನ್ನು ನಿನ್ನ ಒಡಲಲ್ಲಿ ಹೊತ್ತಿದೀರ. ಇದಕ್ಕಿಂತ ಬೇರೆ ವಿಷಯ ಬೇಕಾ?.. ನೀವು ತುಂಬಾ ಚೆನ್ನಾಗಿ ಕಾಣ್ತೆದೀರಿ ಶ್ವೇತಾ.. ಈಗಲೇ ತೊಟ್ಕೊಳ್ಳಿ..ನಾನು ನೋಡ್ಬೇಕು..."

"ಸರಿ" ಎನ್ನುತ್ತಾ ಶ್ವೇತಾ ತನಗಾಗಿ ತಂದಿದ ಹಸಿರು ಸೀರೆಯನ್ನುಟ್ಟು, ಅದಕ್ಕೆ ಹೊಂದುವ ಹಸಿರು ರವಿಕೆಯನ್ನು ತೊಟ್ಟಳು. ಹೇಮಾ ಕೊಟ್ಟ ಚಿನ್ನದ ನೆಕ್ಲೇಸ್‌ನ್ನು, ಓಲೆ, ಝುಮುಕಿಗಳನ್ನು ತೊಟ್ಟಳು. ರೂಮಿನಿಂದ ಹೊರಬಂದವಳನ್ನೇ ಹೇಮಾ ನಿಬ್ಬೆರಗಾಗಿ ದಿಟ್ಟಿಸಿದಳು.

"ನಿಮ್ಮನ್ನು ನೋಡಿದ್ರೆ, ನನಗೂ ಈ ಸಂಭ್ರಮಗಳ ಆಸೆ ಆಗ್ತಿದೆ...ನನಗೆ ಈ ಮಗುವನ್ನು ಕೊಟ್ಬಿಡಿ.."

"ಮತ್ತೇ ನಂಗೆ?.," ಸವಾಲೆಸೆದಳು.

"ಚಿದಾನಂದನನ್ನ ಕೇಳಿ.. ಸಂತೋಷವಾಗಿ ಕೊಡ್ತಾನೆ.. ನಿಮಗ್ಯಾಕೆ ಈ ಮಗು?.."

"ತಮಾಷೆ ಮಾಡ್ಬೇಡಿ ಹೇಮಾ...ನಂಗೆ ದಿಗಿಲಾಗುತ್ತೇ. ಇದು ನಾನು ಬಯಸಿ ಹೊತ್ತಿರುವ ಮಗು.. ನಿಮ್ಮ ಮದುವೆ ಯಾವಾಗ?.. ನೀವು ಪ್ಲ್ಯಾನ್ ಮಾಡ್ಬೇಡಿ.. ಬೇಗ ಬೇಗ ಎರಡು ಮಕ್ಕಳನ್ನು ಹೆತ್ತು ಬಿಡಿ.."

"ನೋಡೋಣ..." ಎಂದು ಹೇಳಿ, ಪಲ್ಲವಿಗೂ ನಾನೇ ಅಲಂಕಾರ ಮಾಡ್ಬೇಕು ಅಂತ ಆಸೆ ಆಗ್ತಿದೆ... ಅದೂ ಭುಜಂಗನ ಮಗುವೇ.."

"ಅದು ನನ್ನ ಮಗು ಕೂಡಾ...ನಾನೂ ಬರ್ತೀನಿ ತಡೀರಿ..."

"ಬೇಡ, ಈ ಅವಕಾಶ ನನಗಿರಲಿ..."

"ಅವಳು ಒಂಥರಾ..ನಿಮ್ಮ ಹತ್ರ ಮಾಡಿಸ್ಕೊಳ್ತಾಳೋ ಇಲ್ವೋ..."

"ಭುಜಂಗನಿಗೆ ಹೇಳ್ತೀನಿ. ಅವನು ಒಪ್ಪಿಸ್ತಾನೆ.." ಎನ್ನುತ್ತಾ ವೇಗವಾಗಿ, ಭುಜಂಗನ ಮನೆಯ ಕಡೆಗೆ ಬಂದಳು. ಪಲ್ಲವಿ ಅಲಂಕಾರವನ್ನು ಪೂರೈಸಿ, ಹೊಸಾ ಹಸಿರು ರೇಶಿಮೆಯ ಸೀರೆಯನ್ನುಟ್ಟು ಸಿದ್ಧಳಾಗಿ ಕುಳಿತಿದ್ದಳು. ಹೊಸದಾಗಿ ಮಾಡಿಸಿದ ಒಡವೆಗಳ್ನು ಧರಿಸಿದ್ದಳು. ಹೇಮಾಳ ಮುಖ ಚಿಕ್ಕದಾಯಿತು. ಆದರೂ ಪಲ್ಲವಿಯನ್ನು ಗಮನವಿಟ್ಟು ನೋಡಿದಳು. ಭುಜಂಗ ಅವಳ ಮೊಣಕೈ ತಿವಿದು ಕೆಳಗಿನ ಧ್ವನಿಯಲ್ಲಿ ನುಡಿದ.

"ಅಷ್ಟೊಂದು ನೋಡ್ಬೇಡ, ದೃಷ್ಟಿ ತಾಗುತ್ತೆ.."

"ಹಾಗೇನೂ ಆಗುಲ್ಲ.. ನಿನ್ನ ಹೆಂಡತಿಗೆ ನಾನೇ ಕೈಯಾರ ಅಲಂಕಾರ ಮಾಡುವ ಆಸೆಯಿಂದ ಬಂದೆ.. ಶ್ವೇತಾಗೆ ನಾನೇ ಅಲಂಕಾರ ಮಾಡಿದೆ..."

"ಶ್ವೇತಂಗಿರುವ ಸಹನೆ ಪಲ್ಲವಿಗಿಲ್ಲ, ಪರವಾಗಿಲ್ಲ ಬಿಡು.. ಅತ್ತೇ ಏನ್ಮಾಡ್ತಿದ್ರು? ಇನ್ನು ಬಂದೇ ಇಲ್ಲ.."

"ಬರ್ತಾಳೆ ಬಿಡು. ಅವಳಿಗೆ ಏನೋ ದುಃಖ...ನನ್ನ ಮದುವೆ, ನನ್ನ ಮಕ್ಕಳು ಇದೇ ಚಿಂತೆ.. ನೀನೇ ಹೇಳು.. ಈ ಮಕ್ಕಳು ನನ್ನವೇ ತಾನೇ.." ಜೋರಾಗಿ ನಕ್ಕಳು.

"ಏನೇ ಹೀಗಂತೀ?.. ನೀನು ಎತ್ತಿಕೊಂಡು ಹೋಗುವ ಪ್ಲ್ಯಾನ್ ಏನಿಲ್ಲ ತಾನೇ?"

"ಕೇಳಿದ್ರೆ ಕೊಡ್ತೀಯಾ?.."

"ನಿಂಗ್ಯಾಕೆ ನನ್ನ ಮಗು?... ಯಾವಾಗ ನಿನ್ನ ಹನಿಮೂನ್?.."

"ಥೂ ಹೋಗೋ.. ಏನೇನೋ ಪ್ರಶ್ನೆ ಕೇಳ್ತಾನೆ.. ಅವಳು ಚಟ್ ಎಂದು ಅವನ ತೋಳ ಮೇಲೆ ಹೊಡೆದಳು. ಆ ಸದ್ದಿಗೆ ಪಲ್ಲವಿ ಇತ್ತ ತಿರುಗಿದಳು. ಅವಳ ಮುಖ ಗಂಭೀರವಾಯಿತು. ಅದನ್ನು ಗಮನಿಸಿ, ಭುಜಂಗ ಇತ್ತ ಬಂದ.

"ವಾಣೀ ಹೋಗೇ, ಶ್ವೇತಾನ್ನೂ, ಅತ್ತೇರಿಬ್ರನ್ನೂ ಕರೆದ್ಬಾ ಮಡಿಲು ತುಂಬಿ ಆರತಿ ಶಾಸ್ತ್ರ ಮಾಡಿ ಬಿಡೋಣ. ಅಕ್ಕ ಪಕ್ಕದ ಮನೆಯ ಮುತ್ತೈದೆಯರೆಲ್ಲ ಬಂದಾಯ್ತು.." ಸಾವಿತ್ರಿ ನುಡಿದಾಗ ವಾಣಿ ಓಡಿದಳು.

"ಅತ್ತೇ...ನಾನೇನಾದ್ರೂ ಹೆಲ್ಪ್ ಮಾಡ್ಲಾ?" ಹೇಮ ಕೇಳಿದಳು.

"ಏನೂ ಬೇಡ...ಕೂತ್ಕೋ..ಇನ್ಮುಂದೆ ನೀನೂ ಅಪರೂಪವೇ..." ಹೇಮಾ ಭುಜಂಗನ ಕಡೆ ನೋಡಿದಳು. ಅವನು ಕಣ್ಣು ತಪ್ಪಿಸಿದ. ಅಷ್ಟರಲ್ಲಿ ವಾಣಿ ಬಂದಿದ್ದಳು. ಅವಳೊಂದಿಗೆ ಚಿದಾನಂದನೂ ಬಂದ.

"ವಾಣೀ ಅವರ‍್ಯಾರೂ ಬರ‍್ಲಿಲ್ಲವೇನೆ?" ಸಾವಿತ್ರಿ ಕೇಳಿದಳು.

"ಬರ್ತಿದಾರಮ್ಮ...ಮಾವನೂ ಬರ್ತಿದಾರೆ...ನಿಧಾನವಾಗಿ" ನಕ್ಕಳು.

“ಒಳ್ಳೇದೇ ಆಯ್ತು.. ಅವರು ನಮ್ಮ ಮನೆಗೆ ಬಂದು ಯಾವುದೋ ಕಾಲ ಆಯ್ತು..”

“ನೋಡಿದ್ರಾ ಅತ್ತೇ ಮೊಮ್ಮಕ್ಕಳ ಮಹೀಮೇನ.. ಅಪ್ಪಾ ಓಡಾಡುವ ಹಾಗಾದ್ರು..”

“ನಿನಗೇ ಮಕ್ಕಳಾಗಲೀ.. ಸಂಭ್ರಮದಿಂದ ಕುಣಿದಾಡ್ತಾರೆ..” ಸಾವಿತ್ರಿಯ ನುಡಿ ಮತ್ತೆ ಅವಳನ್ನು ಪೆಚ್ಚಾಗ್ಗಿಸಿತು. ಭುಜಂಗನಿಗೂ ಮುಜುಗರವೆನಿಸಿತು.

“ಈ ಮಕ್ಕಳೂ ಮಾವಂಗೆ ಮೊಮ್ಮಕ್ಕಳಂತೆಯೇ...ಅವರೂ ಆಡಿಸ್ಬೇಕು..” ಭುಜಂಗ ಮಾತಾಡಿ, ಅವಳ ಕಡೆ ನೋಡಿ ಕಿರುನಗೆಯನ್ನು ನಕ್ಕ. ಅಷ್ಟರಲ್ಲಿ ಅವರುಗಳು ಬಂದಿದ್ದರು. ಅಲಂಕರಿಸಿದ್ದ ಕುರ್ಚಿಗಳ ಮೇಲೆ, ಶ್ವೇತಾ, ಪಲ್ಲವಿ ಕುಳಿತರು. ಯಾರೋ ಒಬ್ಬರು ಹಸೆಗೆ ಕರೆದ ಹಾಡನ್ನು ಹಾಡಿದರು. ಅವರಿಬ್ಬರ ನಡುವೆ ಹೇಮಾ ಬಂದು ನಿಂತಳು. ಬಂದಿದ್ದ ಫೋಟೋಗ್ರಾಫರ್ ಫೋಟೋಗಳನ್ನು ತೆಗೆದ. ಹೇಮಾ, ಭುಜಂಗನನ್ನು ಚಿದಾನಂದನನ್ನು ಕರೆದು ನಿಲ್ಲಿಸಿ ಫೋಟೋ ತೆಗೆಸಿದಳು.

ಮುತ್ತೈದೆಯರು ಇಬ್ಬರಿಗೂ ಅರಿಶಿನವನ್ನು ಹಚ್ಚಿ ಕುಂಕುಮವನ್ನಿಟ್ಟು ಹೂವನ್ನು ಮುಡಿಸಿದರು. ಹಣ್ಣು ಹಂಪಲುಗಳನ್ನೂ, ಉಂಡೆ ಚಕ್ಕುಲಿಗಳನ್ನೂ ಮಡಿಲಿಗೆ ತುಂಬಿದರು. ಹೇಮಾ ಅಲ್ಲೇ ನಿಂತಿದ್ದಳು. ಆರತಿಯನ್ನೆತ್ತಿದರು. ದೃಷ್ಟಿಯನ್ನು ತೆಗೆದರು. “ಎಲ್ಲಾ ಫೋಟೋಗಳನ್ನು ಸರಿಯಾಗಿ ತೆಗೀರಪ್ಪಾ” ಹೇಮಾ ಹೇಳಿದಳು.

“ಹೇಮಾ, ಆ ಬಸಿರಿ ಹುಡಿಗೀರ ಮಧ್ಯೆ ನಿಂದೇನೇ?.. ಇತ್ಲಾಗೆ ಬಾ.. ಅಲ್ಲಿ ನೀನ್ಯಾಕೆ?” ವೈದೇಹಿ ಕರೆದಳು. ತನ್ನ ಅಸಹನೆಯನ್ನು ತೋರಿದಳು.

“ಇರಲಿ ಬಿಡು ವೈದೇಹಿ.. ಅಪರೂಪಕ್ಕೆ ಸಂಭ್ರಮ ಪಡ್ತಿದಾಳೆ. ಉತ್ಸಾಹದಿಂದ ಇದಾಳೆ. ಡಾಕ್ಟರ್ರಾದೋಳಿಗೆ ಇದರಲ್ಲಿ ಆಸಕ್ತಿ ಎಂದರೆ ಆಶ್ಚರ್ಯವೇ..” ಸಾವಿತ್ರಿ ಎಂದಳು.

“ಏನು ಉತ್ಸಾಹವೋ? ಯಾಕೆ ಈ ಆಸಕ್ತಿಯೋ? ಎಲ್ರೂ ನಗುಲ್ವೇ?”

“ನಗಲಿ ಬಿಡು. ಇವರಿಬ್ಬರಿಗೂ ಇವಳೇ ಡಾಕ್ಟರ್ರು...” ಪಲ್ಲವಿ, ಶ್ವೇತಾ ಮುಖ ಮುಖ ನೋಡಿಕೊಂಡು ಮನದಲ್ಲೇ ನಕ್ಕರು. ಸಮಾರಂಭಕ್ಕೆ ಬಂದಿದ್ದ ಹೆಂಗಳೆಯರು, ಇಬ್ಬರಿಗೂ ಉಡುಗೊರೆಗಳನ್ನು ಹಣ್ಣುಗಳನ್ನು ಕೊಟ್ಟರು. ಹೇಮಾ ಎಲ್ಲವನ್ನೂ ತೆಗೆದಿಟ್ಟುಕೊಂಡಳು. ಪಲ್ಲವಿ ಭುಜಂಗನ ಕಡೆ ನೋಡಿ, ಉರಿಗಣ್ಣನ್ನು ಬೀರಿದಳು. ಶ್ವೇತಾ ಅವನ ಕಡೆ ನೋಡಿ ಕಿರುನಗೆಯನ್ನು ಬೀರಿದಳು. ಅವನು ಗಲಿಬಿಲಿಗೊಂಡಿದ್ದ. “ಇವಳ್ಯಾಕೆ ಹೀಗೆ ವಿಚಿತ್ರವಾಗಿ ವರ್ತಿಸುತ್ತಿದಾಳೆ? ಡಾಕ್ಟರಾದವಳಿಗೆ ಒಂದು ಘನತೆ ಬೇಡವೆ?.. ಈಗೇಕೆ ನನ್ನ ಬಗ್ಗೆ ಆಸಕ್ತಿ? ಮದುವೆಯಾದವಳು ಹೀಗಾಡುತ್ತಾಳೆಂದರೆ...ಏನಾಗಿದೆ ಇವಳಿಗೆ?..” ಅಲ್ಲಿ ನಿಲ್ಲುವ ಮನಸ್ಸಿಲ್ಲದೇ ಮುಂಬಾಗಿಲ ಬಳಿಗೆ ಬಂದು ನಿಂತ. ಬಂದಿದ್ದವರು, ಎಲೆ ಅಡಿಕೆ ಉಂಡೆ ಚಕ್ಕುಲಿಗಳ ಬಾಗಿನವನ್ನು ತೆಗೆದುಕೊಂಡು ಹೊರ ನಡೆದಿದ್ದರು.

ಸ್ವಲ್ಪ ಹೊತ್ತಿನ ಬಳಿಕ ಹೇಮಾ ಅವನಿದ್ದೆಡೆಗೆ ಬಂದಳು. ಅವನು ಕೈ ಕಟ್ಟಿ ನಿಂತಿದ್ದ. “ಯಾಕೋ ಬುಜೀ...ಒಬ್ಬನೇ ಇಲ್ಲಿ ನಿಂತಿದೀಯ...ಬೇಜಾರಾ?”

"ಅಲ್ಲಿ ಶೆಕೆ ಆಗ್ತಿತ್ತು.. ಇಲ್ಲಿ ತಂಗಾಳಿ ಬೀಸ್ತಿದೆ..ಅದಕ್ಕೇ ಬಂದೆ..."

"ನಿನ್ನ ಹೆಂಡ್ತಿ ಎಷ್ಟು ಲಕ್ಷಣವಾಗಿ ಕಾಣ್ತಿದಾಳೆ ಅಲ್ವಾ?...ಬಸಿರಿ ಹೆಂಗಸರಿಗೆ ಒಂಥರಾ ಕಳೆ ಬರುತ್ತೆ.. ಥ್ಯಾಂಕ್ಸ್ ಕಣೋ...ನೀನೂ ನಂಗೆ ಥ್ಯಾಂಕ್ಸ್ ಹೇಳ್ಬೇಕು.."

"ನಂಗೇನು ಗೊತ್ತು?.. ಥ್ಯಾಂಕ್ಸ್ ಯಾಕೆ?"

"ದಿನಾ ಪಲ್ಲವೀನ, ಶ್ವೇತನ್ನ ನೋಡ್ತೀಯ.. ಅಷ್ಟು ಗೊತ್ತಾಗುಲ್ವಾ? ದಡ್ಡ ನೀನು."

"ದಡ್ಡ ಅಂತಲೇ ತಾನೇ ನೀನು ನನ್ನನ್ನು ದೂರ ಮಾಡಿದ್ದು..."

"ಅದೇನು ಕೋಪದ ಮಾತೋ? ಅಥವಾ ಹಳೆಯ ಪ್ರೀತಿಯ ಮಾತೋ?"

"ನೀನು ಮದುವೆ ಆಗಿರೋದನ್ನ ಅತ್ತೆಗೆ ಹೇಳಿದ್ಯಾ?"

"ಷ್, ಮೆಲ್ಲಗೆ...ಯಾರಿಗಾದ್ರೂ ಕೇಳಿಸೀತು.. ನಂಗೆ ಭಯ...ಅಮ್ಮ ಬೈತಾಳೆ.."

"ಎಷ್ಟು ದಿನಾಂತ ಮುಚ್ಚಿಡ್ತೀಯ..? ಏನಾದ್ರೂ ಉಪಾಯಾನ ಹುಡ್ಕು.."

"ನೋಡೋಣ. ನಾನು ರಾತ್ರಿಯ ಬಸ್ಸಿಗೆ ವಾಪಸ್ಸು ಹೋಗ್ತಿದೀನಿ.."

"ಒಂದು ದಿನಕ್ಕೋಸ್ಕರ ಬಂದ್ಯಾ?.. ಸುಮ್ಮನೇ ದಂಡ. ಎರಡು ದಿನ ಇದ್ದೋಗು.. ಅಂದ್ಹಾಗೇ ಅವರು, ಎಲ್ಲಿದಾರೆ? ಅವರನ್ನು ಕರ್ಕೊಂಡು ಬರ್ಬೇಕಾಗಿತ್ತು.. ನೀನು..."

"ತಮಾಷೆ ಮಾಡ್ಬೇಡ ಭುಜೀ.. ಇದು ಹೆಂಗಸರ ಸಮಾರಂಭ.. ಅವನು ಇಲ್ಲಿಯವರಿಗೆ ಅಪರಿಚಿತ, ಹಾಸ್ಯಾಸ್ಪದವಾಗುತ್ತೆ.. ಅವನು ಎಲ್ಲಿಗೂ ಬರುಲ್ಲ."

"ಹೇಮಾ, ಒಳಕ್ಕೆ ಬರ್ಬೇಕಂತೆ.. ಅತ್ತೇ ಕರೀತಿದಾರೆ.." ಚಿದಾನಂದ ಬಂದು ಹೇಳಿದಾಗ, ಒಳಕ್ಕೆ ಬಂದರು.

"ಭಟ್ಟರು ಬೇರೆ ಕಡೆಗೆ ಹೋಗ್ಬೇಕಂತೆ...ಎಲ್ರೂ ಊಟಕ್ಕೆ ಕೂತ್ಕೊಂಡ್ಬಿಡಿ.. ಬಡಿಸಿ, ಕೆಲಸ ಮುಗಿಸಿ ಹೋಗ್ತಾರೆ.." ಸಾವಿತ್ರಿ ಹೇಳಿದಾಗ, ಎಲ್ಲರೂ ಊಟ ಮಾಡಲು ಕುಳಿತರು. ಊಟದ ನಂತರ ಹೊರಡುವ ಮೊದಲು ಹೇಮಾ ತಾನು ಪಲ್ಲವಿಗೆಂದು ತಂದಿದ್ದ ಒಡವೆ ಸೆಟ್‌ನ್ನು ಉಡುಗೊರೆಯನ್ನಾಗಿತ್ತಳು. ಪಲ್ಲವಿ ಹಿಂಜರಿದಳು.

"ಇದು ಮುತ್ತಿನ ಸೆಟ್. ನಿಮಗೆ ಚೆನ್ನಾಗಿ ಒಪ್ಪುತ್ತೆ.." ಭುಜಂಗ ತೆಗೆದುಕೋ ಎನ್ನುವಂತೆ ಕಣ್ಸನ್ನೆ ಮಾಡಿದಾಗ, "ಥ್ಯಾಂಕ್ಸ್" ಎಂದಳು.

"ನನಗೆ ಹಣದ ಸಹಾಯ ಮಾಡಿದೀರಿ. ನಾನೂ ಥ್ಯಾಂಕ್ಸ್ ಹೇಳ್ಬೇಕು.." ಎಂದು ಹೇಳಿ ಭುಜಂಗನ ಕಡೆ ತಿರುಗಿದಳು. "ಭುಜೀ ನನ್ನನ್ನ ಬಸ್‌ಸ್ಟಾಪ್‌ಗೆ ಬಿಡ್ತೀಯಾ?" ಕೇಳಿದಳು. ಅವನಿಗೆ ಕಸಿವಿಸಿಯಾಗಿತ್ತು. ಪಲ್ಲವಿಯ ಕಡೆ ನೋಡಿದ. "ಯಾಕೋ...ನಿನ್ನ ಹೆಂಡ್ತಿ ಪರ್ಮಿಷನ್ ಬೇಕಾ?... ಅವರು ಬೇಡಾಂತಾರಾ?.. ಏನ್ರೀ ನೀವು ಬೇಡಾಂತೀರಾ?"

"ಇಲ್ಲ, ಅದೇನ್ಮಾತು ಅಂತ..." ಸಂಕೋಚದಿಂದ ನುಡಿದ.

"ಸರಿ ನಡೀ ಮತ್ತೆ...ಗುಡ್‌ಲಕ್ ಪಲ್ಲವೀ" ಎಂದು ಹೇಳಿ, ಅವಳ ಕೆನ್ನೆ ಸವರಿ ಹೊಟ್ಟೆಯ ಮೇಲೆ ಲಘುವಾಗಿ ಹೊಡೆದಳು. ಪಲ್ಲವಿ ಮುಖ ಸಿಂಡರಿಸಿದ್ದನ್ನು ಭುಜಂಗ ಕಂಡ.

* * *

"ಅತ್ತಿಗೇ ನೀವಾದ್ರು ಬುದ್ಧಿ ಹೇಳಿ ಇದಕ್ಕೆ" ಎನ್ನುತ್ತಾ ವೈದೇಹಿ ಮನೆಯೊಳಕ್ಕೆ ಬಂದಳು. ಭುಜಂಗ ಹೇಮಾಳ ಕಡೆ ಪ್ರಶ್ನಿಸುವವನಂತೆ ನೋಡಿದ. ವಿದೇಶಕ್ಕೆ ಹೋಗ್ತಾಳಂತೆ.. ಇದುವರೆಗೆ ನಮ್ಮ ಮನಸ್ಸನ್ನು ನೋಯಿಸಿದ್ದು ಸಾಲ್ದಾ...ಇನ್ನಾದರೂ ತಿಳುವಳಿಕೆ ಬಂತು ಅಂತ ಅಂದ್ಕೊಂಡೆ.." ವೈದೇಹಿ ಅಳುವಿನ ಧ್ವನಿಯಲ್ಲಿ ನುಡಿದಳು.

"ಏನಾಯ್ತು ವೈದೇಹಿ? ಹೀಗೇಕೆ ಉದ್ವೇಗದಿಂದ ಮಾತಾಡ್ತಿದೀಯ...?"

"ನನ್ನ ಹತ್ರ ಹೇಳುಕ್ಕೆ ಬಾಯಿಲ್ಲ, ಭಯ, ಅಪ್ಪನ ಹತ್ರ ಹೇಳ್ಕೊಂಡಿದಾಳೆ. ಅವರೋ ಮೂಕ ಬಸವ. ಈ ವಯಸ್ನಲ್ಲಿ ನಮಗೆ ನೆಮ್ಮದಿಯನ್ನು ಕೊಡೋದು ಬಿಟ್ಟು ವಿದೇಶಕ್ಕೆ ಯಾಕೆ ಹೋಗ್ಬೇಕು? ನನ್ನ ಹೊಟ್ಟೆ ಉರಿದು ಹೋಗ್ತಿದೆ.. ನನ್ನ ಸಂಕಟ ಯಾರ್ಗೂ ಅರ್ಥವಾಗುಲ್ಲ." ಮತ್ತೆ ಅತ್ತಳು.

"ಅಳು ನಿಲ್ಲಿಸು.. ಇವತ್ತು ಈ ಮನೇಲಿ ಸಮಾರಂಭ ನಡೆದಿದೆ. ಗರ್ಭಿಣಿ ಹುಡುಗಿರಯ ಮುಂದೆ ಇದೆಂಥಾ ರಂಪ? ನಿನಗೆ ಅಷ್ಟೂ ತಿಳಿಯುಲ್ವಾ?"

"ತಿಳಿಯುತ್ತೆ ಅತ್ಗೇ.. ತಿಳಿಯುತ್ತೆ.. ಯಾರ್‍ಯಾರ ಮನಸ್ನಲ್ಲಿ ಏನೇನು ಇದೆ ಅಂತ ಎಲ್ಲಾ ತಿಳಿಯುತ್ತೆ. ನಿಮಗೆಲ್ಲ ಸಂಭ್ರಮ.. ನನ್ನ ಅಳಲು ನಿಮಗೆ ಹೇಗೆ ತಿಳಿಯುತ್ತೇ?.."

"ನಿನ್ನ ಮನಸ್ನಲ್ಲಿ ಇಂಥ ಕಹಿ ಇದೆ ಅಂತ ನಂಗೆ ತಿಳೀಲಿಲ್ಲ ವೈದೇಹಿ.. ಇದರಲ್ಲಿ ನಮ್ಮ ತಪ್ಪೇನಿದೆ!. ಇದು ನಿನ್ನ ಮಗಳದ್ದೇ ನಿರ್ಧಾರ.. ಅವಳು ಮದುವೆಯಾಗ್ಲಿಲ್ಲ.. ಮಕ್ಕಳನ್ನು ಹೆರಲಿಲ್ಲ ಅನ್ನೋ ಕೊರಗನ್ನು ಬಿಡು. ಅವಳು ದಿನಕ್ಕೆ ಹತ್ತಾರು ಹೆರಿಗೆ ಕೆಲಸ ಮಾಡಿಸ್ತಾಳೆ. ಅದು ಎಲ್ಲಕ್ಕಿಂತ ದೊಡ್ಡದು." ಸಮಾಧಾನ ಹೇಳುವಂತೆ ನುಡಿದಳು.

"ಏನು ಮಹಾ ದೊಡ್ಡದು? ಈ ಕೆಲಸವನ್ನು ಈ ಊರಿನ ಸೂಲಗಿತ್ತಿ ಸಹ ಮಾಡಿಸ್ತಾಳೆ. ನನಗೆ ಇವಳ ಈ ಸಮಾಜ ಸೇವೇಲಿ ಯಾವ ಹೆಚ್ಚುಗಾರಿಕೆಯೂ ಕಾಣ್ತಿಲ್ಲ, ನಾಲ್ಕು ಜನ ಹೆಂಗಸರಂತೆ ಸಂಸಾರ ಮಾಡ್ಕೊಂಡಿರಲಿ ಅಂತ ನನ್ನಾಸೆ.. ನನಗೂ ಮೊಮ್ಮಕ್ಕಳನ್ನು ಎತ್ತಿ ಆಡಿಸುವ ಆಸೆ.. ಅದು ತಪ್ಪಾ...?"

"ತಪ್ಪು ಅಂತ ಯಾರು ಹೇಳ್ತಾರೆ..? ಇವೆಲ್ಲಾ ತಕ್ಷಣಕ್ಕೆ ಸಾಧ್ಯವಾ?.. ಅವಳೂ ಹೆಣ್ಣು ಅವಳು ಮದುವೆಯಾಗ್ತಾಳೆ.. ಮಕ್ಕಳನ್ನೂ ಹೆರ್‍ತಾಳೆ.. ಮೊದಲು ಒಂದಿಷ್ಟು ಜನರ ಸೇವೆ ಮಾಡ್ಲಿ.. ಅದು ಪುಣ್ಯದ ಕೆಲಸ.. ನೀನೇ ನೋಡ್ತಿದೀಯಲ್ಲ.. ಶ್ವೇತನ್ನ ಪಲ್ಲವೀನ ಎಷ್ಟು ನಿಗವಾಗಿ ನೋಡ್ಕೋಳ್ತಿದಾಳೆ? ಅವಳಿಗೂ ಕರ್ತವ್ಯ ಪ್ರಜ್ಞೆ ಇದೆ. ಸಧ್ಯಕ್ಕೆ ಇವರಿಗೆ ಹುಟ್ಟುವ ಮಕ್ಕಳನ್ನೇ ನಿನ್ನ ಮೊಮ್ಮಕ್ಕಳು ಅಂತ ಅಂದ್ಕೋ...ಎತ್ತಿ ಆಡಿಸು.. ಬಾಣಂತನ ಮಾಡು.." ಭುಜಂಗನ ಕಡೆ ಹೇಮಾ ವಿಸ್ಮಯದಿಂದ ನೋಡಿದಳು. ಅವನು ಸುಮ್ಮನಿರು ಎನ್ನುವಂತೆ ಸಂಜ್ಞೆ ಮಾಡಿದ.

"ಸಾಕು ಅತ್ತಿಗೇ.. ಬಾಣಂತನ ಮಾಡು ಮಕ್ಕಳ ಉಚ್ಚೆ ಬಟ್ಟೆ ಒಗಿ ಅಂತೆಲ್ಲಾ ಸಲಹೆ ಕೊಡ್ಬೇಡಿ.." ವೈದೇಹಿ ಸಿಡಾರನೆ ನುಡಿದಾಗ, ಎಲ್ಲರೂ ಬೆಪ್ಪಾದರು. ಹೇಮಾ ತಾಯಿಯ ಎದುರಿಗೆ ಬಂದು ನಿಂತಳು.

"ಅಮ್ಮಾ...ಅತ್ತೇ ಮೇಲೆ ಯಾಕೆ ನಿಂಗೆ ಕೋಪ? ತಪ್ಪು ನನ್ನದು. ನನ್ನನ್ನು ಏನು ಬೇಕಾದ್ರೂ ಅನ್ನು, ನಾನು ಹೀಗೇ ಇರ್ತೀನಿ.. ಇನ್ಮುಂದೆ ಮಾತಾಡ್ಬೇಡ.."

"ಹೂಂ, ಇರು.. ನಿನಗೆ ಹೇಗೆ ಬೇಕೋ ಹಾಗೇ ಇರು. ನಮ್ಮನ್ನ ಕೇಳೋರ್ಯಾರು? ನಿನ್ನನ್ನ ಸಾಕಿ ಬೆಳೆಸಿದ್ದಕ್ಕೇ ಇದೇ ಫಲ...ಏನಾದ್ರೂ ಮಾಡ್ಕೋ.. ನಂಗೆ ನೀನು ಹುಟ್ಟಿಯೇ ಇಲ್ಲ ಅಂತ ತಿಳ್ಕೋತೀನಿ.." ಅವಳೂ ಭುಸುಗುಟ್ಟಿದಳು.

"ಅತ್ತೇ ಈಗ ಏನಾಯ್ತು ಅಂತ ಹೀಗಾಡ್ತೀರಿ?.. ಇವಳು ವಿದೇಶಕ್ಕೆ ಹೋದರೇನಂತೆ? ವಾಪಸ್ಸು ಬರೋದೇ ಇಲ್ವಾ?.." ಭುಜಂಗ ನುಡಿದ.

"ಬರ್ತಾಳೋ ಇಲ್ವೋ.. ಅವಳು ಬರೋವರ್ಗೂ ನಾನು ಬದುಕಿರ್ತೀನೋ ಇಲ್ವೋ.."

"ಅಮ್ಮಾ.. ನೀನು ಹೀಗೆಲ್ಲಾ ಮಾತಾಡೋದಾದ್ರೆ, ನಾನು ಮತ್ತೆಂದೂ ವಾಪಸ್ಸು ಬರೋದೇ ಇಲ್ಲ."

"ಹಾಗೇ ಮಾಡು, ನನಗೆ ಸುಖ ನೆಮ್ಮದಿ ಕೊಡ್ದೇ ಇದ್ದೋಳು ಎಲ್ಲಿದ್ರೇನು?" ಎಂದು ನುಡಿದ ವೈದೇಹಿ ಹೊರಬಾಗಿಲಲ್ಲಿ ನಿಂತಳು. ಹೇಮಾ "ಬರ್ತೀನಿ" ಎಂದಷ್ಟೇ ಹೇಳಿ ತನ್ನ ಹ್ಯಾಂಡ್‌ಬ್ಯಾಗ್‌ನ್ನು ಹಿಡಿದು ಜಗುಲಿಯಿಂದ ಇಳಿದಳು. ಭುಜಂಗ ಅವಳೊಂದಿಗೆ ನಡೆದ. ಎಲ್ಲರೂ ಮಾತಿಲ್ಲದಾಗಿದ್ದರು. ಚಿದಾನಂದ ಶ್ವೇತಾಳನ್ನು ಕರೆದ. "ಪಲ್ಲವಿಯ ಹತ್ರ ಸ್ವಲ್ಪ ಮಾತಾಡ್ಬೇಕು" ಎಂದು ಹೇಳಿ, ಅವಳು ಅಲ್ಲೇ ಉಳಿದಳು.

ಬಸ್‌ಸ್ಟ್ಯಾಂಡ್‌ನಿಂದ ಭುಜಂಗ ಮನೆಗೆ ಫೋನು ಮಾಡಿದ. ತಾಯಿ ರಿಸೀವರ್‌ನೆತ್ತಿಕೊಂಡಳು. "ಅಮ್ಮಾ, ಹೇಮಾ ಯಾಕೋ ತುಂಬಾ ಬೇಜಾರು ಮಾಡ್ಕೊಂಡಿದಾಳೆ. ನಾನು ಅವಳ ಜೊತೆ ಹೊರಡ್ತೀನಿ. ಅವಳನ್ನು ಬಿಟ್ಟು ತಕ್ಷಣವೇ ವಾಪಸ್ಸು ಬರ್ತೀನಿ..ಪಲ್ಲವಿಗೂ ಹೇಳಿಬಿಡು" ಎಂದಿದ್ದ.

ಸಾವಿತ್ರಿ, ಚಿದಾನಂದನನ್ನು ಕರೆಸಿದಳು. "ಭುಜಂಗ, ಹೇಮಳ ಜೊತೇಲಿ ಹೋಗ್ತಾ ಇದಾನೆ.. ನೀನು ಇವತ್ತು ರಾತ್ರಿ ಇಲ್ಲೇ ಮಲಕ್ಕೋ..ಹಾಗೇ ಈ ವಿಷಯವನ್ನು ಪಲ್ಲವಿಗೂ ತಿಳಿಸಿ ಬಿಡು.." ಎಂದಳು. ಚಿದಾನಂದ ಮಹಡಿಯನ್ನೇರಿದ. ಹೆಜ್ಜೆಯ ಸಪ್ಪಳವನ್ನು ಕೇಳಿ, ಸ್ನೇಹಿತೆಯರಿಬ್ಬರೂ ಮಾತನ್ನು ನಿಲ್ಲಿಸಿದರು. ಭುಜಂಗ ಫೋನು ಮಾಡಿದ್ದ ವಿಷಯವನ್ನು ತಿಳಿಸಿದಾಗ, ಇಬ್ಬರೂ ಮುಖ ಮುಖ ನೋಡಿಕೊಂಡರು. ಚಿದಾನಂದ ಕೆಳಗಿಳಿದು ಹೋದ. "ನಂಗೊತ್ತಿತ್ತು ನಿನ್ನ ಗಂಡ ಹೀಗೇ ಮಾಡ್ತಾರೆ ಅಂತ. ಹೇಮಂಗೆ ಇದೊಂದು ನೆವ, ಭುಜಂಗನ್ನ ತನ್ನ ಜೊತೇಲಿ ಕರ್ಕೊಂಡು ಹೋಗೋಕೆ." ಪಲ್ಲವಿ ಪೆಚ್ಚು ಮುಖ ಹಾಕ್ಕೊಂಡಳು.

"ಸುಮ್ನೇ ಏನೇನೊ ಆಡಿ ನನ್ನ ತಲೆ ಕೆಡಿಸ್ಬೇಡ ಶ್ವೇತಾ...ಪ್ಲೀಸ್.."

"ನಿಂಗೆ ಗೊತ್ತಿಲ್ಲದ ಅನೇಕ ವಿಷಯಗಳಿವೆ..." ಪಿಸಿಧ್ವನಿಯಲ್ಲಿ ಹೇಳಿ ಓರೆ ಕಣ್ಣಿನಲ್ಲಿ

ನುಡಿದಳು. "ನಾನು ಹೇಳಿದ್ರೆ ನೀನು ನಂಬ್ತೀಯೋ ಇಲ್ವೋ.."

"ಬಿಡೇ, ಬೇರೆ ಏನಾದ್ರೂ ಮಾತಾಡೋಣ.. ನಮ್ಮ ಕಾಲೇಜಿನ ವಿಷಯ.." ಪಲ್ಲವಿ ಅವಳ ಮಾತನ್ನು ಕೇಳಲು ಸಿದ್ಧಳಿರಲಿಲ್ಲ, ಆತಂಕಗೊಳ್ಳಲು ಹೆದರಿದಳು.

"ನಿಂಗೆ ಭುಜಂಗನ ಬಗ್ಗೆ ಕೇಳಲು ಇಷ್ಟವಿಲ್ಲ ಅಲ್ವಾ?"

"ಹೌದು ಶ್ವೇತಾ..ಅವರದ್ದು ಏನೂ ತಪ್ಪಿಲ್ಲ, ಒಂದು ವೇಳೆ ತಪ್ಪು ಅಂತಿದ್ರೂ ನಾನು ಅವರನ್ನು ಕ್ಷಮಿಸ್ತೀನಿ. ಯಾಕೆ ಅಂದ್ರೆ ನಾನು ಅವರನ್ನು ತುಂಬಾ ಪ್ರೀತಿಸ್ತೀನಿ."

"ನಾನು ಅವರನ್ನು ಪ್ರೀತಿಸ್ತೀನಿ. ಅದಕ್ಕೇ ನಿಜವನ್ನು ಹೇಳಲು ಹಿಂಜರಿಕೆ.." ಎಂದು ಹೇಳಬೇಕೆಂದುಕೊಂಡವಳು ಸುಮ್ಮನಾದಳು. ಪಲ್ಲವಿಗೆ, ಭುಜಂಗ ಹೇಮಾಳೊಡನೆ ಇದ್ದಕ್ಕಿದ್ದಂತೆ ಹೊರಟು ಬಿಟ್ಟಿದ್ದು ಬೇಸರವನ್ನುಂಟು ಮಾಡಿದರೂ, ಅದನ್ನು ಶ್ವೇತಳ ಎದುರಿಗೆ ತೋರ್ಪಡಿಸಿಕೊಳ್ಳಲು ಇಷ್ಟಪಡಲಿಲ್ಲ.

"ಭುಜಂಗನ ಅಕ್ಕ ವಿಜಯಂಗೆ ಮದುವೆಯಾಗಿ ಐದು ವರ್ಷಗಳಾದ್ರೂ ಮಕ್ಕಳಾಗಿಲ್ಲವಂತೆ.. ಹಾಗಂತ ಆಂಟಿ ಹೇಳ್ತಿದ್ರು.. ಏನಿರಬಹುದು?"

"ನಂಗೇನ್ಗೊತ್ತು? ಅವರು ಸಿಕ್ಕಾಗ ನೀನೇ ಕೇಳು.."

"ಭುಜಂಗ ಎಂದೂ ಈ ಬಗ್ಗೆ ಮಾತಾಡಿಲ್ವಾ?.."

"ಇವರ್ಗೇನು ಗೊತ್ತಿರುತ್ತೆ?.. ಅದು ಅವರಿಬ್ಬರ ಸಮಸ್ಯೆ.."

"ಅವರಿಗೇನಾದ್ರೂ ಬಾಡಿಗೆ ತಾಯಿಯ ಅಗತ್ಯವಿದ್ದರೆ ನಂಗೆ ತಿಳಿಸು. ನಾನೂ ಆ ಕೆಲಸಕ್ಕೆ ರೆಡಿಯಾಗಿದೀನಿ.." ಶ್ವೇತಾ ಕೆಣಕುವಂತೆ ಅವಳ ಕಡೆ ನೋಡಿದಳು.

'ಬಾಡಿಗೆ ತಾಯಿ' ಅನ್ನೋ ಹೆಸರನ್ನು ನನ್ಮುಂದೆ ಎತ್ಬೇಡ. ನಂಗೆ ಇಷ್ಟವಿಲ್ಲ.". ಪಲ್ಲವಿ ಎತ್ತರದ ಧ್ವನಿಯಲ್ಲಿ ಹೇಳಿದಾಗ, ಶ್ವೇತಾ ಮಂಕಾದಳು.

"ನೀನು ತಾಯಿಯಾಗ್ತಿದೀಯ.. ಈಗಲೂ ನೀನು ಅಪ್ಸೆಟ್ ಆಗ್ತೀಯಲ್ಲ."

"ಅಪ್ಸೆಟ್ ಆಗ್ಬಾರ್ದು ನಾನು, ಅಂತಿದ್ರೆ ತೆಪ್ಪಗೆ ಬಿದ್ಕೋ ಮಾತಾಡ್ಬೇಡ..."

"ಸರಿ, ನಾನು ನಿನ್ನನ್ನು ಮಾತೇ ಆಡಿಸುಲ್ಲ, ನಾನು ನಮ್ಮ ಮನೆಗೆ ಹೋಗ್ತೀನಿ," ಎನ್ನುತ್ತಾ ಎದ್ದಳು. ಪಲ್ಲವಿ ಅವಳ ಕೈ ಹಿಡಿದೆಳೆದಳು.

"ಈಗ ನೀನು ಮುನಿಸ್ಕೊಂಡು ಹೋದ್ರೆ, ಎಲ್ರಿಗೂ ಗೊತ್ತಾಗುತ್ತೆ. ಅದು ನಿನ್ನ ಮಗುವಿಗೂ ಕ್ಷೇಮವಲ್ಲ." ಶ್ವೇತಾ ಮುಗುಳ್ನಗೆ ಬೀರಿದಳು.

"ಹೌದು ಕಣೇ ಪಲ್ಲವಿ. ನಮ್ಮ ಮಕ್ಕಳ ಹೆಲ್ತ್ ನಮಗೆ ಮುಖ್ಯ. ಯಾರಿಗೆ ಏನಾದರೇನಂತೆ ಅಲ್ವಾ!.. ನಮ್ಮಿಬ್ಬರ ಮಕ್ಕಳು ಅವಳಿ ಮಕ್ಕಳಂತೆ. ಜೊತೆ ಜೊತೆಯಾಗಿ ಹುಟ್ಟುತ್ವೆ.. ಒಟ್ಟೊಟ್ಟಿಗೇ ಬೆಳೆಯಬೇಕು.. ನಿನ್ನ ಮಗುವಿಗೆ ಹೆಸರನ್ನು ಆಯ್ಕೆ ಮಾಡಿದ್ಯಾ?.. ಭುಜಂಗನ್ನ ಕೇಳಿದ್ಯಾ?.." ಉತ್ಸಾಹದಿಂದ ಕೇಳಿದಳು.

"ನಮ್ಮ ಮಗೂಗೆ 'ಅನಂತ' ಅಂತ ಹೆಸರಿಡ್ತೀನಿ. ಆ ಹೆಸರು ನನಗೆ ತುಂಬಾ ಇಷ್ಟ ಅನಂತ, ಭುಜಂಗ ಹೆಸರುಗಳ ಅರ್ಥ ಒಂದೇ ಬರುತ್ತೆ.."

"ತುಂಬಾ ಹಳೆಯ ಹೆಸರು ಆಗ್ಲಿಲ್ವೇನೇ?"

"ಹೆಸರು ಹಳೇದಾದ್ರೇನು?.. ಮಗು ಹೊಸದಲ್ವೇನೇ? ಆ ಹೆಸರಿಗೆ ಹೊಸ ಅರ್ಥವನ್ನು ಕೊಡ್ತೀನಿ. ಹೊಸ ಚೈತನ್ಯವನ್ನು ಕೊಡ್ತೀನಿ.." ಪಲ್ಲವಿ ಕಣ್ಣುಗಳನ್ನು ಮುಚ್ಚಿ ಬೇರೊಂದು ಲೋಕದಲ್ಲಿರುವವಳಂತೆ ಮಾತಾಡಿದಾಗ, ಶ್ವೇತಾ ವ್ಯಂಗ್ಯ ನಗೆಯನ್ನು ನಕ್ಕಳು. ಕನಿಕರದಿಂದ ನೋಡಿದಳು. 'ನಿಜ ಏನು ಅಂತ ನಿನಗೆ ತಿಳಿದ ದಿನ, ನಿನ್ನ ಭಾವನೆ ಕಲ್ಪನೆ ಎಲ್ಲಾ ನುಚ್ಚು ನೂರಾಗುತ್ತದೆ' ಎಂದು ತನ್ನಲ್ಲೇ ನುಡಿದುಕೊಂಡಳು.

"ಶರತ್ ನನಗೆ ದ್ರೋಹ ಮಾಡಿದ. ರಾಜೀವಂಗೆ ನಾನು ಮೋಸ ಮಾಡಿದೆ. ಆದರೆ ಕಡೆಯಲ್ಲಿ ನನಗೇ ಒಳ್ಳೆಯದಾದದ್ದು. ಈಗ ನನ್ನ ಪ್ರಪಂಚವೇ ಬೇರೆ.. ನಾನು ನನ್ನ ಸಂಸಾರ ಅಷ್ಟೇ.. ಇದರಲ್ಲಿ ಹೊರಗಿನವರ್‍ಯಾರಿಗೂ ಪ್ರವೇಶವಿಲ್ಲ" ಎಂದಳು.

"ಆಯಾಸ ಮಾಡ್ಕೋಬಾರ್ದಂತೆ. ಮಲಗ್ಬೇಕಂತೆ" ವಾಣಿ ಬಂದು ಎಚ್ಚರಿಸಿದಳು.

* * *

ದಿನಗಳು ತುಂಬಿದ್ದವು. ಶ್ವೇತಾ ಆಯಾಸಗೊಂಡವಳಂತೆ ಇದ್ದರೂ, ಭುಜಂಗನನ್ನು ಕಂಡೊಡನೆ ಒಡಲಲ್ಲಿ ನವೋತ್ಸಾಹ ತುಂಬಿದಂತಾಗಿತ್ತು. ಮಗು ಯಾರ ಹಾಗಿರುತ್ತದೋ? ಭುಜಂಗನಂತಿದ್ದರೆ ನನಗೆ ಖುಷಿಯೇ.. ಆದರೆ ನನ್ನಂತೆ ಇದ್ದರೆ ಯಾರಿಗೂ ಏನೂ ಅನುಮಾನ ಬರುವುದಿಲ್ಲ, ಆದರೆ ಭುಜಂಗನ ಹಾಗೆ ಗರುಡ ಮಚ್ಚೆ ಇರುವ ಮಗು ಹುಟ್ಟಿದರೆ ಎಷ್ಟು ಚೆನ್ನ! ಪಲ್ಲವಿಗೆ ಆಶ್ಚರ್ಯವಾಗಬಹುದು.. ಸಂದೇಹ ಬರಬಹುದು.. ಪ್ರತಿಷ್ಠೆ ಕಡಿಮೆಯಾಗಬಹುದು.. ಭುಜಂಗನೊಡನೆ ಜಗಳವಾಡಬಹುದು. ಅವನೊಡನೆ ಮನಸ್ತಾಪವಾಗಬಹುದು. ಕಡೆಯಲ್ಲಿ ಡೈವೋರ್ಸ್ ಆಗಬಹುದು. ಆಗ ನಾನೂ ಚಿದಾನಂದನಿಗೆ ಡೈವೋರ್ಸ್ ಕೊಟ್ಟು ಭುಜಂಗನನ್ನೇ ಮರು ಮದುವೆ ಆದರೆ? ಆದರೆ.. ಹೇಮಾ ಅಡ್ಡಿ ಬರಬಹುದು.. ಅವಳು ತಾನೇ ಭುಜಂಗನನ್ನು ಮದುವೆಯಾಗ್ತೀನಿ ಅಂತ ಅಂದು ಬಿಟ್ಟರೇ...ಚಿದಾನಂದ ಹತ್ತಿರ ಬಂದು ಅವಳನ್ನು ಮೈ ಮುಟ್ಟಿದ. ಅವಳು ಬೆಚ್ಚಿ ಕಿರುಚಿದಳು. ಅವನನ್ನು ತಳ್ಳಿದಳು.

"ಹೀಗ್ಯಾಕೆ ಬಂದು ಹೆದರಿಸ್ತೀರಿ!..ನಂಗೇನಾದ್ರೂ ಹೆಚ್ಚು ಕಡಿಮೆ ಆದ್ರೆ?"

"ಸಾರೀ.. ಶ್ವೇತಾ...ಚೈತ್ರಾ ನಿನ್ನನ್ನ ಕರೀತಿದಾಳೇ..."

"ಏನಂತೆ ಅವಳಿಗೆ ? ನನಗೆ ಓಡಾಡುಕ್ಕೇ ಬೇಜಾರು. ಅವಳಿಗೇ ಬಾ ಅಂತ ಹೇಳಿ" ಚಿದಾನಂದ ಅವಳ ಉಬ್ಬಿದ ಹೊಟ್ಟೆಯನ್ನೇ ವಿಸ್ಮಯದಿಂದ ನೋಡಿದ. ಏನು ಹಾಗೆ ನೋಡ್ತಿದೀರಿ...ದೃಷ್ಟಿ ಆಗುತ್ತೆ. ಅತ್ಲಾಗೆ ತಿರುಗಿ..." ರೇಗಿದಳು.

"ಏನು ಶ್ವೇತಾ ಹೀಗಾಡ್ತೀಯ...ನನ್ನ ಮಗುವಿನ ಮೇಲೆ ನನ್ನದೇ ಕೆಟ್ಟ ದೃಷ್ಟಿ ಬೀಳುತ್ತಾ?" ವ್ಯಥೆಯಿಂದ ನುಡಿದ. ಅಷ್ಟರಲ್ಲಿ ಅಲ್ಲಿಗೆ ಭುಜಂಗ ಬಂದಿದ್ದ. ಅವಳ ಕಣ್ಣುಗಳು ಅರಳಿದವು.

ಕಷ್ಟಪಟ್ಟು ಎದ್ದು ನಿಂತಳು. ಭುಜಂಗನ ದೃಷ್ಟಿ ಅವಳ ಮೈ ಮೇಲೆ ಹರಿದಾಗ, ನಾಚಿಕೆಯಿಂದ ಅವಳ ಕೆನ್ನೆಗಳು ಕೆಂಪಾದವು. ಮಗು ಮಿಸುಕಾಡಿತು.."

"ಅಮ್ಮಾ ತಿಂಡಿಗೆ ಒತ್ತು ಶಾವಿಗೆ ಮಾಡಿದಾಳೆ. ನೀವು ಬರ್ಬೇಕಂತೆ.. ಚಿದಾನಂದ ನೀವೂ ಬನ್ನಿ." ಶ್ವೇತಾ ನಿಧಾನವಾಗಿ ಹೆಜ್ಜೆಯನ್ನು ಹಾಕತೊಡಗಿದಾಗ, ಚಿದಾನಂದ ಅಚ್ಚರಿಯಿಂದ ಅವಳನ್ನೇ ನೋಡಿದ. 'ಒತ್ತು ಶಾವಿಗೆಯ ಆಸೆಗೆ ಹೋಗುತ್ತಿರಬಹುದು' ಎಂದುಕೊಂಡ.

"ಶ್ವೇತಾ, ನಿನಗೆ ಓಡಾಡುಕ್ಕೆ ಆಗದಿದ್ರೆ ನಾನೇ ತಂದುಕೊಡ್ತೀನಿ. ನೀನು ರೆಸ್ಟ್ ತಗೋ" ಎಂದ. ಅವಳು ಹುಬ್ಬುಗಂಟಿಕ್ಕಿದಳು.

"ಭುಜಂಗ ಬಂದು ಕರೆದಿದಾರೆ. ಹೋಗದಿದ್ರೆ ಅವರಿಗೆ ಅವಮಾನ ಮಾಡಿದಂತಾಗುತ್ತೆ.. ಪರವಾಗಿಲ್ಲ ನಿಧಾನವಾಗಿ ಹೋಗ್ತೀನಿ.." ಎಂದಳು ಭುಜಂಗ ಕಸಿವಿಸಿಗೊಂಡ.

"ನಿಮಗೆ ಕಷ್ಟ ಆಗೋದಾದ್ರೆ ಬರ್ಬೇಡಿ.. ಅಮ್ಮಂಗೆ ಹೇಳ್ತೀನಿ. ಚಿದಾನಂದ ಹೋಗಿ ತಗೊಂಡು ಬನ್ನಿ.. ನಡೀರಿ.." ಶ್ವೇತಾ ಭುಜಂಗನ ಕೈ ಮುಟ್ಟಿ 'ನಿಂತ್ಕೊಳ್ಳಿ' ಎನ್ನುವಂತೆ ಸಂಜ್ಞೆಮಾಡಿದ್ದಳು. ಚಿದಾನಂದ ಮುಂದೆ ನಡೆದಿದ್ದ, ಭುಜಂಗ ನಿಂತ.

"ನಾನು ನಿಮ್ಮ ಹತ್ರ ಸ್ವಲ್ಪ ಮಾತಾಡ್ಬೇಕು..." ಎಂದಳು.

"ನನ್ನ ಹತ್ರಾನಾ?..ಏನು?.. ಹೇಳಿ..."

"ಗುಟ್ಟಾಗಿ ಹೇಳ್ಬೇಕು.. ಈ ವಿಷಯ ಬೇರೆ ಯಾರ್ಗೂ ಗೊತ್ತಾಗಬಾರ್ದು.."

"ಅಂಥಾ ವಿಷಯ ಏನು?.. ಹೇಮಾ ಏನಾದ್ರೂ ಹೇಳಿದಾಳಾ?"

"ನಂಗೆ, ಚೈತ್ರಂಗೆ, ನಿಮ್ಗ ಸಂಬಂಧಿಸಿದ ವಿಷಯ.. ಸಧ್ಯದಲ್ಲೇ ನನಗೆ ಹೆರಿಗೆ ಸಮಯ ಬರುತ್ತದೆ. ಒಂದು ವೇಳೆ ಹೆರಿಗೆಯಲ್ಲಿ ನಾನು ಸತ್ತು ಹೋದರೆ, ಈ ರಹಸ್ಯ ನನ್ನಲ್ಲೇ ಉಳಿದು ಹೋಗುತ್ತದೆ.. ಅದು ನಿಮಗೆ ತಿಳಿದಿರಲೇ ಬೇಕು.."

"ಏನಂಥಾ ರಹಸ್ಯ? ತಮಾಷೆ ಮಾಡ್ಬೇಡಿ.."

"ತಮಾಷೆ ಅಲ್ಲ ಭುಜಂಗ.. ನಾನು ಆಸ್ಪತ್ರೆಗೆ ಅಡ್ಮಿಟ್ ಆಗುವ ಮೊದಲು ನಾನು ನಿಮಗೆ ಈ ವಿಷಯವನ್ನು ತಿಳಿಸ್ತೀನಿ. ನೀವು ಒಬ್ಬರೇ ನನಗೆ ಸಿಗ್ಬೇಕು.. ಇಲ್ಲಿ ಒಬ್ಬರಲ್ಲ ಒಬ್ಬರು ಇದ್ದೇ ಇರ್ತಾರೆ..." ಭುಜಂಗನ ಮುಖ ಗಂಭೀರವಾಯಿತು.

"ಹೀಗೆ ಮಾತಾಡಿ ನನ್ನ ನೆಮ್ಮದಿಯನ್ನು ಕೆಡಿಸ್ತಿದೀರಿ.. ನಿಮ್ಮ ಮೇಲೆ ನಂಬಿಕೆ ಇಲ್ಲ.."

"ಸರಿ ಬಿಡಿ, ನಿಮಗೆ ನನ್ನ ಮಾತಿನ ಮೇಲೆ ನಂಬಿಕೆ ಇಲ್ಲ.. ಆದರೆ ಹೇಮನ್ನ ನಂಬ್ತೀರಿ ತಾನೇ.. ಅವಳನ್ನೇ ಕೇಳಿ ತಿಳಿದುಕೊಳ್ಳಿ.."

"ಈಗ ಹೇಮ ಏನು ಮಾಡಿದ್ಲು?.. ಪಲ್ಲವಿಯ ವಿಷಯ ಆಗಿದ್ರೆ ಮಾತ್ರ ಹೇಳಿ."

"ಚಿದಾನಂದ ಬರ್ತಿದಾರೆ.. ಈಗ ಮಾತು ಬೇಡ. ಒಂಟಿಯಾಗಿ ನಾನು ನಿಮಗೆ ಸಿಗದೇ ಹೋಗಬಹುದು. ಹೇಮನ್ನ ಕೇಳುಕ್ಕೆ ಇಷ್ಟವಿಲ್ಲದಿದ್ರೂ, ನಿಜವನ್ನು ಎಷ್ಟು ದಿನಾಂತ ಮುಚ್ಚಿಡುಕ್ಕೆ

ಆಗುತ್ತೆ?'' ಎನ್ನುತ್ತಾ, ಬಾವಿ ಕಟ್ಟೆಯ ಬಳಿ ಕಷ್ಟ ಪಟ್ಟು ಕುಳಿತಳು. ಚಿದಾನಂದ ಡಬ್ಬಿಯ ಮುಚ್ಚಳವನ್ನು ತೆಗೆದ.

"ಚೈತ್ರಾ ನಿಮಗೋಸ್ಕರ ಕಾಯ್ತಾ ಇದಾರೆ.. ಹೋಗ್ಬೇಕಂತೆ..'' ಭುಜಂಗ ಅವಳ ಕಡೆ ನೋಡಿದ. ಅವಳ ಕಣ್ಣುಗಳು ಮಿಂಚಿದವು. ಈ ಮಿಂಚಿನ ಬೆಳಕಿನ ಹಿಂದೆ ಯಾವ ಕಾರ್ಮೋಡ ಕವಿದಿರಬಹುದು ಎಂದುಕೊಳ್ಳುತ್ತಾ ತನ್ನ ಮನೆಯ ಕಡೆ ಹೆಜ್ಜೆ ಹಾಕಿದ. ಪಲ್ಲವಿ ಅವನಿಗಾಗಿ ಕಾಯುತ್ತಾ ಕುಳಿತಿದ್ದಳು. ಅವಳ ಮಗ್ಗುಲಲ್ಲಿ ಕುಳಿತ. ಒತ್ತೂ ಶಾವಿಗೆ ಅದಕ್ಕೆ ನೆಂಚಿಕೊಳ್ಳಲು ಮಾಡಿದ್ದ ಚಟ್ನಿ ಎಲ್ಲವೂ ರುಚಿಯಾಗಿತ್ತು. ಆದರೂ ಧ್ಯಾನವೆಲ್ಲಾ ಶ್ವೇತಳಾಡಿದ್ದ ಮಾತುಗಳ ಕಡೆ ಇತ್ತು. ತಿಂಡಿಯ ಸ್ವಾದ ರುಚಿಯನ್ನು ಕಳೆದುಕೊಂಡಿತ್ತು..''

"ಎಲ್ಲೋ ಇದೆ ನಿನ್ನ ಧ್ಯಾನ? ಇನ್ನೊಂದು ಸ್ವಲ್ಪ ಹಾಕ್ಲೇನೋ?..'' ತಾಯಿ ಕರೆದಾಗ ಇತ್ತ ತಿರುಗಿದ. ಪಲ್ಲವಿ ನಕ್ಕಳು.

"ಸಾಕು ಕಣಮ್ಮಾ.. ಆಮೇಲೆ ತಿಂತೀನಿ..''

"ಕೂತಿದ್ದಾಗ ತಿನ್ನು. ಮಧ್ಯಾಹ್ನದ ಊಟಕ್ಕೆ ಪಲ್ಲವಿಗೆ ಏನು ಇಷ್ಟವೋ ಅದನ್ನೇ ಮಾಡ್ತೀನಿ. ಶ್ವೇತಂಗೆ ಇಷ್ಟಾಂತ ಒತ್ತು ಶ್ಯಾವಿಗೆ ಮಾಡಿದ್ದು..''

"ಸರಿ ಹಾಗಾದ್ರೆ ಉಳಿದದ್ದನ್ನು ಅವಳಿಗೇ ಕಳಿಸು.. ನಿಧಾನವಾಗಿ ತಿನ್ಲೀ..''

"ಸುಮ್ನೇ ಹಾಗಂದೆ ಕಣೋ.. ಅವಳಿಗೆ ದಿನ ತುಂಬಿದೆ. ಇವತ್ತೋ ನಾಳೆಯೋ ಹೆರಿಗೆ ಆದ್ರೂ ಆಗಿ ಬಿಡುತ್ತೇ ಅಂತ ಡಾಕ್ಟರು ಹೇಳಿದಾರಂತೆ. ಮಂದಾಕಿನಿ ಹೇಳಿದ್ಲು, ಆಮೇಲೆ ಬಾಣಂತಿ.. ಬರೀ ಪಥ್ಯದ ಊಟ. ಇದನ್ನೆಲ್ಲಾ ಬಯಸಿದ್ರೂ ತಿನ್ನುಕ್ಕಾಗುಲ್ಲ..'' ಅವನ ಧ್ಯಾನ ಮತ್ತೆ ಶ್ವೇತಳ ಮಾತಿನತ್ತ ತಿರುಗಿತು.. "ಏನಾಗಿದೆ ನಿಂಗೆ? ಏನು ಯೋಚ್ನೇ ಮಾಡ್ತಿದೀಯ?..''

"ಏನೂ ಇಲ್ಲ'' ಅಂತ ಹೇಳಿದ್ರೂ ಬೇಗ ಬೇಗ ತಿಂಡಿಯನ್ನು ತಿಂದು ಕಾಫಿಯನ್ನು ಕುಡಿದು ಕೈ ತೊಳೆದು ಮಹಡಿಯನ್ನೇರಿದ. ಐದು ಹತ್ತು ನಿಮಿಷಗಳ ನಂತರ ಪಲ್ಲವಿಯೂ ಮಹಡಿಯನ್ನು ಹತ್ತಿದಳು.

"ಇನ್ಮೇಲೆ ನೀನು ಕೆಳಗೇ ಮಲಕ್ಕೋ. ನಿಂಗೆ ಆಯಾಸ ಆಗುತ್ತೆ. ನೀನು ಕಷ್ಟಪಟ್ಟು ಹತ್ತಿ ಬರೋದನ್ನ ನೋಡಿದ್ರೆ ಎಲ್ಲಿ ಬಿದ್ದು ಹೋಗ್ತೀಯೋ ಅಂತ ಭಯ ಆಗುತ್ತೆ..'' ಅವನೆಂದ.

"ಥೂ ಬಿಡ್ತು ಅನ್ನಿ. ಮೆಟ್ಟಲು ಹತ್ತಿ ಇಳಿದರೆ ವ್ಯಾಯಾಮ ಆಗುತ್ತೆ..''

"ಹೊಟ್ಟೆ ಇಷ್ಟು ದಪ್ಪ ಆಗಿದೆ. ನಿಂಗೆ ಹಿಂಸೆ ಆಗುಲ್ವಾ ಪಲ್ಲವೀ..?''

"ಹೂಂ, ಸ್ವಲ್ಪ ಆಗುತ್ತೆ. ಒಮ್ಮೊಮ್ಮೆ ಸಾಕಪ್ಪಾ ಅಂತ ಅನ್ಸುತ್ತೆ.. ಬೇಗ ಹೆರಿಗೆ ಆದ್ರೆ ಸಾಕು ಅಂತ ಕಾಯ್ತಾ ಇದೀನಿ.. ಬಯಸಿ ತಾಯಿ ಆಗ್ತಿದೀನಿ.. ಸಹನೆಯಿಂದ ಇದೀನಲ್ಲ..''

"ಸಾರೀ ಪಲ್ಲವೀ.. ನನ್ನಿಂದ್ಲೇ ನಿಂಗೆ ಇಷ್ಟು ತೊಂದರೆ ಆದದ್ದು. ಹೀಗೆ ಅಂತ ಗೊತ್ತಿದ್ದಿದ್ರೆ ನಾನು ಮದುವೆನೇ ಆಗ್ತಿರ್ಲಿಲ್ಲ..''

"ಶ್ವೇತಾನೂ ಇಷ್ಟು ದಪ್ಪಗಾಗಿದಾಳೆ. ಆದರೆ ನಗು ನಗ್ತಾ ಇರ್ತಾಳೆ. ಅಷ್ಟೇಗೆ ಭಾರವನ್ನು

ಹೊತ್ತು ನಡೀತಾಳೋ.. ಮುಟ್ಟಿದರೆ ಎಲ್ಲಿ ಬಿದ್ದು ಹೋಗ್ತಾಳೋ ಅನ್ನುವ ಹಾಗಾಗಿದಾಳೆ.."

"ಅಮ್ಮ ಹೇಳಿದ್ದಲ್ಲ.. ಇನ್ನೊಂದೆರಡು ಮೂರು ದಿನಗಳಲ್ಲಿ ಹೆರಿಗೆ ಆಗಬಹುದು ಅಂತ.. ಬೇಗ ಅಂತ ಅನ್ನಿಸುಲ್ವಾ! ಅವಳನ್ನ ಕೇಳ್ಬೇಕಾಗಿತ್ತು.."

"ಅದೇನೋ ನಂಗೇನ್ಗೊತ್ತಾಗುತ್ತೆ! ಡಾಕ್ಟರು ಹೇಳಿದಾರಲ್ಲ, ನಂಗೂ ಇನ್ನೊಂದು ತಿಂಗಳೊಳಗೆ ಆಗಿ ಬಿಡುತ್ತೆ ಅಂತ ಹೇಳಿದಾರೆ. ಅವಳನ್ನ ಕೇಳಿದ್ರೆ ಬರೀ ಸುಳ್ಳು ಹೇಳ್ತಾಳೆ.."

"ಶ್ವೇತಾ ನಿನ್ನ ಹತ್ರ ಜಗಳ ಏನಾದ್ರೂ ಆಡಿದಾಳಾ?" ಇದ್ದಕ್ಕಿದ್ದಂತೆ ಕೇಳಿದ.

"ಇಲ್ವಲ್ಲ ಹಾಗಂತ ಯಾರು ಹೇಳಿದ್ರು?.. ಅವತ್ತು ನೀವು ಬೆಂಗಳೂರಿಗೆ ಹೋಗಿದ್ದಾಗ ರಾತ್ರಿ ಇಲ್ಲೇ ಮಲಗಿದ್ಲು.." ತುಂಬಾ ಹೊತ್ತು ಮಾತನ್ನಾಡ್ತಿದ್ವು"

"ಏನು ಮಾತಾಡಿದ್ಲು?....ನಿಂಗೆ ಬೇಸರಬಾಗುವ ಹಾಗೆ ಏನಾದ್ರು ಆಡಿದ್ಲಾ?"

"ಏನಾಡಿದ್ಲೋ ಎಲ್ಲಾ ಮರೆತು ಹೋಗಿದೆ. ತಲೆ ಹರಟೆ. ತಾನೊಬ್ಬಳೇ ಗರತಿ ಅನ್ನೋ ಥರ ಮಾತಾಡ್ತಾಳೆ. ಶರತ್ ಜೊತೆ ಸ್ನೇಹ ಪ್ರೀತಿ ಎಲ್ಲಾ ಇತ್ತು. ಚಿದಾನಂದನನ್ನು ಕೆಡಿಸಿದಳು. ಅವಳಿಗೆ ನಿಮ್ಮ ಮೇಲೂ ಕಣ್ಣಿದೆ.. ಗೊತ್ತಾ? ಅವನು ನಕ್ಕ. "ನಗ್ಬೇಡಿ, ನೀವು ಸದರವಾಗಿ ಮಾತಾಡಿದ್ರೆ, ನಿಮ್ಮ ಮೇಲೂ ಸೆರಗು ಬೀಸ್ತಾಳೆ. ಹೇಮಂಗೆ ನಿಮ್ಮ ಮೇಲೆ ಕಣ್ಣು. ಅದನ್ನ ಆಡಿ, ನನ್ನ ಮನಸ್ಸನ್ನು ಕೆಡಿಸಲು ನೋಡಿದ್ಲು."

"ಅಂದ್ರೇ ನೀನು ನಂಬಿ ಬಿಟ್ಯಾ?"

"ನಂಬ್ಲಿಲ್ಲ, ಆದರೂ ದಿಗಿಲಾಗುತ್ತೆ. ನೀವು ನಂಗೆ ದ್ರೋಹ ಮಾಡುಲ್ಲ ತಾನೆ?"

"ನಂಬಿಕೆ ಇದ್ಮೇಲೆ ನೀನು ಹೀಗೆಲ್ಲಾ ಮಾತಾಡ್ಬೇಡ. ಇನ್ನೇನೇನು ಹೇಳಿದ್ಲು?"

"ಅವಳ ಮಾತಿನ ಮೇಲ್ಯಾಕೆ ಇಷ್ಟು ಆಸಕ್ತಿ?.."

"ಆಸಕ್ತಿಯೂ ಇಲ್ಲ ಆಸೆಯೂ ಇಲ್ಲ ಸರಿ ಬಿಡು.. ಈ ಹೊಸಾ ಡಾಕ್ಟರು ಹೇಗೆ? ಎಲ್ಲಾ ವಿವರವಾಗಿ ಹೇಳ್ದೆ ತಾನೇ?"

"ಹುಂ, ಶಾಂತವಾಗಿ ಮಾತಾಡ್ತಾರೆ.. ಇವರು ಮುಂಚೇನೇ ಸಿಕ್ಕಿದ್ದಿದ್ರೇ...?"

"ಈಗೇನಾಯ್ತು!... ಇವರು ಇದಾರೆ ಅಂತ ನಮಗೇನು ಗೊತ್ತಿತ್ತು? ಹೇಮಾನೇ ತಾನೇ ಹೇಳಿದ್ದು "ಹೇಮಂಗೆ ಥ್ಯಾಂಕ್ಸ್ ಹೇಳ್ಬೇಕು.."

"ಹೇಮಾ..ಹೇಮಾ..ಎಲ್ಲಾದ್ರಲ್ಲೂ ಹೇಮ...ಫಾರಿನ್ನಿಗೆ ಇನ್ನೂ ಯಾಕೆ ಹೋಗಿಲ್ಲ?" ಅವಳು ಹೋಗುಕ್ಕೆ ಮುಂಚೆ ಒಂದು ಸಾರಿ ಇಲ್ಲಿಗೆ ಬರ್ತೀನಿ ಅಂತ ಹೇಳಿದ್ಲು ಅವಳು ಬರೋದೇನೂ ಬೇಡ ಅಂತ ತಿಳಿಸ್ಬಿಡಿ" ಭುಜಂಗ ಮೌನದಿಂದ ಅವಳನ್ನೇ ನೋಡಿದ.

* * *

"ಶ್ವೇತಂಗೆ ಹುಶಾರಿಲ್ಲವಂತೆ. ಬೇಗ ಹೋಗಿ ಒಂದು ಟ್ಯಾಕ್ಸಿಯನ್ನು ತಗೊಂಡು ಬಾ. ಚಿದಾನಂದ ಅವನ ಹಳ್ಳಿಗೆ ಹೋದವನು ಇನ್ನೂ ಬಂದಿಲ್ಲವಂತೆ.." ಸಾವಿತ್ರಿ ಹೇಳಿದಾಗ ಸೋಫಾ

ಮೇಲೆ ಕುಳಿತು ಟಿ.ವಿ.ಯನ್ನು ನೋಡುತ್ತಿದ್ದ ಭುಜಂಗ ಎದ್ದು ಹ್ಯಾಂಗರಿನ ಮೇಲೆ ಹಾಕಿದ ಷರಟನ್ನು ಎತ್ತಿಕೊಂಡು ಕೈ ತೂರಿಸಿದ.

"ಚಿದಾನಂದ ಇವತ್ತೇ ಹಳ್ಳಿಗ್ಯಾಕೆ ಹೋಗ್ಬೇಕಾಗಿತ್ತು.." ಅಸಹನೆಯಿಂದ ಕೇಳಿದ.

"ಮಂದಾಕಿನಿ ಕಳಿಸಿದಾಳೆ. ಏನೋ ಒಂದಿಷ್ಟು ದುಡ್ಡು ಬರೋದಿತ್ತಂತೆ. ರಾತ್ರಿಯ ಹೊತ್ತಿಗೆ ಬಂದು ಬಿಡ್ತೀನಿ ಅಂತ ಹೋದ್ನಂತೆ. ನಿಂಗೆ ಹೇಳಲಿಲ್ವಾ?"

"ಹೇಳಿದ್ದಿದ್ರೆ ನಾನು ಹೋಗ್ಬೇಡ ಅಂತ್ಲೇ ಹೇಳ್ತಿದ್ದೆ.." ಅವಸವಸರವಾಗಿ ಷರಟನ್ನು ತೊಟ್ಟು ಚಪ್ಪಲಿಯನ್ನು ಮೆಟ್ಟಿ ಬೈಕ್‌ನ್ನು ಏರಿದ. ಹದಿನೈದು ಇಪ್ಪತ್ತು ನಿಮಿಷಗಳಲ್ಲಿ ಮನೆಯ ಮುಂದೆ ಟ್ಯಾಕ್ಸಿ ಬಂದು ನಿಂತಿತು.

"ಚಿದಾನಂದ ಬಂದಿಲ್ಲವಲ್ಲ ಈಗೇನ್ಮಾಡೋದು?"

"ನೋಡೋಣ, ಎಲ್ಲಿದಾನೆ ಅಂತ ತಿಳ್ಕೋತೀನಿ" ಎನ್ನುತ್ತಾ ಅವನ ಮೊಬೈಲ್ ಫೋನ್‌ಗೆ ಡಯಲ್ ಮಾಡಿದ. ಚಿದಾನಂದ ಮಾತಾಡಿದ.

"ಬಸ್ಸು ಕೆಟ್ಟು ನಿಂತಿದೆ. ರಿಪೇರಿಯಾದ ತಕ್ಷಣ ಹೊರಡ್ತೀನಿ" ಅವನೆಂದ.

"ಬೇಗ ಬಂದ್ಬಿಡಿ ಚಿದಾನಂದ್. ಶ್ವೇತನ್ನ ಆಸ್ಪತ್ರೆಗೆ ಕರ್‍ಕೊಂಡು ಹೋಗ್ತಾ ಇದೀವಿ" ಎಂದು ಹೇಳಿ ತಾಯಿಯ ಕಡೆ ತಿರುಗಿದ. "ಈಗೇನು? ಶ್ವೇತನ ಜೊತೆಗೆ ಯಾರು ಬರ್ತಾರೆ? ಅತ್ತೆ ಬರ್ತಾರೋ ನೀನು ಬರ್ತೀಯೋ?"

"ವೈದೇಹಿ ಕೊಂಕು ಮಾತಾಡ್ತಾಳೆ. ಮಂದಾಕಿನಿಗೆ ತಿಳುವಳಿಕೆ ಕಡಿಮೆ. ನಾನೇ ಬರ್ಬೇಕಾಗುತ್ತೇನೋ!.." ಎನ್ನುತ್ತಾ ಸಾವಿತ್ರಿ ಸಿದ್ಧಳಾದಳು. ಪಲ್ಲವಿ ಶ್ವೇತಾಳಿಗೆ ಶುಭವನ್ನು ಕೋರಿದಳು. ಸಾವಿತ್ರಿ ದೇವರ ಮುಂದೆ ತುಪ್ಪದ ದೀಪಗಳನ್ನು ಹಚ್ಚಿದಳು.

"ನಿನ್ನ ಗಂಡ ಸೀದಾ ಆಸ್ಪತ್ರೆಗೇ ಬರ್ತಾರೆ. ಹೆದರ್ಬೇಡ" ಎಂದಳು. ಶ್ವೇತಾ ಶ್ರಮಪಟ್ಟು ಟ್ಯಾಕ್ಸಿಯನ್ನೇರಿದಳು. ಟ್ಯಾಕ್ಸಿ ಹೊರಟಿತು. ನರ್ಸಿಂಗ್ ಹೋಂನಲ್ಲಿ ಅವಳನ್ನು ಸೇರಿಸಿದ್ದಾಗಿತ್ತು. ಡಾಕ್ಟರು ಪರೀಕ್ಷೆ ಮಾಡಿದರು. ಅನುಮಾನವನ್ನು ವ್ಯಕ್ತ ಪಡಿಸಿದರು.

"ಅಮ್ಮಾ..ನೀನು ಹೋಗು ಇಲ್ಲಿ ನರ್ಸುಗಳಿದಾರೆ. ನೋಡ್ಕೋತಾರೆ. ಪಲ್ಲವಿ ಗಾಬರಿ ಮಾಡ್ಕೋತಾಳೆ.." ಎಂದು ಹೇಳಿ ಟ್ಯಾಕ್ಸಿ ಡ್ರೈವರಿಗೆ, ಸರಿಯಾಗಿ ಮನೆಗೆ ತಲುಪಿಸುವಂತೆ ಹೇಳಿ ಅವಳನ್ನು ಟ್ಯಾಕ್ಸಿಯಲ್ಲಿ ಕೂರಿಸಿದ. ಶ್ವೇತಾ ಆಡಿದ ಮಾತುಗಳು ನೆನಪಿಗೆ ಬಂದವು. ಹೆರಿಗೆ ಸಮಯ. ಆಸ್ಪತ್ರೆಗೆ ಸೇರಿದಾಳೆ. ಹೆಂಗಸಿಗೆ ಇದು ಮರುಜನ್ಮವಿದ್ದಂತೆ ಅಂತ ಅಂತಾರೆ. ಒಂದು ವೇಳೆ ಶ್ವೇತಾಳಿಗೆ ಏನಾದರೂ ಆಗಿ ಹೋದರೆ?.. ರಹಸ್ಯ ಇವಳಲ್ಲೇ ಉಳಿದು ಬಿಡುತ್ತದೆ. ಹೇಮಾ ಹೇಳುತ್ತಾಳೋ ಇಲ್ಲವೋ....ಹೇಮಾಳಿಗೆ ಫೋನು ಮಾಡಲೋ ಬೇಡವೋ ಅಂತ ಯೋಚಿಸುವಷ್ಟರಲ್ಲಿ ನರ್ಸು ಬಂದು ಕರೆದಳು.

"ಶ್ವೇತಾ ಅನ್ನೋರು ನಿಮ್ಮ ಹತ್ರ ಮಾತಾಡ್ಬೇಕಂತೆ..."

"ಹೇಗಿದಾರೆ ಅವರು?"...ಆತಂಕದಿಂದ ಕೇಳಿದ.

"ಡಾಕ್ಟರು ಬಂದು ನೋಡಿದಾರೆ.. ಇವತ್ತು ನಾಳೆ, ಎರಡು ದಿನವೂ ಕಳೆಯುತ್ತೆ. ಇಲ್ಲಿದ್ದು ಏನ್ಮಾಡ್ತಾರೆ? ಡಿಸ್ಚಾರ್ಜ್ ಮಾಡಿಸ್ಕೊಂಡು ಕರ್ಕೊಂಡು ಹೋಗ್ಲಿ.. ಅಂತ ಹೇಳಿದ್ರು.."

"ಅಂದ್ರೇ..ದಿನ ಆಗಿದೆಯಲ್ಲ.. ಶ್ವೇತಂಗೆ ಹುಶಾರಿರಲಿಲ್ವಲ್ಲ, ನಾನು ಡಾಕ್ಟರ ಹತ್ರ ಮಾತಾಡ್ತೀನಿ.."

"ಡಾಕ್ಟರು ಇನ್ನೊಂದು ಗಂಟೆ ಬಿಟ್ಟು ಬರ್ತಾರೆ.. ಬೇಕಾದ್ರೆ ಫೋನು ಮಾಡಿ..." ಎಂದು ಹೇಳಿ ನಂಬರನ್ನು ಕೊಟ್ಟಳು. ಅಷ್ಟರಲ್ಲಿ ಶ್ವೇತ ಹೊರಕ್ಕೆ ಕಾರಿಡಾರಿಗೆ ಬಂದಳು.

"ಶ್ವೇತಾ..ಡಾಕ್ಟರು ಏನಂದ್ರು?.. ಇವರು ಡಿಸ್ಚಾರ್ಜ್ ಮಾಡಿಸ್ಕೊಂಡು ಕರ್ಕೊಂಡು ಹೋಗಿ ಅಂತ ಹೇಳ್ತಾ ಇದಾರೆ.. ನೀವೇನಂತೀರಿ?"

"ಹಾಗೇ ಮಾಡ್ತೀನಿ. ಇಲ್ಲಿ ರಾತ್ರಿ ಕಳೆಯೋದು ಕಷ್ಟ ಆಗುತ್ತೆ. ವಾಪಸ್ಸು ಹೋಗೋಣ.."

"ತಡೀರಿ, ಡಾಕ್ಟರಿಗೆ ಫೋನು ಮಾಡ್ತೀನಿ. ಅವರೇನಂತಾರೋ ನೋಡೋಣ.." ಎನ್ನುತ್ತಾ ಡಾಕ್ಟರ ಹತ್ರ ಮಾತಾಡಿದ. "ಅವರು ಇನ್ನೊಂದು ಗಂಟೆಯೊಳಗೆ ಮತ್ತೆ ಬರ್ತಾರಂತೆ. ಇದ್ದರೆ ಮತ್ತೆ ನೋಡ್ತೀನಿ ಅಂತ ಅಂದ್ರು. ಹೇಮಂಗೆ ಫೋನು ಮಾಡ್ಲಾ? ಮಾತಾಡ್ತೀರಾ?.."

"ಈಗ್ಲೇ ಬೇಡ.. ನೋಡೋಣ.."

"ಅಮ್ಮಂಗೆ ಫೋನು ಮಾಡ್ಲಾ!.. ತಿಂಡಿ ಕಾಫಿ ಏನಾದ್ರೂ ಬೇಕಾ?"

"ಏನೂ ಬೇಡ, ಏನೂ ಬೇಕು ಅಂತ ಅನ್ನಿಸ್ತಿಲ್ಲ, ಇಲ್ಲೆಲ್ಲಾದ್ರೂ ಕೂತಿರೋಣ ಬನ್ನಿ ಎನ್ನುತ್ತಾ, ಕುರ್ಚಿಗಳಿದ್ದ ಕಡೆಗೆ ನಡೆದಳು. "ನಿಮ್ಮ ತಾಯಿ ಬಂದಿದ್ರಲ್ಲ ಅವರೆಲ್ಲಿ?" ಏನನ್ನು ಅರಿಯದವಳಂತೆ ಕೇಳಿದಳು.

"ಅವಳನ್ನು ಮನೆಗೆ ಕಳಿಸ್ಬಿಟ್ಟೆ. ಪಲ್ಲವಿ ಗಾಬರಿಯಾಗ್ತಾಳೆ ಅಂತ. ಚಿದಾನಂದನಿಗೆ ಬೇಗ ಬರೋಕೆ ಹೇಳಿದೀನಿ.. ಮನೆಗೆ ಫೋನು ಮಾಡ್ತೀನಿ" ಎನ್ನುತ್ತಾ ಮೊಬೈಲ್‌ನ್ನು ಕೈಗೆತ್ತಿಕೊಂಡ. ಅವಳು ಅವನ ಕೈಯನ್ನು ತಡೆದಳು.

"ಎಷ್ಟೋ ದಿನಗಳ ಮೇಲೆ, ನಾನೂ ನೀವು ಇಬ್ಬರೇ ಇರುವ ಅವಕಾಶ ಸಿಕ್ಕಿದೆ. ಚಿದಾನಂದ ಬರುವುದಕ್ಕೇ ಮೊದಲು ನಾನು ಕೆಲವು ವಿಷಯಗಳನ್ನು ಹೇಳ್ಬೇಕು."

"ನಿಧಾನವಾಗಿ ಹೇಳಿದ್ರಾಯ್ತು ಬಿಡಿ..."

"ಇಲ್ಲ ಭುಜಂಗ್..ನಾನು ನಿಮ್ಮೊಡನೆ ಮಾತಾಡುವುದು ಪಲ್ಲವಿಗೆ ಇಷ್ಟವಿಲ್ಲ, ಚಿದಾನಂದನಿಗೆ ಸಂಶಯ ಬರಬಹುದು.. ಮನೆಯವರು ಒಬ್ಬರಲ್ಲ ಒಬ್ಬರು ಇರ್ತಾರೆ.. ಈಗ ಇಲ್ಲಿ ನಾವಿಬ್ಬರೇ ಇದೀವಿ.. ಆಡಿ ಬಿಡ್ತೀನಿ.." ಎನ್ನುತ್ತಾ ಅವನ ಕೈಯ ಮೇಲೆ ಕೈಯನ್ನಿಟ್ಟಳು.

ಅವನು ಕೈಯನ್ನು ಹಿಂದಕ್ಕೆ ಎಳೆದುಕೊಂಡ. "ನಾನು ನಿಮ್ಮನ್ನು ಲೈಕ್ ಮಾಡ್ತೀನಿ ಭುಜಂಗ್" ಅವನ ಎದೆ ಬಡಿತ ನಿಂತಂತಾಗಿತ್ತು. ಪಲ್ಲವಿಯ ಸಂಶಯ ನಿಜ. ಈ ಹೆಣ್ಣು ಸಾಮಾನ್ಯಳಲ್ಲ ಅಂತಂದುಕೊಂಡ.

"ಏನು ಹೇಳ್ತಿದೀರಿ ನೀವು?.. ನಾನು ನಿಮ್ಮ ಸ್ನೇಹಿತೆಯ ಗಂಡ..." ಎಂದ.

"ಸ್ನೇಹಿತೆಯ ಗಂಡನ್ನ ಪ್ರೀತಿಸ್ಬಾರ್ದು ಅಂತೇನಿಲ್ಲವಲ್ಲ..ನನ್ನ ಮಾತು ನಿಜ" ಎಂದಳು.

"ಇದು ತಪ್ಪಲ್ವಾ?" ಪೆದ್ದನಂತೆ ಕೇಳಿದ.

"ನಿಮಗೇನನ್ನಿಸುತ್ತೋ ನಂಗೊತ್ತಿಲ್ಲ, ಪಲ್ಲವಿಗೆ ತಿಳಿಯದಂತೆ ನೀವು ನನ್ನ ಸಹವಾಸ ಮಾಡಿದ್ದರೂ, ಅದು ತಪ್ಪು ಅಂತ ನಂಗೆ ಅನ್ನಿಸುಲ್ಲ."

"ನಿಮಗೂ ಮದುವೆಯಾಗಿದೆ.. ನೀವು ಚಿದಾನಂದನ ಮಗುವಿಗೆ ತಾಯಿಯಾಗ್ತಿದೀರಿ. ಈಗ ನೀವು ಹೀಗೆಲ್ಲಾ ಮಾತಾಡ್ಲೇ ಬಾರದು.." ಅವಳು ಸಶಬ್ದವಾಗಿ ನಕ್ಕಳು.

"ನಾನು ಚಿದಾನಂದನ ಮಗುವಿಗೆ ತಾಯಿಯಾಗ್ತಿಲ್ಲ.. ನನ್ನ ಒಡಲಲ್ಲಿ ಇರುವುದು ನಿಮ್ಮ ಮಗು.. ಬೇಕಾದ್ರೆ ಕೈ ಇಟ್ಟು ನೋಡಿ.." ಮತ್ತೆ ಅವನ ಕೈಯನ್ನು ಹಿಡಿದಳು. ಅವನು ರಭಸವಾಗಿ ಬಿಡಿಸಿಕೊಂಡು ಎದ್ದು ನಿಂತ. ಮುಖ ಧುಮುಗುಟ್ಟಿತ್ತು.

"ನೀವು ಹೀಗೆ ಹುಚ್ಚು ಕಲ್ಪನೆಯ ಮಾತುಗಳನ್ನಾಡ್ತೀರಿ ಅಂತ ಅಂದ್ಕೊಂಡಿರ್ಲಿಲ್ಲ, ನಾನು ನಿಮ್ಮೊಂದಿಗೆ ಬರಲೇಬಾರದಾಗಿತ್ತು."

"ಇದು ಕಲ್ಪನೆಯ ಹುಚ್ಚು ಮಾತಲ್ಲ ಭುಜಂಗ್. ಶೇಕಡ ನೂರರಷ್ಟು ನಿಜ..ಬೇಕಾದ್ರೇ ಹೇಮನ್ನೇ ಕೇಳಿ. ಅವರಿಗೂ ನಿಜ ಏನೂಂತ ಗೊತ್ತು.."

"ಅವಳ ತಲೆಯೂ ಸರಿ ಇಲ್ಲ.. ನಿಮ್ಮ ತಲೆಯನ್ನು ಅವಳು ಕೆಡಿಸಿರಬಹುದು."

"ನಿಮಗೆ ನಿಜ ಏನೂಂತ ತಿಳಿದ್ರೆ ಶಾಕ್ ಆಗಬಹುದು.. ನನ್ನ ಈ ಬಸಿರು, ಚಿದಾನಂದನ ಮಗುವಿನದಲ್ಲ, ನಾನು ಅವರ ಸಹವಾಸವನ್ನು ಬಯಸಿದ್ದು ನಿಜ. ಅದು ಬೇರೆಯ ಆಸೆ.. ಆದರೆ ಪಲ್ಲವಿಗೆ ಮಕ್ಕಳಾಗುವ ಸಾಧ್ಯತೆ ಕಡಿಮೆ ಎನ್ನುವ ಸಮಸ್ಯೆ ಕಂಡು ಬಂದಾಗ.."

"ಅದಕ್ಕೂ ಇದಕ್ಕೂ ಏನು ಸಂಬಂಧ?"

"ಸಂಬಂಧ ಇದೆ...ಪಲ್ಲವಿಯನ್ನು ಹೇಮಾ ಹಾಗು ಅವಳ ಸೀನಿಯರ್ ಡಾಕ್ಟರು ಪರೀಕ್ಷೆ ಮಾಡಿ ಗರ್ಭಾಶಯದಲ್ಲಿ ತೊಂದರೆ ಇದೆ ಅಂತ ಒಂದು ಸಣ್ಣ ಆಪರೇಷನ್ ಮಾಡಬೇಕೆಂದು ಸಲಹೆ ಕೊಟ್ಟರಷ್ಟೇ. ಆ ಸಮಯದಲ್ಲಿ ಹೇಮಾ ಒಂದು ದಿನ ನಮ್ಮ ಮನೆಗೆ ಬಂದಿದ್ದರು. ಪಲ್ಲವಿಯ ಬಗ್ಗೆ ಕೆಲವು ವಿಷಯಗಳನ್ನು ನನ್ನಿಂದ ಕೇಳಿ ತಿಳಿದುಕೊಂಡರು." ಎನ್ನುತ್ತಾ ತನಗೂ ಹೇಮಾಳಿಗೂ ನಡೆದ ಮಾತುಕತೆಗಳ ಬಗ್ಗೆ ತಿಳಿಸಿದಳು. ಪಲ್ಲವಿಗೆ ಮಗುವಾಗದೇ ಇದ್ದರೆ ಭುಜಂಗ ಕುಗ್ಗಿ ಹೋಗ್ತಾನೆ.. ಹೇಗಾದ್ರೂ ಸರಿ ಅವನು ತಂದೆಯಾಗಲೇ ಬೇಕು.. ನಾನು ಒಂದು ಪ್ರಯೋಗಕ್ಕೆ ರೆಡಿ ಮಾಡ್ತೀನಿ. ನಿಮ್ಮ ಸಹಾಯ ಬೇಕು ಎಂದು ಹೇಳಿ ನನ್ನನ್ನು ಲ್ಯಾಬ್‌ಗೆ ಕರೆಸಿ, ಕೆಲವು ಪರೀಕ್ಷೆಗಳನ್ನು ಮಾಡಿಸಿಕೊಳ್ಳುವಂತೆ ಸಲಹೆ ನೀಡಿದರು. ನಿಮ್ಮನ್ನು ಪರೀಕ್ಷೆ ಮಾಡಿಸಿಕೊಳ್ಳುವಂತೆ ಸಲಹೆ ನೀಡಿದ್ದರಂತೆ. ಆನಂತರ ಪ್ರಯೋಗ ಶಾಲೆಯಲ್ಲಿ ಕೃತಕವಾಗಿ ಮಿಳಿತಗೊಳಿಸಿ ಅಂಕುರಗೊಳಿಸಿದುದನ್ನು ನನ್ನ ಗರ್ಭಾಶಯದೊಳಕ್ಕೆ ಇಳಿಬಿಟ್ಟರು.. ನಿಮಗೆ ಅರ್ಥವಾಗಿರಬೇಕಲ್ಲ.. ಪ್ರಯೋಗಾಲಯದಲ್ಲಿ ಸೃಷ್ಟಿಗೊಂಡ ಜೀವಾಂಕುರ ಈಗ ನನ್ನ ಗರ್ಭದಲ್ಲಿ

ಬೆಳೆದು ಪ್ರಪಂಚಕ್ಕೆ ಬರಲು ಹಾತೊರೆಯುತ್ತಿದೆ. ಇದು ನನ್ನ ಹಾಗೂ ಸಮ್ಮಿಳಿತ ಸೃಷ್ಟಿ ನಿಮ್ಮ ಮಗುವನ್ನು ಹೊತ್ತು, ಹೆತ್ತು ಪೋಷಿಸುವುದಕ್ಕೆ ನನಗೆ ಹೆಮ್ಮೆ ಅಂತ ಅನ್ನಿಸ್ತಿದೆ...ನನ್ನ ಮಗುವಿನ ತಂದೆ ನೀವೇ.. ಚಿದಾನಂದನಲ್ಲ.. ಇದು ಪ್ರನಾಳ ಶಿಶು.. ನಾನು ತಾಯಿ.. "ಹಾಗೇ ಇನ್ನೊಂದು ಮುಖ್ಯವಾದ ವಿಷಯ.. ಪಲ್ಲವಿಯ ಗರ್ಭದಲ್ಲಿ ಬೆಳೆಯುತ್ತಿರುವುದೂ ನಮ್ಮಿಬ್ಬರಿಂದ ಸೃಷ್ಟಿಗೊಂಡ ಜೀವಾಂಕುರ...ಪಲ್ಲವಿ ನಮ್ಮಿಬ್ಬರ ಮಗುವಿಗೆ ಬಾಡಿಗೆ ತಾಯಿ.. ಅದೂ ಪ್ರನಾಳ ಶಿಶು.. ಎರಡನೇ ಪ್ರಯೋಗ.. ಹೇಮಾ ಮಾಡಿಸಿದ್ದು."

"ಸಾಕು ನಿಲ್ಲಿಸಿ ನಿಮ್ಮ ಈ ಕಲ್ಪನೆಯ ಕಂತೆ ಪುರಾಣವನ್ನ." ಅವನು ಬೆವೆತಿದ್ದ

"ನೀವು ಏನು ಬೇಕಾದ್ರೂ ಅನ್ನಿ, ನಾನು ಇದುವರೆಗೂ ಹೇಳಿದುದೆಲ್ಲಾ ನಿಜವೇ.. ಆದರೆ ಈ ಕುರಿತು ನನ್ನ, ಹೇಮಾಳ ಹೊರತು ಬೇರೆ ಯಾರಿಗೂ ಗೊತ್ತಿಲ್ಲ.. ಪಲ್ಲವಿಗೆ ತಿಳಿದರೆ ಅವಳಿಗೆ ಆಘಾತವಾಗುವುದು ಖಂಡಿತಾ...ಅವಳಿಗೆ ತಿಳಿಸ್ಬೇಡಿ.. ಆದರೆ, ನಿಮಗೆ ತಿಳಿಸಲೇಬೇಕು ಅಂತ ನನ್ನ ಮನಸ್ಸು ಒತ್ತಡ ಹಾಕ್ತಿತ್ತು...ಈಗ ಹಗುರವಾಯಿತು.." ಭುಜಂಗ ಅವಳ ಮಾತುಗಳನ್ನು ನಂಬದವನಂತೆ, ಅಲ್ಲಿಂದ ಎದ್ದು ಹೋಗಿದ್ದ. ಅವಳು ಅಲ್ಲೇ ಕುಳಿತಿದ್ದಳು. ಎಷ್ಟೋ ಹೊತ್ತಿನ ಬಳಿಕ ಚಿದಾನಂದ ಅಲ್ಲಿಗೆ ಬಂದ. ಅವನನ್ನು ಕಂಡು ಅವಳು ಸಂತಸವನ್ನು ವ್ಯಕ್ತ ಪಡಿಸಲಿಲ್ಲ, ಚಿದಾನಂದ ಬಂದು ಈ ಗಳಿಗೆಯನ್ನು ಹಾಳು ಮಾಡುತ್ತಿದಾನೆಂದೆನಿಸಿತ್ತು.

"ಹೇಗಿದೀಯ ಶ್ವೇತಾ? ಇನ್ನು ಮೂರು ನಾಲ್ಕು ದಿನಗಳ ಟೈಂ ಇತ್ತು ಅಲ್ವಾ?.. ಈಗ ಹೇಗಿದೀಯ.. ತುಂಬಾ ನೋಯುತ್ತಿದೆಯಾ?.." ಅವಳ ಭುಜದ ಮೇಲೆ ಕೈಯನ್ನಿಟ್ಟ ಅವಳು ಕೊಸರಿಕೊಂಡಳು. "ನನ್ಮೇಲೆ ಕೋಪಾನಾ?...ಪುಟ್ಟ ಮರಿ ಬಂದ ಕೂಡ್ಲೆ ಕೋಪ, ತಾಪ ಎಲ್ಲಾ ಮರೆತು ಹೋಗುತ್ತೇ ಅಲ್ವಾ!.. ನಿನ್ನ ಕಷ್ಟಾನ ನನ್ನಿಂದ ನೋಡುಕ್ಕೆ ಆಗ್ತಿಲ್ಲ.. ಆದರೆ ಏನ್ಮಾಡ್ಲಿ?"

"ಸ್ವಲ್ಪ ಸುಮ್ನಿರಿ. .ಭುಜಂಗ ಎಲ್ಲಿ? ನಿಮಗೆ ಸಿಗ್ಲಿಲ್ವಾ!..ಎತ್ಲಾಗೆ ಹೋದ್ರು?"

"ಸಿಕ್ಕಿದ್ರು, ಕ್ಯಾಂಟೀನಿನ ಕಡೆಗೆ ಹೋದ್ರು. ಡಾಕ್ಟರು ಬಂದು ನೋಡಿದ ಕೂಡಲೇ ಮನೆಗೆ ಹೊರಟು ಬಿಡೋಣ. ಅಂತಂದ್ರು. ಬೇಡ ಶ್ವೇತಾ.. ಇಲ್ಲೇ ಇದ್ಬಿಡು. ಡಾಕ್ಟ್ರು ನರ್ಸು ಯಾರಾದ್ರೂ ಇದ್ದೇ ಇರ್ತಾರೆ.. "ಅವರಿಗಾದ್ರೆ ಎಲ್ಲಾ ಗೊತ್ತಿರುತ್ತೆ".

"ಅನುಭವಸ್ಥರ ಥರ ಮಾತಾಡ್ಬೇಡಿ. ಮೊದಲು ಅವರು ಬರಲಿ.. ಆಮೇಲೆ ನೋಡೋಣ.."

"ನಂಗೆ ಭಯ ಆಗುತ್ತೆ ಕಣೇ ಶ್ವೇತಾ.. ನಿನ್ನ ಕಷ್ಟ ನೋಡ್ಲಾರೆ.. ಬೇಗ ಹೆರಿಗೆ ಆದರೆ ಸಾಕು ಅಂತ ಕಾಯ್ತಾ ಇದೀನಿ.." ಅವನ ಮಾತುಗಳು ಕೇಳಿಸಲಿಲ್ಲವೆಂಬಂತೆ ನಟಿಸುತ್ತಾ, ಭುಜಂಗ ಹೋದ ದಿಕ್ಕನ್ನೇ ನೋಡುತ್ತಿದ್ದಳು.

"ಡಾಕ್ಟರು ಬಂದಿದಾರೆ. ಒಳಕ್ಕೆ ಬರ್ಬೇಕಂತೆ.." ಎಂದು ಹೇಳಿ ನರ್ಸು ಶ್ವೇತಾಳನ್ನು ಒಳಕ್ಕೆ ಕರೆದೊಯ್ದಳು. ಚಿದಾನಂದ ಅಲ್ಲೇ ಉಳಿದ. ಭುಜಂಗ ಸಮೀಪದಲ್ಲಿದ್ದ ಪಾರ್ಕಿನ ಕಲ್ಲು ಬೆಂಚಿನ ಮೇಲೆ ಕುಳಿತಿದ್ದ. ಶ್ವೇತಾ, ಇದೇನನ್ನೆಲ್ಲಾ ಹೇಳಿದಳು? ಇದರಲ್ಲಿ ನಿಜ ಎಷ್ಟು? ಪಲ್ಲವಿಗೆ ಈ ವಿಷಯ ತಿಳಿದರೆ ಆಘಾತವಾಗುವುದು ಖಂಡಿತಾ. ಹೇಮಾ ಹೀಗೇಕೆ ಮಾಡಿದಳು? ಅದೂ ನನಗೆ ಒಂದು ಮಾತೂ ತಿಳಿಸದೆ? ನನ್ನ ಮೇಲೆ ಆಕ್ರೋಶವೇ? ಪಲ್ಲವಿಯ ಮೇಲೆ

ಅಸೂಯೆಯೇ? ಆದಷ್ಟು ಹೀಗೆ ಮಾಡಿದ್ದು ಸರಿಯೆ? ಅಂತ ವಿಚಾರಿಸಲೇ ಬೇಕು ಎಂದು ತನ್ನಲ್ಲೇ ನಿರ್ಧರಿಸಿಕೊಂಡು ಅಲ್ಲೇ ಅತ್ತಿಂದಿತ್ತ ತಿರುಗಾಡಿದ. ಎಷ್ಟೋ ಹೊತ್ತಿನ ಬಳಿಕ ಚಿದಾನಂದ ಅವನನ್ನು ಹುಡುಕಿಕೊಂಡು ಬಂದ. ಭುಜಂಗ ಯಾವ ಉತ್ಸಾಹವನ್ನು ತೋರಲಿಲ್ಲ.

"ಶ್ವೇತಾ, ಇಲ್ಲೇ ಇರ್ತೀನಿ ಅಂತ ಹೇಳ್ತಿದಾಳೆ ಏನ್ಮಾಡೋದು?" ಪೆದ್ದನಂತೆ ಕೇಳಿದ.

"ಡಾಕ್ಟರು ಏನಂತಾರೆ?" ಭುಜಂಗ ತನಗೆ ಸಂಬಂಧಿಸಿದ್ದಲ್ಲ ಎನ್ನುವಂತೆ ಕೇಳಿದ.

"ದಿನ ತುಂಬಿದೆ. ನೋವು ಮೇಲೆ ಹುಸಿಯಾಗಿ ಕಂಡಿದೆ. ನಾಳೆ ಒಂದು ದಿನ ಕಾದಿದ್ದು ಹೆರಿಗೆ ಆಗದಿದ್ದರೆ, ಆಪರೇಷನ್ ಮಾಡಬೇಕಾಗಬಹುದು ಅಂತ ಹೇಳಿದಾರೆ.."

"ಡಾಕ್ಟರು ಹೇಗೆ ಹೇಳ್ತಾರೋ ಹಾಗೆ ಮಾಡಿ.. ನಂಗೇನು ಗೊತ್ತಾಗುತ್ತೆ?.." ಚಿದಾನಂದ ಮತ್ತೆ ವಾಪಸ್ಸು ಹೋಗಿದ್ದ. ಹಾಗಾದರೆ, ಶ್ವೇತಾ, ಚಿದಾನಂದ ಊರಿನಲ್ಲಿಲ್ಲದ ಸಮಯವನ್ನು ಕಾದಿದ್ದು ನನ್ನೊಡನೆ ಮಾತನಾಡಲು ಈ ಉಪಾಯ ಹೂಡಿರಬಹುದೇ?..ಈ ವಿಷಯವನ್ನು ತಿಳಿಸದೇ ಇದ್ದಿದ್ದರೆ ಚೆನ್ನಾಗಿತ್ತು. ಅವಳಿಗೆ ಹುಟ್ಟುವ ಮಗು ನನ್ನದು ಅಂತ ತಿಳಿದ ಮೇಲೆ ತನ್ನ ಚಡಪಡಿಕೆ ಜಾಸ್ತಿಯಾಗಿದೆ. ಪಲ್ಲವಿಗೆ ಈ ವಿಷಯ ತಿಳಿದರೆ ಅವಳಿಗೆ ತನ್ನ ಮಗುವಿನ ಮೇಲೆ ವ್ಯಾಮೋಹ ಖಂಡಿತಾ ಹುಟ್ಟಲಾರದು.. ದ್ವೇಷಿಸಿದರೆ? ಮುಂದೆ ಆ ಮಗುವಿನ ಗತಿಯೇನು? ದೇವರೇ ಶ್ವೇತಾ ಹೇಳಿದ್ದೆಲ್ಲಾ ಸುಳ್ಳಾಗಿರಲಿ.. ಈ ಕೆಟ್ಟ ತಮಾಷೆ ಮಾಡಿದ್ದರೂ ಅವಳನ್ನು ಕ್ಷಮಿಸುತ್ತೀನಿ. ಚಿದಾನಂದ ಮತ್ತೆ ಬಂದಿದ್ದ.

"ಶ್ವೇತಾಳ ತಾಯಿಗೆ ಫೋನು ಮಾಡ್ತೀನಿ...ಅಮ್ಮನ್ನ ಕರ್ಕೊಂಡು ಬರ್ತೀನಿ.." ತನಗೇ ಎಂಬಂತೆ ಹೇಳಿಕೊಂಡ.

"ದುಡ್ಡು ಬೇಕಾಗಿತ್ತಾ ಚಿದಾನಂದ...?" ಸಂಕೋಚದಿಂದ ತಲೆಯಾಡಿಸಿದ. "ನೀವು ಇಲ್ಲೇ ಇರಿ. ನಾನು ಅತ್ತೇನ ಕರ್ಕೊಂಡು ಬರ್ತೀನಿ.. ಎನ್ನುತ್ತಾ ತನ್ನ ಜೇಬಿನಲ್ಲಿದ್ದ ಹಣವನ್ನು ಎಣಿಸದೇ ಹಾಗೇ ಕೊಟ್ಟ...ಮತ್ತೆ ಕೊಡ್ತೀನಿ. ಸಂಕೋಚ ಪಟ್ಕೋಬೇಡಿ" ಎಂದ. ಅವನು ಹೂಂ ಗುಟ್ಟಿದ. ಭುಜಂಗ ಸೀದಾ ಮಂದಾಕಿನಿಯ ಬಳಿಗೆ ಬಂದ. ಅವನನ್ನು ಕಂಡೊಡನೆ ಮಂದಾಕಿನಿ ಸಂಭ್ರಮದಿಂದ ನೋಡಿದಳು. ಆ ಸಂಭ್ರಮಕ್ಕೆ ಅರ್ಥವಿಲ್ಲ ಎನಿಸಿತ್ತು.. "ಏನೋ ವಾಪಸ್ಸು ಬಂದ್ಬಿಟ್ಟೆ?..ಚಿದಾನಂದ ಬಂದ್ನಾ? ಶ್ವೇತಾ ಹಡೆದ್ಲಾ? ಎಂಥಾ ಮಗು?" ವೈದೇಹಿ ಪ್ರಶ್ನಿಸಿದಳು.

"ಇಲ್ಲ ಅತ್ತೇ...ಮಂದಾಕಿನಿ ಅತ್ತೇನ ಕರ್ಕೊಂಡು ಹೋಗೋಕೆ ಅಂತ ಬಂದೆ. ಚಿದಾನಂದ ಅಲ್ಲೇ ಇದಾನೆ. ನೀವು ರೆಡಿಯಾಗಿ" ಎಂದು ಹೇಳಿ ತನ್ನ ಮನೆಗೆ ಬಂದ. ತಾಯಿಯ ಪ್ರಶ್ನೆಗಳಿಗೆ ಉತ್ತರಿಸಿ, ಪಲ್ಲವಿ ಇದ್ದೆಡೆಗೆ ಬಂದ. ಏಕೋ ಏನೋ ಅವಳನ್ನು ದಿಟ್ಟಿಸುವುದು ಕಷ್ಟವೆನಿಸಿತ್ತು. ಪಲ್ಲವಿ ಗಾಬರಿಗೊಂಡಳು.

"ಯಾಕ್ರೀ ಏನಾಯ್ತು? ಡಾಕ್ಟರು ಏನಂದ್ರು?" ಅವನ ತೋಳನ್ನು ಹಿಡಿದು ಕೇಳಿದಳು.

"ಏನಿಲ್ಲ, ಯಾಕೋ ಆಯಾಸ.. ಅಷ್ಟೇ...ನಿನ್ನ ಊಟ ಆಯ್ತಾ?.."

"ಊಟ ಆಗ್ಲೇ ಆಯ್ತು. ಶ್ವೇತಾ ಹೇಗಿದಾಳೇ?"

"ನಂಗೊತ್ತಿಲ್ಲ, ಅಲ್ಲಿ ಚಿದಾನಂದ ಇದಾನೆ. ನೋಡ್ಕೋತಾನೆ ಬಿಡು.." ಎಂದು ಹೇಳಿ ಮಂಚದ ಮೇಲೆ ಉರುಳಿಕೊಂಡ. ಹಣೆಯ ಮೇಲೆ ತೋಳನ್ನು ಇಟ್ಟುಕೊಂಡ.

"ಏನಾಯ್ತು ಹೇಳಿ, ನಾನು ಗಾಬರಿ ಮಾಡ್ಕೊಳ್ಳುಲ್ಲ.."

"ನಾಳೆ ಡೆಲಿವರಿ ಆಗಬಹುದು ಅಂತ ಹೇಳಿದ್ರಂತೆ...ಇನ್ನೇನೂ ಗೊತ್ತಿಲ್ಲ."

"ತುಂಬಾ ದುಡ್ಡು ಖರ್ಚಾಗುತ್ತಂತಾ?.. ಚಿದಾನಂದನ ಹತ್ರ ಹಣ ಇಲ್ಲ ಅಂತ ನಿಮಗೆ ಚಿಂತೇನಾ?" ಭುಜಂಗ ನಿದ್ದೆ ಬಂದವನಂತೆ ನಟಿಸಿದ. ಪಲ್ಲವಿ ಸುಮ್ಮನಾದಳು.

"ಅತ್ತೆ ಬಂದಿದಾರೆ.. ಅಣ್ಣಾ.." ವಾಣಿ ಕರೆದಾಗ ಬೇಸರದಿಂದ ಎದ್ದ. ಸಾವಿತ್ರಿ ಸೆರಗಿಗೆ ಕೈ ಒರೆಸುತ್ತಾ ಬಂದಳು.

"ಮಂದಾ, ನೀನು ಇಲ್ಲಿರು. ನಾನು ಆಸ್ಪತ್ರೆಗೆ ಹೋಗ್ತೀನಿ. ನಿಂಗೆ ಗೊತ್ತಾಗುಲ್ಲ."

"ನಿಮಗ್ಯಾಕೆ ತೊಂದ್ರೆ?.."

"ತೊಂದ್ರೆ ಏನ್ಬಂತು? ಸಮಯದಲ್ಲಿ ನೆರವಾಗುವುದು ನಮ್ಮ ಧರ್ಮ...ಭುಜಂಗ ಏಳೋ ಊಟ ಮಾಡು.. ನಾನೂ ಒಂದು ತುತ್ತು ತಿಂತೀನಿ..."

"ಅಮ್ಮಾ ನಿಂಗ್ಯಾಕಮ್ಮ ಕಷ್ಟ? ಪಲ್ಲವಿಯ ಜೊತೆ ಮನೇಲಿರು.. ಅತ್ತೆ ಬರಲಿ.."

"ಅವಳು, ಪಲ್ಲವಿಗೆ ಅಮ್ಮ.. ಅವಳೇ ಇಲ್ಲಿರಲಿ..ಒಂದು ರಾತ್ರಿ ತಾನೆ.. ನಾನೇ ಅಲ್ಲಿರ್ತೀನಿ...ಚಿದಾನಂದ ಕಾಯ್ತಾ ಇರ್ತಾನೆ ಬೇಗ ಏಳು.." ಭುಜಂಗ, ಪಲ್ಲವಿಯ ಕಡೆ ನೋಡಿ, "ಈಗೇನ್ಮಾಡೋದು?" ಎಂದು ಕೆಳದನಿಯಲ್ಲಿ ಕೇಳಿದ.

"ನಾನೇನ್ಹೇಳ್ಲಿ?" ಎಂದಳು ಭುಜವನ್ನು ಎತ್ತಿ. ಭುಜಂಗ ಊಟಕ್ಕೆ ಕುಳಿತ. ಸಾವಿತ್ರಿ ಅವನಿಗೂ ಬಡಿಸಿ, ತಾನೂ ಊಟವನ್ನು ಮುಗಿಸಿ ಸಿದ್ಧಳಾದಳು. ಇಬ್ಬರೂ ಹೊರಟರು. ಪಲ್ಲವಿ ತನ್ನ ಪಾಡಿಗೆ ತಾನು ಮಲಗಿದಳು. ಮಂದಾಕಿನಿ ದೇವರನ್ನು ಸ್ಮರಿಸುತ್ತಾ ಕುಳಿತಳು.

ಎರಡು ದಿನಗಳ ನಂತರ ಶ್ವೇತಾಳಿಗೆ ಗಂಡು ಮಗುವಾಗಿತ್ತು. ಭುಜಂಗ ಮತ್ತೆ ನರ್ಸಿಂಗ್ ಹೋಂ ಕಡೆ ಹೋಗಿರಲಿಲ್ಲ, ಶ್ವೇತಾಳ ಬಗ್ಗೆ ವಿಚಾರಿಸಿರಲಿಲ್ಲ, ಅವನ ಅತಿ ಗಂಭೀರವಾದ ಮುಖವನ್ನು ಕಂಡು ಪಲ್ಲವಿ ಅಚ್ಚರಿಗೊಂಡಿದ್ದರು.

"ಏನಾಗಿದೆ ನಿಮಗೆ! ನನ್ನ ಬಗ್ಗೆ ಆತಂಕಾನಾ!..ನಾನು ಆರೋಗ್ಯವಾಗಿದೀನಿ.." ಎಂದಿದ್ದಳು.

"ನಾನು ಒಂದೆರಡು ದಿನಗಳ ಮಟ್ಟಿಗೆ ಬೆಂಗಳೂರಿಗೆ ಹೋಗ್ಬೇಕಾಗಿದೆ. ಅದನ್ನೇ ಯೋಚಿಸ್ತಿದ್ದೆ."

"ಶ್ವೇತಾಳ ಮಗುವನ್ನು ನೋಡ್ಕೊಂಡು ಬರೋಣ.. ಕರ್ಕೊಂಡು ಹೋಗ್ತೀರಾ?"

"ಬೇಡ, ನಿಂಗೆ ಆಯಾಸವಾಗುತ್ತೆ. ಇನ್ನೂ ಈಗ್ತಾನೇ ಡೆಲಿವರಿ ಆಗಿದೆ ಅಂತ ವಿಷಯ ತಿಳಿದಿದೆ. ಮನೆಗೆ ಬಂದ್ಮೇಲೆ ನೋಡಿದ್ರಾಯ್ತು..."

"ನೀವು ನೋಡುಕ್ಕೆ ಹೋಗುಲ್ವಾ?.."

"ಅರ್ಜೆಂಟೇನು?" ಎಂದು ಬಿಟ್ಟ. ಆದರೆ ಚಿದಾನಂದ ಕೇಳಿದಾಗಲೆಲ್ಲಾ ದುಡ್ಡನ್ನು ಕೊಟ್ಟಿದ್ದನ್ನು ಕಂಡಿದ್ದಳು. ಇವನಿಗೇನಾಯ್ತು ಅಂತ ಯೋಚಿಸುವಂತಾಗಿತ್ತು.

ಮಗುವನ್ನು ನೋಡಿಕೊಂಡು ಬಂದ ತಾಯಿ ಸಂಭ್ರಮದಿಂದ ವರ್ಣಿಸಿದ್ದಳು. ಮಗು ತುಂಬಾ ಮುದ್ದಾಗಿದೆ. ಮೂರುವರೆ ಕೆ.ಜಿ. ಇತ್ತಂತೆ. ಮಗುವಿನ ಬಲತೊಡೆಯ ಮೇಲೆ ಗರುಡ ಮಚ್ಚೆ ಇದೆಯಂತೆ. ಭುಜಂಗ ಸ್ತಬ್ಧನಾದ. ಶ್ವೇತಾಳಿಗೆ ಜನಿಸಿರುವ ಮಗುವಿನ ತೊಡೆಯ ಮೇಲೆ ಗರುಡ ಮಚ್ಚೆ! ಮನಸ್ಸು ಕೆಟ್ಟು ಹೋಯಿತು. ಹೀಗಾಗಬಾರದಾಗಿತ್ತು. ಹೇಮಾ ಹೀಗೆ ಮಾಡಬಾರದಾಗಿತ್ತು ಎಂದು ಪದೇ ಪದೇ ಅನ್ನಿಸತೊಡಗಿತು. ತನ್ನ ಮನಸ್ಸು ಸರಿಯಿಲ್ಲ, ತಾನು ಕೆಲವು ದಿನಗಳ ಮಟ್ಟಿಗೆ ಈ ಊರಿನಿಂದ ದೂರ ಎಲ್ಲಾದರೂ ಹೋಗಿ ಬಿಡಬೇಕೆಂದುಕೊಂಡ. ಆದರೆ, ಪಲ್ಲವಿಗೆ ದಿನಗಳು ತುಂಬಿರುವ ಸಮಯದಲ್ಲಿ ತಾನು ಮನೆಯಿಂದ ಹೊರಗೆ ಹೋಗುವುದು ಸರಿಯೆ?..ಎಲ್ಲರೂ ಏನೆಂದುಕೊಳ್ಳಬಹುದು? ಪಲ್ಲವಿಗೆ ಸಂಶಯ ಬರಬಹುದು. ದಿಕ್ಕು ತೋಚದವನಂತೆ ಚಡಪಡಿಸಿದ. ವಾರ ಕಳೆಯಿತು.

ಶ್ವೇತಾ ಮಗುವಿನೊಂದಿಗೆ ಮನೆಗೆ ಬಂದಿದ್ದಳು. ಭುಜಂಗ ಮಗುವನ್ನು ನೋಡಲು ಬಂದಿಲ್ಲ ಎನ್ನುವುದನ್ನು ಶ್ವೇತಾ ಗಮನಿಸಿದ್ದಳು. ಅವನಿಗೆ ನನ್ನ ಮೇಲೆ ಅಸಹ್ಯ ಮೂಡಿರಬಹುದು ಅಂತಂದುಕೊಂಡಾಗ ಅಸಹನೀಯವೆನಿಸಿತ್ತು. ಅವನಿಗೆ ರಹಸ್ಯವನ್ನು ತಿಳಿಸಿ ತಪ್ಪು ಮಾಡಿದೆನೇನೋ ಎನ್ನುವ ಭಾವ ಕಾಡತೊಡಗಿತು. ಮಗುವನ್ನು ನೋಡಿ ಮಾತನಾಡಿಸಲು ಬಂದ ಪಲ್ಲವಿಯೊಡನೆ ಹೇಳಿದ್ದಳು.

"ನಿನ್ನ ಗಂಡ, ನನ್ನ ಮಗುವನ್ನು ನೋಡಲು ಬಂದೇ ಇಲ್ಲ. ನೀನು ಹೋಗಬೇಡ ಅಂತ ಏನಾದ್ರೂ ಹೇಳಿದೀಯಾ?"

"ಛೀ..ನಾನ್ಯಾಕೆ ಹಾಗೆ ಹೇಳ್ಲಿ? ಅವರೇ ತಾನೇ ನಿನ್ನನ್ನು ನರ್ಸಿಂಗ್ ಹೋಂಗೆ ಸೇರಿಸಿದ್ದು...ಅವರಿಗೆ ಮುಜುಗರವಿರಬಹುದು.."

"ಏನು ಮುಜುಗರ? ನಿನಗೆ ಮಗುವಾದಾಗ್ಲೂ ಹೀಗೇ ಮಾಡ್ತಾರ! ಅವರಿಗೆ ನನ್ನ ಮೇಲೆ ಅಸಹ್ಯ... ಚಿದಾನಂದನ ಮೇಲೆ ಅಸಹನೆ.. ತಾನೇ ದೊಡ್ಡ ಮನುಷ್ಯ ಅನ್ನೋ ಜಂಭ. ನಮಗೆ ಬಡತನ ಅಂತ ಉದಾಸೀನ..." ಆಪಾದನೆಗಳನ್ನು ಹೊರಿಸಿದಳು.

"ಯಾಕೇ ಹೀಗೆಲ್ಲಾ ಮಾತಾಡ್ತೀಯಾ...ನಿನಗೆ ಎಷ್ಟು ಸಹಾಯ ಮಾಡಿದಾರೆ. ನಿನ್ನ ಮದುವೆ ಮಾಡಿಸ್ಲಿಲ್ವಾ!... ನಿಂಗೆ ಅಂತ ಬೇರೆ ಮನೆ ಮಾಡಿ ಕೊಡ್ಲಿಲ್ವಾ?... ಅವರಿಗೆ ನಿನ್ನ ಬಗ್ಗೆ ಒಳ್ಳೆಯ ಭಾವನೆ ಇದೆ. ನಿನಗೇ ಅವರ ಮೇಲೆ ಕೊಳಕು ಭಾವನೆ.. ಅದು ಅವರಿಗೆ ಗೊತ್ತಿಲ್ಲ..ನೀನೇ ಹಾಗೇನಾದ್ರೂ ವರ್ತಿಸಿದ್ರೆ ನಂಗೊತ್ತಿಲ್ಲ."

"ಸುಮ್ನೆ ನಿನ್ನ ಗಂಡನ್ನ ಹೊಗಳ್ಕೋಬೇಡ..." ಅವಳು ಒರಟಾಗಿ ನುಡಿದಾಗ ಪಲ್ಲವಿ ಮುಖವನ್ನು ಊದಿಸಿಕೊಂಡು ಮನೆಗೆ ಬಂದಳು. ತೋಟಕ್ಕೆ ಹೋಗಿದ್ದ ಭುಜಂಗ ಇನ್ನು ಹಿಂತಿರುಗಿರಲಿಲ್ಲ. ಸುಸ್ತು ಎಂದು ಮಲಗಿದವಳನ್ನು ಕಂಡು ಸಾವಿತ್ರಿ ಆತಂಕಗೊಂಡು ಮಗನಿಗೆ ಹೇಳಿ ಕಳಿಸಿದಳು. ಭುಜಂಗ ಅವಸವಸರವಾಗಿ ಬಂದ.

"ಯಾಕಮ್ಮಾ...ಹುಶಾರಿಲ್ವಾ ಪಲ್ಲವೀಗೆ? ಟ್ಯಾಕ್ಸಿ ತರಿಸ್ಲಾ?.."

"ನೀನೇ ಕೇಳಪ್ಪಾ ಸುಮ್ನೇ ಮಲಗ್ಬಿಟ್ಟಿದಾಳೆ. ಅದಕ್ಕೇ ಹೇಳಿ ಕಳಿಸ್ದೆ..." ಭುಜಂಗ ರೂಮಿಗೆ ಬಂದ.

"ಯಾಕೇ ಪಲ್ಲವೀ...? ಏನಾಗ್ತಿದೆ? ಅಮ್ಮನ ಹತ್ರ ಹೇಳ್ಳೋಕೂ ಸಂಕೋಚಾನಾ?" ಎನ್ನುತ್ತಾ ಅವಳ ಮಗ್ಗುಲಲ್ಲಿ ಕುಳಿತ. ಅವಳು ಕಷ್ಟಪಟ್ಟು ಎದ್ದು ಕುಳಿತಳು. ಊದಿದಂತಿದ್ದ ಅವಳ ಮುಖವನ್ನು ಕಂಡು ರಮಿಸಿದ. "ಏನಾಯ್ತು ಅಂತ ಹೇಳು" ಒತ್ತಾಯಿಸಿದ.

"ಶ್ವೇತಾ ನಿಮ್ಮನ್ನ ಏನೇನೋ ಅಂದ್ಲು, ನಂಗೆ ಬೇಸರವಾಯ್ತು." ಅವನು ನಡುಗಿದ. ಏನೇನು ಹೇಳಿ ಬಿಟ್ಟಿದ್ದಾಳೋ ಎಂದು ದಿಗಿಲಾಗಿತ್ತು. "ನಿಮಗೆ ದುರಹಂಕಾರ, ಜಂಭ ಅಂತ ಆಕ್ಷೇಪಣೆ ಮಾಡಿದ್ಲು" ಅವನು ನಿರಾಳವಾದ ಉಸಿರನ್ನು ಬಿಟ್ಟ

"ಅಷ್ಟೇ ತಾನೇ...ಅಂದರೆ ಅಂದ್ಲು.. ನಷ್ಟ ಏನಿಲ್ಲ."

"ನಿಮ್ಮನ್ಯಾಕೆ ಅನ್ಬೇಕು! ಉಪಕಾರ ಸ್ಮರಣೆ ಇಲ್ಲ ಅವಳಿಗೆ. ನಮ್ಮ ಹತ್ತಿರ ದುಡ್ಡಿದೆ ಅಂತ ಅವಳಿಗೆ ಅಸೂಯೆ.. ಅದಕ್ಕೇ ಬಾಯಿಗೆ ಬಂದಂತೆ ಮಾತಾಡ್ತಳೆ."

"ಅವಳು ಏನೋ ಆಡ್ತಾಳೆ ಅಂತ, ನೀನ್ಯಾಕೆ ಬೇಸರ ಮಾಡ್ಕೋತೀಯ. ಅವಳ ಸ್ವಭಾವ ನಿನಗೆ ಹೊಸದಲ್ಲವಲ್ಲ.. ಅತ್ಲಾಗೆ ಬಿಡು.."

"ಅದಕ್ಕೇ ನಾನೂ ಸುಮ್ಮನಾದೆ...ಇಲ್ದಿದ್ರೆ ದಬಾಯಿಸಿ ಅನ್ನಬಹುದಾಗಿತ್ತು. ನೀವ್ಯಾಕೆ ಮಗೂನ ನೋಡೋಕೆ ಹೋಗಿಲ್ಲ..? ಮಗುವಿನ ಬಲ ತೊಡೆಯ ಮೇಲೆ ಗರುಡ ಮಚ್ಚೆ ಇದೆ ಅಂತ ಜಂಭದಿಂದ ತೋರಿಸಿದ್ಲು. ನಮ್ಮ ಮಗುವಿಗೂ ಗರುಡ ಮಚ್ಚೆ ಇದ್ದರೆ ಎಷ್ಟು ಚೆನ್ನ ಅಲ್ವಾ?.. ಇರುತ್ತೋ ಇಲ್ವೋ.."

"ಇರಲಿ ಅಂತ ನೀನು ಆಸೆ ಪಟ್ಟರೆ ಅದು ಇದ್ದು ಬಿಡುತ್ತಾ ಪಲ್ಲವೀ.. ಇಲ್ದಿದ್ರೆ ನಿರಾಸೆ ಆಗುತ್ತೆ.. ಇದ್ದರೂ ಸರಿ; ಇಲ್ಲದಿದ್ರೂ ಸರಿ.."

"ಮತ್ತೇ? ನಿಮಗೆ ಇದ್ದ ಮೇಲೆ, ನಮ್ಮ ಮಗುವಿಗೂ ಇರಲಿ ಅಂತ ಆಸೆ.. ಅದು ತಪ್ಪಾ!.. ನಿಮಗೆ ಹಾಗೆಲ್ಲಾ ಅನ್ನಿಸೋದೇ ಇಲ್ವಾ?"

"ತಪ್ಪೇನಿಲ್ಲ.. ನನಗೆ ಇದೆಯಲ್ಲ ಅಷ್ಟು ಸಾಕು.." ನಗಿಸಲು ನೋಡಿದ.

"ನಿಮಗಿರೋದು ಅವಳಿಗೇನು ಗೊತ್ತು? ನನಗೆ ಮಾತ್ರ ಗೊತ್ತು.."

"ಹೋಗ್ಲಿ ಬಿಡು ಪಲ್ಲವೀ...ಈಗ ಆ ಮತ್ಯಾಕೆ?..ಡಾಕ್ಟರು ಯಾವಾಗ ಬರಬೇಕು ಅಂತ ಹೇಳಿದಾರೆ?...ನೀನು ಯಾವುದಕ್ಕೂ ಆತಂಕ ಪಟ್ಕೋಬೇಡ.. ಸಂಕೋಚವೂ ಬೇಡ.."

"ಮುಂದಿನ ವಾರ ಬನ್ನಿ ಅಂದಿದಾರೆ. ನನಗೂ ನನ್ನ ಮಗುವನ್ನು ನೋಡ್ಬೇಕು ಅಂತ ಆಸೆ ಹೆಚ್ಚಾಗ್ತಿದೆ.. ನಿಮಗೇನನ್ನಿಸ್ತಿದೆ..?"

"ನನಗೂ ಹಾಗೇ ಅನ್ನಿಸ್ತಿದೆ..." ಅವಳಿಗೋಸ್ಕರ ನುಡಿದ. ಶ್ವೇತಾ ಬೇರೆ ಏನಾದ್ರೂ ಕಿತಾಪತಿ

ಮಾಡುವ ಮೊದಲು ಅವಳ ಮಗುವನ್ನು ನೋಡಿ ಮಾತನಾಡಬೇಕೆಂದುಕೊಂಡ.

ಚಿದಾನಂದ ಗದ್ದೆಯ ಕಡೆಗೆ ಹೋದುದನ್ನು ಕಂಡು, ಮಂದಾಕಿನಿಯ ಮನೆಗೆ ಬಂದ. ಮಂದಾಕಿನಿ ಅಡಿಗೆ ಮನೆಯಲ್ಲಿದ್ದಳು. ಶ್ವೇತಾ, ಭುಜಂಗನನ್ನು ಕಂಡು ಮೆಲುನಗೆ ನಕ್ಕಳು. ಈಗ ನಿಮ್ಮ ಮಗನನ್ನು ನೋಡ್ಬೇಕು ಅಂತ ಮನಸ್ಸಾಯ್ತಾ? ಬನ್ನಿ ನೋಡೋರಂತೆ.."

"ಹೀಗೆಲ್ಲಾ ಮಾತಾಡ್ಬೇಡಿ ನೀವು...ನಿಮಗೆ ಎಚ್ಚರಿಕೆ ಹೇಳಿ ಹೋಗೋಣ ಅಂತ ಬಂದೆ.."

"ನಿಜಾನೇ ತಾನೇ ಹೇಳಿದ್ದು.. ಸುಳ್ಳನ್ನೇನೂ ಹೇಳಿಲ್ಲ ನಾನು.."

"ನಿಜವೋ ಸುಳ್ಳೋ.. ಇಂಥಾ ಸುದ್ದೀನ ಹರಡ್ಬೇಡಿ.. ಅನಾಹುತಗಳಾಗಿ ಬಿಡುತ್ತೆ. ಪಲ್ಲವಿ ನಿಮಗೇನೂ ದ್ರೋಹ ಮಾಡಿಲ್ಲವಲ್ಲ.. ನಿಮಗ್ಯಾಕೆ ಬೇಕು ಈ ಕಿತಾಪತಿಯೆಲ್ಲಾ?"

"ಹೌದು, ಅವಳು ನನಗೆ ಉಪಕಾರವನ್ನೇ ಮಾಡ್ತಿದಾಳೆ. ನನ್ನ ಇನ್ನೊಂದು ಮಗುವಿಗೆ ತಾಯಿಯಾಗ್ತಿದಾಳೆ...ಆ ಸಂತಸ ನನಗಿದೆ. ಅದನ್ನು ನಿಮ್ಮೊಡನೆ ಹಂಚಿಕೊಂಡೆ ಅಷ್ಟೇ.."

"ಅದು ನಮ್ಮ ಮಗು...ನಿಮ್ಮ ಮಗುವಲ್ಲ.."

"ಹಾಗೇ ಅಂದ್ಕೊಳ್ಳಿ.. ಆದರೆ ಈ ಮಗುವೂ ನಿಮ್ಮದೇ ಅದನ್ನು ಮರೀಬೇಡಿ.."

"ಇನ್ನು ಈ ಮಾತುಗಳನ್ನು ಬೆಳೆಸ್ಬೇಡಿ.. ನಾನು ಹೇಮಳ ಹತ್ರ ಮಾತನ್ನಾಡಿ ನಿಜ ಏನೂಂತ ತಿಳಿದುಕೊಳ್ಳುವವರೆಗೂ, ನಿಮ್ಮ ಮಾತನ್ನು ನಂಬುಲ್ಲ..."

"ಮಗುವಿಗೆ ಗರುಡ ಮಚ್ಚೆ ಇದೆ...ನಿಮಗೂ ಇದೆಯಂತಲ್ಲ, ಹೇಮಾ ಹೇಳಿದ್ದು"

"ಎಷ್ಟೋ ಜನಕ್ಕೆ ಗರುಡ ಮಚ್ಚೆ ಇರುತ್ತೆ. ಅದು ಪುರಾವೆ ಅಲ್ಲ, ಅಥವಾ ನನಗೆ ಯಾವ ಪುರಾವೆಯೂ ಬೇಕಿಲ್ಲ, ನಿಮಗೆ ನ್ಯಾಯವಾಗಿ ಸಂಸಾರ ಮಾಡಿಕೊಂಡು ಇರಬೇಕೆಂಬ ಆಸೆ ಇದ್ದರೆ ಈ ಊರಿನಲ್ಲಿರಿ. ಇಲ್ದಿದ್ರೆ ಈ ಮಗುವನ್ನು ನನಗೆ ವಹಿಸಿಕೊಟ್ಟು ಚಿದಾನಂದನನ್ನು ಬಿಟ್ಟು ಹೊರಟು ಹೋಗಿ.."

"ಯಾಕೆ ಇಷ್ಟು ಕಟುವಾಗಿ ಮಾತಾಡ್ತೀರಿ ಭುಜಂಗ್. ನಾನು ನಿಮ್ಮನ್ನು ಪ್ರೀತಿಸ್ತೀನಿ."

"ನಾನು ನಿಮ್ಮನ್ನು ಪ್ರೀತಿಸುಲ್ಲ.. ಪಲ್ಲವಿಯ ಹೊರತು ಬೇರ್‍ಯಾರನ್ನೂ ಪ್ರೀತಿಸುಲ್ಲ."

"ಮೊದಲು ಈ ಮಗುವಿನ ಮುಖವನ್ನು ನೋಡಿ..ಅಂತಃಕರಣ ಸೆಳೆಯುತ್ತೆ.. ಮಗುವಿನ ಮೇಲೆ ಮಮತೆ ಹುಟ್ಟುತ್ತೆ. ನನ್ನ ಮೇಲೆ ಪ್ರೀತಿ ಬೆಳೆಯುತ್ತೆ.."

"ನನ್ನನ್ನ ಕೆಟ್ಟವನನ್ನಾಗಿ ಮಾಡ್ಬೇಕು ಅಂತ ಆಸೆ ಇದ್ದರೆ.. ಹೀಗೆ ಮಾತಾಡಿ ಮರ್ಯಾದಸ್ಥರು ಮಾತಾಡುವ ರೀತೀನ ಇದು...? ನಾನು ನಿಮ್ಮ ಮೇಲೆ ಕೇಸ್ ಹಾಕ್ತೀನಿ. ನನಗೆ ತಿಳಿಯದಂತೆ, ಈ ಪ್ರಯೋಗದಲ್ಲಿ ಶಾಮೀಲಾಗಿದೀರಿ ಅಂತ ಸಾಬೀತು ಮಾಡ್ತೀನಿ. ನಿಮಗೆ ಶಿಕ್ಷೆ ಆಗುತ್ತೆ. ಎಲ್ಲರಿಂದ ದೂರ ಆಗ್ತೀರಿ.. ಯಾರ ಅನುಕಂಪವೂ ನಿಮಗೆ ಸಿಗುಲ್ಲ."

"ನನ್ನ ಮನಸ್ನಲ್ಲಿ ಯಾವ ಕೆಟ್ಟ ಆಲೋಚನೆಯೂ ಇರ್ಲಿಲ್ಲ, ಇಷ್ಟಕ್ಕೆಲ್ಲಾ ಹೇಮಾನೇ ಕಾರಣ.

ಅವಳೇ ಆಸೆ ತೋರಿಸಿದ್ದು.."

"ಸರಿ. ಅವಳನ್ನು ವಿಚಾರಿಸಿಕೊಳ್ತೀನಿ. ನಿಮಗೆ ಏನೂ ಗೊತ್ತಿಲ್ಲದವರಂತೆ ನೀವು ಸುಮ್ಮನಿದ್ರೆ ಸರಿ. ಇಲ್ದಿದ್ರೆ ನಾನು ತುಂಬಾ ಕೆಟ್ಟವನಾಗ್ತೀನಿ.." ಎಂದು ತೋರು ಬೆರಳನ್ನು ತೋರಿ ಎಚ್ಚರಿಕೆ ಹೇಳಿ ಹೊರಬಂದ. ಹೊರಬಾಗಿಲಿನ ಬಳಿ ಮಂದಾಕಿನಿ ಎದುರಾದಳು.

"ಹೊರಟು ಬಿಟ್ಯಾ! ಕಾಫಿ ಮಾಡಿಕೊಡ್ತೀನಿ. ಸಕ್ಕರೆ ಮುಗಿದಿತ್ತು. ಅಕ್ಕನ ಮನೆಗೆ ಹೋಗಿದ್ದೆ.. ಐದೇ ನಿಮಿಷ.."

"ಬೇಡ ಅತ್ತೆ, ಕಾಫಿ ಬೇಡ.."

"ಮಗೂನ ನೋಡಿದ್ಯಾ! ಚಿದಾನಂದ ಮಗುವಾಗಿದ್ದಾಗ ಹೀಗೇ ಇದ್ದ.." ಅವಳು ವಾತ್ಸಲ್ಯ ಪೂರ್ಣವಾಗಿ ಹೇಳಿಕೊಂಡಾಗ, ಅವನಿಗೆ ನಗಬೇಕೋ, ಕನಿಕರ ಪಡಬೇಕೋ ಅರ್ಥವಾಗಲಿಲ್ಲ, ಸುಮ್ಮನೆ ಕಿರುನಗೆ ನಕ್ಕು ಅಲ್ಲಿಂದ ಮುಂದೆ ಸರಿಯುವ ಮುನ್ನ ನುಡಿದ.

"ಇಲ್ಲ ಅತ್ತೇ...ನಾನು ಮಗೂನ ಸರಿಯಾಗಿ ನೋಡ್ಲೇ ಇಲ್ಲ, ಮತ್ತೆಂದಾದ್ರೂ ಬರ್ತೀನಿ.." ಎಂದು ಹೇಳಿ ಅಲ್ಲಿ ನಿಲ್ಲದೇ ತನ್ನ ಮನೆಗೆ ಬಂದು ಬಿಟ್ಟ.

"ಎಲ್ಲಿಗೆ ಹೋಗಿದ್ರಿ ನೀವು? ಮೊಬೈಲ್‌ನ ಮನೇಲೇ ಬಿಟ್ಟು ಹೋಗಿದ್ರಿ. ಹೇಮಾ ಫೋನು ಮಾಡಿದ್ಲು.. ಆಮೇಲೆ ಮತ್ತೆ ಮಾಡ್ತೀನಿ ಅಂತಂದ್ಲು.." ಪಲ್ಲವಿ ಎಂದಳು.

"ಎಲ್ಲಿಂದ ಮಾತಾಡಿದ್ಲು!" ನಿರುತ್ಸಾಹದಿಂದ ಕೇಳಿದ. ಅವಳು ಅಚ್ಚರಿಗೊಂಡಳು.

"ಡೆಲ್ಲಿಯಿಂದ ಅಂತ ಅಂದ್ಹಾಗಿತ್ತು..."

"ನಾನು ತೋಟಕ್ಕೆ ಹೋಗ್ಬರ್ತೀನಿ..ನೀನು ರೆಸ್ಟ್ ತಗೋ...ಫೋನು ರಿಂಗಾದ್ರೆ ಅಮ್ಮ ತಗೋತಾಳೆ. ನೀನು ಆಯಾಸ ಮಾಡ್ಕೋಬೇಡ..ಯಾರ ಹತ್ರವೂ ಮಾತನ್ನು ಆಡ್ಬೇಡ.."

"ಅಮ್ಮ ವೈದೇಹಿ ಅತ್ತೆ ಮನೆಗೆ ಹೋಗಿದಾರೆ.."

"ಹೌದಾ! ನಂಗೆ ಅಲ್ಲಿ ಸಿಗ್ಲಿಲ್ವಲ್ಲಾ..." ಅಚ್ಚರಿಯಿಂದ ಕೇಳಿದ.

"ಅಂದ್ರೇ.. ನೀವು ಅತ್ತೇ ಮನೆಗೆ ಹೋಗಿದ್ರಾ? ಶ್ವೇತನ ಮಗೂನ ನೋಡಿದ್ರಾ?.."

"ಇಲ್ಲ, ಅವಳಿಗೆ ಬುದ್ಧಿ ಹೇಳೋಕೆ ಹೋಗಿದ್ದೆ, ಮಗೂನ ನೋಡ್ಲಿಲ್ಲ..ಇನ್ಮುಂದೆ ಅವಳ ಹತ್ರ ಹೆಚ್ಗೆ ಮಾತಾಡ್ಬೇಡ.. ಅವಳಿಂದ ನಮಗೆ ಏನಾಗ್ಬೇಕಾಗಿದೆ?"

"ನನ್ನ ಸ್ನೇಹಿತೆ ನನ್ನ ಜೊತೆಗಿದ್ರೆ, ನನ್ನ ಬೇಸರ ಕಳೆಯುತ್ತೆ ಅಂತ ಬಹಳ ಆಡ್ತಿದ್ರಿ.. ಈಗೇನಾಯ್ತು?..ಈಗೇನು ಹೇಳಿದ್ಲು ಅವಳು?"

"ನಿನ್ನ ಮಾತು ನಿಜ. ಅವಳ ಸ್ವಭಾವವೇ ವಿಚಿತ್ರ.. ಚಿದಾನಂದ ಅವಳ ಬಲೆಗೆ ಬೀಳ್ದೆ ಇದ್ದಿದ್ರೆ.. ಅವಳು ಇಲ್ಲಿಗೆ ಬರೋ ಮಾತೇ ಇರ್ಲಿಲ್ಲ, ಅದು ಬಿಡು.. ವಾಣೀನ ಇಲ್ಲೇ ಕೂತ್ಕೊಂಡು ಓದು ಅಂತ ಹೇಳ್ತೀನಿ. ನಾನು ಬರ್ಲಾ ಚಿನ್ನಾ.." ಎಂದು ಹೇಳಿ ಅವಳ ಕೆನ್ನೆಯನ್ನು ಸವರಿ, ರಸ್ತೆಗೆ ಇಳಿದ. ಅವನು ಅತ್ತ ಹೊರಟು ಹೋದ ಸ್ವಲ್ಪ ಹೊತ್ತಿನ ನಂತರ ಮತ್ತೆ ಫೋನು

ರಿಂಗಾಗಿತ್ತು. ವಾಣಿ ಎತ್ತಿಕೊಂಡಳು.

"ಅಣ್ಣ ತೋಟಕ್ಕೆ ಹೋಗಿದಾನೆ.. ಅತ್ತಿಗೆ ಹುಶಾರಾಗಿದಾರೆ.." ಎಂದು ಅವಳು ಹೇಳಿದ್ದು ಕೇಳಿಸಿತ್ತು. ಪಲ್ಲವಿ ಯಾರದ್ದೆಂದು ವಿಚಾರಿಸಲಿಲ್ಲ. ನಿದ್ದೆ ಬಂದವಳಂತೆ ನಟಿಸಿದಳು. ಇದ್ದಕ್ಕಿದ್ದಂತೆ ಕಿಬ್ಬೊಟ್ಟೆಯೊಳಗೆ ಯಾರೋ ಎಳೆದಂತೆ ನೋವಾಗಿತ್ತು. ಹೆದರಿಕೆಯಿಂದ 'ಅಮ್ಮಾ' ಅಂತ ಜೋರಾಗಿ ಕಿರುಚಿದಳು. ವಾಣಿ ಓಡಿ ಬಂದಿದ್ದಳು. "ವಾಣಿ ಹೋಗು, ಅಮ್ಮನ್ನ ಈಗ್ಲೇ ಬರ್ಬೇಕಂತೆ ಅಂತ ಕರ್ಕೊಂಡು ಬಾ" ಎಂದು ಮುಖವನ್ನು ಕಿವುಚುತ್ತಾ ಹೇಳಿದಳು. ವಾಣಿ ಓಡಿದ್ದಳು. ಅಜ್ಜಿ ಕುಳಿತಲ್ಲಿಂದಲೇ, "ಯಾರೇ ಅದು ಕಿರುಚಿದ್ದು.. ಏನಾಯ್ತು?" ಎಂದು ಕೇಳಿದ್ದು ಪಲ್ಲವಿಗೆ ಕೇಳಿಸಲಿಲ್ಲ. ವಾಣಿ ತಾಯಿಯನ್ನು ಕರೆತಂದಿದ್ದಳು. ಅವಳೊಂದಿಗೆ ಮಂದಾಕಿನಿಯೂ ಇದ್ದಳು.

"ಭುಜಂಗ ಎಲ್ಹೋದ?.. ಯಾರನ್ನ ಕಳಿಸ್ಲಿ?.. ವಾಣಿ ಹೋಗ್ತೀಯೇನೇ?"

"ಇಲ್ಲಮ್ಮ ನಂಗೆ ಓದೋದು ತುಂಬಾ ಇದೆ.. ಫೋನು ಮಾಡು ಬರ್ತಾನೆ.."

"ಫೋನನ್ನು ಮನೇಲೇ ಬಿಟ್ಟು ಹೋಗಿದಾನಲ್ಲ...ನಿಮ್ಮಪ್ಪನೂ ಊರಲ್ಲಿಲ್ಲ.."

"ಏನಾಯ್ತು! ಎಲ್ರೂ ಯಾಕೆ ಹೀಗೆ ಗಾಬರಿಯಾಗಿದೀರಿ?" ಅಜ್ಜಿ ಕುಳಿತಲ್ಲಿಂದಲೇ ಕೇಳಿತು. ಯಾರೂ ಉತ್ತರಿಸುವ ಗೋಜಿಗೇ ಹೋಗಲಿಲ್ಲ.

"ನಾನು ಹೋಗಿ ಕರ್ಕೊಂಡ್ಬರ್ತೀನಿ.." ಮಂದಾಕಿನಿ ಹೊರಟಳು.

"ನಿಂಗೆ ರಸ್ತೆ ಗೊತ್ತಾಗುಲ್ಲ, ಬೇಡ ಬಿಡು.." ಸಾವಿತ್ರಿ ಎಂದಳು.

"ಗೊತ್ತಾಗ್ದೇ ಇದ್ರೆ ಕೇಳ್ತೀನಿ.." ಎಂದು ಹೇಳಿ ಮಂದಾಕಿನಿ ಹೊರಟೇ ಬಿಟ್ಟಳು. ಕೆಲವೇ ನಿಮಿಷಗಳಲ್ಲಿ ಚಿದಾನಂದ ಬಂದಿದ್ದ, ವೈದೇಹಿಯೂ ಬಂದಳು. ಮತ್ತೆ ಅಜ್ಜಿ ಮಾತನಾಡಿತು.

"ಏನದು ಅಂತ ಕೇಳಿದ್ರೂ ಯಾರೂ ಹೇಳುಲ್ವಲ್ಲಾ.. ನನ್ನ ಮಾತಿಗೆ ಬೆಲೆ ಇಲ್ವಾ?"

"ಏನಿಲ್ಲ ಅತ್ತೇ...ಪಲ್ಲವಿಗೆ ಹೆರಿಗೆ ನೋವು ಶುರುವಾಗಿದೆ. ಮನೇಲಿ ಯಾವ ಗಂಡಸರೂ ಇಲ್ಲ, ನಿಮ್ಮ ಮಗ ಪಕ್ಕದೂರಿಗೆ ಹೋಗಿದಾರೆ. ಭುಜಂಗ ತೋಟಕ್ಕೆ ಹೋಗಿದಾನೆ.."

"ಅಷ್ಟೇ ತಾನೇ? ಕೃಷ್ಣ ಯಾವಾಗ ಹೋದ?.. ದೇವರ ಮುಂದೆ ತುಪ್ಪದ ದೀಪವನ್ನು ಹಚ್ಚಿಡು.. ಹೆರಿಗೆ ಸುಗಮವಾಗಿ ಆಗುತ್ತೆ...ದಿನ ತುಂಬಿದೆ ತಾನೇ?"..ನಿರಾಳವಾಗಿ ಹೇಳಿತು.

'ಹೂಂ' ಎಂದು ಹೇಳಿ ಪಲ್ಲವಿಯ ಬಳಿ ಕುಳಿತಳು. ಚಿದಾನಂದ ಭುಜಂಗನನ್ನು ಕರೆತರಲು ಹೊರಟ. ಆಳುಗಳೊಡನೆ ಮಾತಾನಾಡುತ್ತಾ ನಿಂತಿದ್ದ ಭುಜಂಗ ಮಂದಾಕಿನಿಯನ್ನು ಕಂಡು, ಅವಳ ಬಳಿಗೆ ಧಾವಿಸಿದ.

"ಚೈತ್ರಂಗೆ ಹುಶಾರಿಲ್ಲ, ಹೇಳೋಕೆ ಅಂತ ಬಂದೆ. ಚಿದಾನಂದನೂ ಮನೇಲಿಲ್ಲ."

"ನೀವ್ಯಾಕೆ ಬರೋಕೆ ಹೋದ್ರಿ ಅತ್ತೆ...ಬೀದೀಲಿ ಹೋಗೋರ ಹತ್ರ ಹೇಳಿ ಕಳಿಸಿದ್ರೂ ಆಗ್ತಿತ್ತು.. ವಾಣಿ ಬರಬಹುದಾಗಿತ್ತು.. ನಡೀರಿ..." ಅವಸರದಿಂದ ಹೆಜ್ಜೆ ಹಾಕಿದ.

"ಅವಳು ಓದ್ಕೋತಿದ್ಲು, ಗಾಬರೀಲಿ ಗೊತ್ತಾಗ್ಲಿಲ್ಲ.. ಬರ್ತೀಯಾ? ನಾನು ಹೋಗ್ತೀನಿ.."

"ನಾನೂ ಬಂದೆ.." ಎನ್ನುತ್ತಾ ಬೈಕ್‌ನ ಸ್ಟಾರ್ಟ್ ಮಾಡಿದ. ಮಂದಾಕಿನಿ ಹಿಂದಿನ ಸೀಟನ್ನೇರಿದಳು. ಬೈಕ್ ಓಡಿತು. ದಾರಿಯಲ್ಲಿ ಚಿದಾನಂದ ಸಿಕ್ಕಿದ.

"ನಾನು ಅಮ್ಮನ್ನ ಮನೆಗೆ ಕರ್‍ಕೊಂಡು ಹೋಗ್ತೀನಿ.. ನೀವು ಟ್ಯಾಕ್ಸಿ ತನ್ನಿ" ಎಂದು ಹೇಳಿ ಭುಜಂಗನನ್ನು ಅತ್ತ ಕಳಿಸಿದ. ತಾಯಿ ಮಗ ಮನೆಯ ದಾರಿಯನ್ನು ಹಿಡಿದರು. ಬೇಗ ಹಿಂತಿರುಗಿದ್ದರು. ಪಲ್ಲವಿ ಹೆದರಿಬಿಟ್ಟಿದ್ದಳು, ಇವರು ಸಿಕ್ಕಿದ್ರಾ? ಮಂದಾಕಿನಿಯನ್ನು ಕಂಡೊಡನೆ ಕೇಳಿದಳು.

"ಹೂಂ, ಟ್ಯಾಕ್ಸಿ ತರೋಕೆ ಹೋಗಿದಾನೆ..." ಹತ್ತು ನಿಮಿಷಗಳಲ್ಲಿ ಮನೆಯ ಮುಂದೆ ಟ್ಯಾಕ್ಸಿ ಬಂದು ನಿಂತಿತು. ಮಂದಾಕಿನಿ ಪಲ್ಲವಿಯೊಡನೆ ಹೊರಡಲು ಸಿದ್ಧಳಾದಳು.

"ಅತ್ತಿಗೇ ನೀವು ಮನೇಲಿರಿ. ಅಣ್ಣನೂ ಇಲ್ಲ, ವಾಣೀನ, ಅಜ್ಜೀನ ಇಬ್ಬರನ್ನೇ ಬಿಟ್ಟು ಬರೋದು ಬೇಡ.." ಸಾವಿತ್ರಿಗೆ ಅದು ಸರಿ ಎನಿಸಿತ್ತು. ಚಿದಾನಂದ ಶ್ವೇತಂಗೆ ಹೇಳಿ ಬಂದ.

"ನಾನೂ ಅವರ ಜೊತೇಲಿ ಹೋಗ್ತೀನಿ. ನನ್ನ ಸಹಾಯ ಬೇಕಾಗಬಹುದು" ಎಂದಿದ್ದ. ಶ್ವೇತಾ ಮನದಲ್ಲೇ ನಕ್ಕೊಂಡಳು. ಇನ್ನು ಕೆಲವೇ ಗಂಟೆಗಳಲ್ಲಿ ತನ್ನ ಹಾಗೂ ಭುಜಂಗನ ಅಂಶಗಳಿಂದ ಸೃಷ್ಟಿಗೊಂಡ ಮಗು ಪ್ರಪಂಚಕ್ಕೇ ಹೊರಬರುತ್ತದೆ...ಇವನಿಗೆ ತಮ್ಮನೋ..ತಂಗಿಯೋ...ಯಾರಾದರೇನು?.. ಆ ಮಗುವಿಗೆ ನಾನೇ ತಾಯಿ ಪಲ್ಲವಿ 'ಬಾಡಿಗೆ ತಾಯಿ..' ಭುಜಂಗ ಹೆಮ್ಮೆಯ ತಂದೆ. ಅವನಿಗೆ ಈ ಮಗುವಿನ ಮೇಲೆ ವಾತ್ಸಲ್ಯವೇ ಇಲ್ಲ ಕಟುಕನಂತೆ ಮಾತಾಡಿದ. ಅವಳ ಮಗುವನ್ನ ದ್ವೇಷಿಸುತ್ತಾನೆಯೆ? ನನ್ನ ವರದಾನದಿಂದ ಪಲ್ಲವಿ ತಾಯಿಯಾಗುತ್ತಿದಾಳೆ. ಇಲ್ಲದಿದ್ದರೆ ಅವಳಿಗೆ ಆ ಯೋಗ ಎಲ್ಲಿತ್ತು? ಮಂದಾಕಿನಿಯನ್ನು 'ಬಾಡಿಗೆ ತಾಯಿ'ಯೆಂದು ತಿರಸ್ಕಾರದಿಂದ ಕಾಣುತ್ತಾಳೆ ಇವಳಿನ್ನೇನು?.. ನನ್ನ ಮಗುವಿಗೆ 'ಬಾಡಿಗೆ ತಾಯಿ..' ಆದರೆ ಈ ವಿಷಯ ಬಹಿರಂಗವಾದರೆ ಕೋಲಾಹಲವಾಗುತ್ತೆ. ಎಲ್ಲರೂ ನನ್ನನ್ನು ದ್ವೇಷಿಸ್ತಾರೆ. ದೂರ ಮಾಡ್ತಾರೆ.. ಶಿಕ್ಷೆ ನನಗೆ.. ಭುಜಂಗನ ಕಣ್ಣೆದುರಿನಲ್ಲಿ ನಾನು ಇರಬೇಕು. ನನ್ನ ಮಗು ಬೆಳೆಯಬೇಕು.. ನಾನು ನನ್ನ ಇನ್ನೊಂದು ಮಗುವನ್ನು ಪ್ರತಿ ನಿತ್ಯ ನೋಡ್ಬೇಕು.. ಬಾಯಿ ಮುಚ್ಚಿಕೊಂಡಿದ್ದರೆ ಭುಜಂಗ ನನ್ನ ತಂಟೆಗೆ ಬರುವುದಿಲ್ಲ, ಕ್ರಮೇಣ ಅವನು ಈ ಮಗುವನ್ನು ಪ್ರೀತಿಸಬಹುದು.. ಆದರೆ ನನ್ನ ಮೇಲಿನ ಸಿಟ್ಟಿಗೆ ಪಲ್ಲವಿಯ ಮಗುವನ್ನು ದ್ವೇಷಿಸಿದರೆ..? ಹಾಗೆ ಮಾಡಲಾರ.. ಅವನು ಪಲ್ಲವಿಯನ್ನು ಅತಿಯಾಗಿ ಪ್ರೀತಿಸ್ತಾನೆ. ಅವಳಿಗೆ ನೋವಾಗದಿರಲಿ ಅಂತ ಆ ಮಗುವನ್ನು ಅಕ್ಕರೆಯಿಂದ ನೋಡಿಕೊಳ್ತಾನೆ..ಸ್ವಾರ್ಥಿ.. ಎಂದು ಮನದಲ್ಲೇ ಬೈದುಕೊಂಡಳು.

ಹೇಮಾ ಮತ್ತೆಂದೂ ಬರುವುದೇ ಇಲ್ಲವೇನೋ!..ಚಿದಾನಂದ ಫೋನು ಮಾಡಿ ವಿಷಯ ತಿಳಿಸಿದೆ ಅಂತಂದ. ಆದರೆ ಅವಳೇಕೋ ಫೋನು ಮಾಡಿಲ್ಲ, ಭುಜಂಗ ಅವಳ ಹತ್ರ ಮಾತಾಡಿ, ಅವಳನ್ನು ಬೈದಿರಬಹುದೇ.. ಹಾಗೇನಾದ್ರೂ ಆಗಿದ್ರೆ, ಅವಳು ನನ್ನನ್ನು ಬೈಯದೇ ಬಿಡುವುದಿಲ್ಲ, ಯಾರಿಗೂ ತಿಳಿಯುವುದು ಬೇಡ ಅಂತ ಹೇಳಿದ್ಲು, ಆದರೆ ನಾನೆಂಥವಳು? ಭುಜಂಗನಿಗೆ ಹೇಳಲೇಬೇಕು ಎಂಬ ಚಪಲ ಹುಟ್ಟಿತು. ಆದರೆ? ಅವನ ಮುಖದ ಮೇಲೆ ವಿಲಕ್ಷಣವಾದ ಕಳೆ ಎದ್ದಿತು. ನನ್ನ ಮಾತನ್ನು ನಂಬಲಿಲ್ಲ, ಸುಳ್ಳೆಂದು ವಾದಿಸಿದ. ಈ ಕತೆಯನ್ನು ಪಲ್ಲವಿಗೆ

ತಿಳಿಸಬೇಡ ಅಂತಂದ. ಪಲ್ಲವಿಯ ಅಟ್ಟಹಾಸ ತಗ್ಗಿದೆ. ಹಾಗೇ ಆಗ್ಬೇಕು ಅವಳಿಗೆ. ಬಾಡಿಗೆ ತಾಯಿ! ತೊಟ್ಟಿಲಲ್ಲಿ ಮಲಗಿದ್ದ ಮಗು ಚೀರಿ ಅಳಲಾರಂಭಿಸಿದಾಗ ಇತ್ತ ಗಮನ ಹರಿಸಿದಳು. ಮಗುವನ್ನು ಮುದ್ದಿಸಿ ಹಾಲೂಡಿಸಿದಳು. ಎಷ್ಟು ಹೊತ್ತಾದರೂ, ಯಾವ ವರ್ತಮಾನವೂ ತಿಳಿಯದಿದ್ದಾಗ ಭುಜಂಗನ ಮನೆಗೆ ಫೋನು ಮಾಡಿದಳು. "ಆಂಟಿ ನಾನು ಶ್ವೇತಾ, ಆಸ್ಪತ್ರೆಯಿಂದ ಏನಾದ್ರೂ ಫೋನು ಬಂದಿತ್ತಾ? ಅವರೆಲ್ಲಾ ಹೋಗಿ ತುಂಬಾ ಹೊತ್ತಾಯಿತಲ್ಲಾ?" ಎಂದು ಕೇಳಿದಳು.

"ಹುಂ, ಪಲ್ಲವೀನ ಆಪರೇಷನ್ ಥಿಯೇಟರ್‌ಗೆ ಕರೆದೊಯ್ದಿದ್ದಾರಂತೆ.. ಈಗ ಸ್ವಲ್ಪ ಹೊತ್ನಲ್ಲಿ ಫೋನು ಬಂದಿತ್ತು" ಎಂದಳು.

"ಯಾಕೆ ಆಂಟಿ ಏನಾದ್ರೂ ಕಾಂಪ್ಲಿಕೇಷನ್ನಾ? ಸರಿಯಾಗೇ ಇದ್ದಲ್ಲಾ"

"ಏನೋ ಸರಿಯಾಗಿ ಗೊತ್ತಿಲ್ಲ, ಡಾಕ್ಟರಿಗೆ ಗೊತ್ತಾಗುತ್ತೆ. ನಮಗೇನು ತಿಳಿಯುತ್ತೆ. ದೇವರಿದಾನೆ. ನೋಡ್ಕೋತಾನೆ.."

"ಪಾಪ, ಮೊದಲೇ ಪಲ್ಲವಿಗೆ ಬಹಳ ಬೇಸರಗಳು.." ರಾಗ ಎಳೆದಳು.

"ಏನೂ ಬೇಸರವಿರಲಿಲ್ಲ, ಹಾಯಾಗಿದ್ಲು.. ಭುಜಂಗ ಅವಳನ್ನು ಬಹಳ ಚೆನ್ನಾಗಿಯೇ ನೋಡ್ಕೊಂಡಿದಾನೆ. ನಾವುಗಳೂ ಅಷ್ಟೇ. ಏನೂ ಕಡಿಮೆ ಮಾಡಿಲ್ಲ.."

"ಹೌದು, ಆಂಟೀ.. ಎಲ್ರಿಗೂ ಈ ಅದೃಷ್ಟವಿರಬೇಕಲ್ಲ.."

"ಹೌದು, ಎಲ್ರೂ ಒಂದೇ ತರಹ ಇರೋಕೆ ಸಾಧ್ಯಾನಾ? ನೀನು ರೆಸ್ಟ್ ತಗೋ ಹಸೀ ಬಾಣಂತಿ.. ಆಯಾಸ ಮಾಡ್ಕೋಬೇಡ" ಎಂದು ಹೇಳಿ ಮಾತನ್ನು ತುಂಡರಿಸಿದಳು. ಅಷ್ಟರಲ್ಲಿ ವೈದೇಹಿ ಕಾಫಿಯ ಲೋಟವನ್ನು ಹಿಡಿದು ಬಂದಳು.

"ಸುಮ್ನೇ ಮಾತಾಡಿ ಬಾಯನ್ನ ಒಣಗಿಸ್ಕೊಳ್ತೀಯ. ಕುಡೀ ಕಾಫೀನ, ಯಾರ ಹತ್ತಿರ ಮಾತಾಡ್ತಿದ್ದೆ?.. ಚಿದಾನಂದನಾ?.. ಇನ್ನಾದ್ರೂ ಅನ್ಯೋನ್ಯತೆ ಬೇಡ್ವಾ?.. ಜಗಳ ಆಡ್ತಿದ್ಯಾ?"

"ಇಲ್ಲ ಆಂಟಿ. ಭುಜಂಗನ ತಾಯಿ ಹತ್ರ..ಪಲ್ಲವಿಗೆ ಹೆರಿಗೆ ಆಯ್ತಾ ಅಂತ ಕೇಳ್ದೆ.."

"ಅದನ್ನು ಕೇಳೋದೇನು! ಆಗ್ತಿದ್ದ ಹಾಗೇ ಭುಜಂಗ ಎಲ್ರಿಗೂ ಸಂಭ್ರಮದಿಂದ ತಿಳಿಸ್ತಾನೆ.. ಅವತ್ನಿಂದ ಕುಣೀತಿದಾನೆ.. ಒಂಭತ್ತು ತಿಂಗಳು ತುಂಬಿದ್ಮೇಲೆ ಹೆರಿಗೆ ಆಗ್ಲೇ ಬೇಕು.."

"ಆಂಟೀ...ನಿಮಗೆ ಬೇಸರ ಅಲ್ವಾ!..ಪಲ್ಲವಿ ಬದ್ಲು ಹೇಮಾ ಹೆರುವಂತಿದ್ದರೇ ಅಂತ ಈಗ್ಲೂ ನಿಮ್ಮ ಮನಸ್ನಲ್ಲಿ ಓಡ್ತಿದೆ ಅಲ್ವಾ?.. ಹೇಮಾ ಬಹಳ ತಪ್ಪು ಮಾಡಿಬಿಟ್ಲು.."

"ನನ್ನ ಮನಸ್ನಲ್ಲಿ ಏನು ಓಡಿದ್ರೆ ಏನು?..ಮೊಮ್ಮಕ್ಕಳನ್ನು ಎತ್ತಿ ಆಡಿಸುವ ಭಾಗ್ಯ ಈ ಕೈಗಳಿಗೆ ಇದೆಯೋ ಇಲ್ವೋ.." ದಪ್ಪ ದನಿಯಲ್ಲಿ ಹೇಳಿದಳು. ಅಷ್ಟರಲ್ಲಿ ಫೋನು ರಿಂಗಾಗಿತ್ತು. ಚಿದಾನಂದ ಆಸ್ಪತ್ರೆಯಿಂದ ಮಾತಾಡಿದ್ದ, ಶ್ವೇತಾ ಎತ್ತಿಕೊಂಡಳು.

"ಚೈತ್ರಂಗೆ ಆಪರೇಷನ್ ಆಯ್ತು. ಗಂಡು ಮಗು. ಮಗು ತುಂಬಾ ಮುದ್ದಾಗಿದೆ. ನಮ್ಮ

ಮಗುವಿನ ಥರಾನೇ ಕಾಣ್ತಿದೆ.. ಚೈತ್ರಂಗೆ ಇನ್ನೂ ಜ್ಞಾನ ಬಂದಿಲ್ಲ

"ಭುಜಂಗ ಏನಂದ್ರು? ಅವರಿಗೆ ನನ್ನ ಕಂಗ್ರಾಟ್ಸ್ ತಿಳಿಸಿ" ಮಾತನ್ನು ಮುಗಿಸಿದಳು. ಇತ್ತ ತಿರುಗಿದಳು. "ಪಲ್ಲವಿಗೂ ಗಂಡು ಮಗುವಂತೆ...ನಂಗೆ ಮೊದ್ಲೇ ಗೊತ್ತಿತ್ತು.." ಉದಾಸೀನವಾಗಿ ನುಡಿದಳು..ಭುಜಂಗನಿಗೆ ಒಂದು ಗಂಡುವಿದೆ. ಇನ್ನೊಂದು ಹೆಣ್ಣಾಗಿದ್ದರೆ..? ಅಂತೆನ್ನಿಸಿತ್ತು.

"ಯಾಕೇ...ನಿಂಗ್ಯಾಕೆ ಬೇಸರ? ಎಲ್ರೂ ಬಯಸೋದು ಗಂಡು ಮಗುವನ್ನೇ.. ನಮ್ಮ ಹೇಮಾ ಗಂಡಾಗಿ ಹುಟ್ಟಿದ್ದಿದ್ರೆ, ನನ್ನ ಗ್ರಹಗತಿಯೇ ಬೇರೆಯಾಗಿರ್ತಿತ್ತು.. ಭುಜಂಗನ್ನ ಮನೆ ಅಳಿಯನನ್ನಾಗಿ ಮಾಡ್ಕೊಳ್ಳುವ ಆಲೋಚನೆ ಇರ್ತಿರಲಿಲ್ಲ, ಗದ್ದೆ ತೋಟ ಅವನದ್ದೇ ಆಗಿರ್ತಿತ್ತು. ಮದುವೆ ಮಾಡಿದ್ದರೆ, ಒಂದೋ ಎರಡೋ ಮೊಮ್ಮಕ್ಕಳು ಇರ್ತಿದ್ವು.. ಎಲ್ಲಾ ಸರಿಯಾಗಿರ್ತಿತ್ತು.."

"ನೀವೊಂದು ಗಂಡು ಮಗುವನ್ನು ದತ್ತು ತಗೊಂಡಿದ್ದರೆ ಚೆನ್ನಾಗಿತ್ತು.."

"ನಿನ್ನ ಮಗನನ್ನೇ ಕೊಟ್ಬಿಡು. ಸಾಕಿಕೊಳ್ತೀನಿ.." ತಮಾಷೆ ಎಂಬಂತೆ ಕೇಳಿದಳು.

"ಇಲ್ಲಪ್ಪಾ ಆಸೆ ಪಟ್ಟು ಈ ಮಗುವನ್ನು ಹೆತ್ತಿದೀನಿ.. ಯಾರಿಗೂ ಕೊಡುಲ್ಲ."

"ಏನು ಹುಡುಗೀರೋ..? ಈ ಕಾಲ್ದೋರಿಗೆ ಮದುವೆ ಅಂದರೆ ಲಜ್ಜೆ ಇಲ್ಲ ಬಸಿರಿಯಾದ್ರೂ ನಾಚ್ಕೆ ಇಲ್ಲ...ಸಂಕೋಚವಿಲ್ದೇ ಏನು ಬೇಕಾದ್ರೂ ಆಡಿ ಬಿಡ್ತೀರಿ.. ಅದಕ್ಕೇ ಏನೋ ಚಿದಾನಂದ ಹತ್ತಿರಕ್ಕೆ ಬಂದಾಗ್ಲೂ ತೆಪ್ಪಗಿದ್ದದ್ದು.. ಗುಟ್ಟಾಗಿ ಹತ್ತಿರಕ್ಕೆ ಸೇರಿಸ್ಕೊಂಡಿದ್ದು.."

"ಹೀಗಾಗುತ್ತೆ ಅಂತ ಖಂಡಿತಾ ಗೊತ್ತಿರ್ಲಿಲ್ಲ ಆಂಟಿ.. ಏನೋ ಆಯ್ತು ಬಿಡಿ.."

"ಆಹಾಹಾ...ಮಳ್ಳಿ ಹಾಗೆ ಮಾತಾಡ್ಬೇಡ.. ಅವನು ಗಂಡಸು.. ನೀನು ಹೆಣ್ಣು ಇನ್ನೇನಾಗುತ್ತೆ ಹತ್ತಿರಕ್ಕೆ ಸೇರ್ಸಿದ್ರೆ.. ಹೊಟ್ಟೆ ಮುಂದೆ ಬರೋದು ಹೆಣ್ಣಿಗೇ.. ತಿಳ್ಕೋ.."

"ಇಲ್ಲ ಆಂಟಿ.. ಈ ಕಾಲದಲ್ಲಿ ಹೊಸ ಹೊಸ ಪ್ರಯೋಗಗಳು ಬಂದಿವೆ. ಯಾರು ಒಬ್ಬರ ಹತ್ರ ಒಬ್ಬರು ಹೋಗಲೇ ಬೇಕಿಲ್ಲ, ಮಕ್ಕಳನ್ನು ಹುಟ್ಟಿಸಬಹುದು. ಹಾಗೆ ಸಾಧ್ಯ.."

"ಹಾಗಂತ ನಿಂಗ್ಯಾರು ಹೇಳಿದ್ರು? ಏನು ಕುಂತೀ ತರಹ ವರ ಪಡೆದಿರ್ತಾರಾ?"

"ನಿಮ್ಮ ಹೇಮಾನೇ ಹೇಳಿದ್ದು ಬೇಕಾದ್ರೆ ಈ ಸಾರಿ ಬಂದಾಗ ಕೇಳಿ..."

"ಅದನ್ನೆಲ್ಲ ನಾನು ಕೇಳೋದೂ ಇಲ್ಲ...ಅವಳು ಹೇಳೋದೂ ಬೇಡ...ಇವೆಲ್ಲಾ ಪ್ರಕೃತಿ ನಿಯಮಕ್ಕೆ ವಿರುದ್ಧವಾದ ಕೆಲಸ...ಎಲ್ಲಾ ಸುಳ್ಳು...ನಿನ್ನ ಹತ್ರ ಮಾತಿಗೆ ಕೂತ್ರೆ ತಲೇನೇ ಕೆಡಿಸಿ ಬಿಡ್ತೀಯ...ನಾನು ಸಾವಿತ್ರೀನ ಮಾತಾಡ್ಸಿಕೊಂಡು ಬರ್ತೀನಿ. ಸುಮ್ನೇ ಮಲಕ್ಕೋ" ಎಂದು ಹೇಳಿ, ಬಾಗಿಲನ್ನು ಮುಂದಕ್ಕೆಳೆದುಕೊಂಡು ಹೊರ ನಡೆದಳು.

ಪಲ್ಲವಿಯನ್ನು ಸ್ಪೆಷಲ್ ವಾರ್ಡಿಗೆ ಕರೆತಂದು ಮಲಗಿಸಿದರು. ಅವಳಿಗೆ ಚೆನ್ನಾಗಿ ಜ್ಞಾನ ಬರುವವರೆಗೂ ಭುಜಂಗ ಅಲ್ಲಿಯೇ ಕುಳಿತಿದ್ದ. ನರ್ಸು ಎತ್ತಿಕೊಂಡು ಬಂದು ತೋರಿಸಿದ ಮಗುವನ್ನು ಸುಮ್ಮನೆ ಎಂಬಂತೆ ನೋಡಿದ್ದ. ಈ ಮಗು ನಮ್ಮಿಬ್ಬರದ್ದಲ್ಲ ಎಂಬ ಭಾವನೆ ಇದ್ದೇ ಇತ್ತು. ಮಗು ಹುಟ್ಟಿದ್ದಾಗಿದೆ. ಪಲ್ಲವಿ ಈ ಮಗುವಿಗಾಗಿ ಕಷ್ಟಪಟ್ಟಿದ್ದಾಳೆ. ಅವಳಿಗೋಸ್ಕರ ನಾನು

ನನ್ನ ಭಾವನೆಗಳನ್ನು ಅದುಮಿಟ್ಟುಕೊಳ್ಳಬೇಕು ಅಂತಂದುಕೊಂಡ. ಹೇಮಾ ಅವನ ಮೊಬೈಲ್‌ಗೆ ಫೋನು ಮಾಡಿದ್ದಳು. ಇವನು ಮಾತಾಡಲಿಲ್ಲ, ಸ್ವಿಚ್ ಆಫ್ ಮಾಡಿ ಸುಮ್ಮನೇ ಕುಳಿತಿದ್ದ. ಆಲೋಚನೆಗಳ ಕಡಲಲ್ಲಿ ಮುಳುಗಿ ಬಿಟ್ಟಿದ್ದ.

"ಬನ್ನಿ ಭುಜಂಗ್ ಕಾಫಿನಾದ್ರೂ ಕುಡಿದು ಬರೋಣ. ಎಷ್ಟು ಹೊತ್ತಿಂದ ಹಾಗೇ ಕುಳಿತಿದೀರಲ್ಲ.." ಚಿದಾನಂದ ಕರೆದ. ನರ್ಸಿಗೆ ಹೇಳಿ ಇಬ್ಬರೂ ಕ್ಯಾಂಟೀನಿನ ಕಡೆಗೆ ನಡೆದರು. ಕಾಫಿ ಕುಡಿದಾದ ಮೇಲೆ ನರಗಳ ಬಿಗಿತ ಕಡಿಮೆ ಆಗಿತ್ತು. ಮಾತಾಡಿದ.

"ನೀವು ಮನೆಗೆ ಹೋಗೋದಾದ್ರೆ ಹೋಗಿ ಚಿದಾನಂದ್.. ನಾನು ಇಲ್ಲಿ ಇರ್ತೀನಲ್ಲ.."

"ನೋಡೋಣ. ಚೈತ್ರಂಗೆ ಜ್ಞಾನ ಚೆನ್ನಾಗಿ ಬರಲಿ. ಅಮ್ಮನ್ನ ಇಲ್ಲಿಯೇ ಬಿಟ್ಟು ಇಬ್ಬರೂ ಹೋಗೋಣ.." ಅವರಿಬ್ಬರೂ ವಾಪಸ್ಸು ಬರುವಷ್ಟರಲ್ಲಿ ಚೈತ್ರಾ ಎಚ್ಚರಗೊಂಡಿದ್ದಳು. ಭುಜಂಗನ ಕಡೆ ನೋಡಿ ಕ್ಷೀಣವಾಗಿ ನಕ್ಕಳು.

"ಮಗೂನ ನೋಡಿದ್ರಾ?.." ಮೆಲುವಾಗಿ ಕೇಳಿದಳು.

'ಹೂಂ' ಎಂದಷ್ಟೇ ಹೇಳಿದ. "ಕಂಗ್ರಾಟ್ಸ್ ಪಲ್ಲವೀ.. ಹೇಮಂಗೆ ಫೋನು ಮಾಡಿದ್ದೆ ಅವಳು ಕಂಗ್ರಾಟ್ಸ್ ಹೇಳಿದಾಳೆ" ಎಂದು ಚಿದಾನಂದ ನುಡಿದಾಗ, ಭುಜಂಗ ಅವನನ್ನೇ ಅಸಹನೆಯಿಂದ ನೋಡಿದ. ಹೇಮಂಗೆ ತಿಳಿಸದಿದ್ರೆ ನಷ್ಟವೇನೂ ಇರಲಿಲ್ಲ ಅಂತೆನಿಸಿತ್ತು.

"ಯಾಕೆ ಒಂಥರಾ ಇದೀರಿ. ಹುಶಾರಾಗಿದೀರಿ ತಾನೇ?" ಗಂಡನನ್ನು ಕೇಳಿದಳು.

"ಹುಂ, ನಾನು ಸರಿಯಾಗಿದೀನಿ. ನೀನು ಆಯಾಸ ಮಾಡ್ಕೋಬೇಡ.. ನಾನು ಸ್ವಲ್ಪ ಡಾಕ್ಟರ ಹತ್ರ ಮಾತಾಡ್ಕೊಂಡು ಬರ್ತೀನಿ" ಎಂದು ಹೇಳಿ ಚಿದಾನಂದನೊಡನೆ ಹೊರ ನಡೆದ. ಗಂಡನಿಗೆ ಯಾಕೋ ಮನಸ್ಸು ಮುದುಡಿದೆ, ಉಲ್ಲಾಸವಿಲ್ಲ. ಮಗು ಎಲ್ಲಾ ರೀತಿಯಿಂದಲೂ ಆರೋಗ್ಯವಾಗಿದೆ ಎಂದು ಡಾಕ್ಟರು ಹೇಳಿದರಲ್ಲ, ಅಂತಂದುಕೊಂಡಳು. ನರ್ಸು ಒಳ ಬಂದು ಮತ್ತೊಂದು ಇಂಜೆಕ್ಷನ್ ಕೊಟ್ಟಳು. ಪಲ್ಲವಿ ಹಾಗೇ ಕಣ್ಣು ಮುಚ್ಚಿ ಮಲಗಿದಳು. ಮಂದಾಕಿನಿ ಒಳಗೆ ಬಂದು ಕುಳಿತಳು. ಇವಳು ನಿದ್ದೆಯನ್ನು ನಟಿಸಿದಳು ಹಾಗೇ ನಿದ್ದೆ ಹತ್ತಿತು. ಚಿದಾನಂದ ಒಳಗೆ ಬಂದ. ತಾಯಿಯೊಡನೆ ಕೆಳದನಿಯಲ್ಲಿ ಮಾತಾಡಿದ. "ಈಗ ನಾವಿಬ್ರೂ ಮನೆಗೆ ಹೋಗ್ತಾ ಇದೀವಿ. ನಿನಗೆ ತಿಂಡಿ ಕಾಫಿ ಏನೇ ಬೇಕಾಗಿದ್ರೂ ಈಗಲೇ ಹೇಳಿ ಬಿಡು, ತಂದು ಕೊಡ್ತೀನಿ" ಅಂತಂದ.

"ಈಗ ಏನೂ ಬೇಡ. ತಿನ್ಬೇಕು ಅಂತ ಅನ್ನಿಸ್ತಿಲ್ಲ.. ಹೇಗೂ ಮನೆಗೆ ಹೋಗ್ತಾ ಇದೀಯಲ್ಲ, ಅಲ್ಲಿಂದ್ಲೇ ಏನನ್ನಾದ್ರೂ ತಂದ್ಕೊಡು. ಹಾಗೆ ಹಾಸಿಕೊಳ್ಳುಕ್ಕೇ, ಹೊದ್ದುಕೊಳ್ಳುಕ್ಕೇ ಒಂದೆರಡು ಹೊದ್ದಿಗೆಗಳನ್ನು ತಂದ್ಕೊಡು" ಮಗನಿಗೆ ಹೇಳಿದಳು. ಭುಜಂಗ ಮಂದಾಕಿನಿಯ ಕೈಗೆ ಸ್ವಲ್ಪ ಹಣವನ್ನು ಕೊಟ್ಟ, ಇಬ್ಬರೂ ಅಲ್ಲಿಂದ ಹೊರಟಿದ್ದರು.

ಸ್ವಲ್ಪ ಹೊತ್ತಿನ ನಂತರ, ಭುಜಂಗ ಅವನ ತಾಯಿಯೊಡನೆ ಮತ್ತೆ ಬಂದ. ಸಾವಿತ್ರಿ ಮೊಮ್ಮಗುವನ್ನು ಕಣ್ತುಂಬಿ ನೋಡಿದಳು. ಪಲ್ಲವಿಯ ಯೋಗಕ್ಷೇಮವನ್ನು ವಿಚಾರಿಸಿದಳು.

'ಮಗು ತುಂಬಾ ಮುದ್ದಾಗಿದೆ ಕಣೋ...ಮಗುವಿನ ಮೈ ತೊಳೆದ ನರ್ಸು ಹೇಳಿದಳು. ಮಗುವಿನ ಸೊಂಟದ ಮೇಲೆ ಗರುಡ ಮಚ್ಚೆ ಇದೆಯಂತೆ.." ಭುಜಂಗ ಮುಷ್ಟಿಯನ್ನು ಬಿಗಿ ಮಾಡಿದ. ಕೆನ್ನೆಯ ನರಗಳು ಉಬ್ಬಿದವು.

"ಹೌದಾ ಅತ್ತೇ..ಸಿಸ್ಟರ್ ನಂಗೆ ಹೇಳ್ಲೇ ಇಲ್ಲ.." ಪಲ್ಲವಿ ಅಂದಳು.

"ನೀನು ಇನ್ನೂ ಅರೆಜ್ಞಾನದಲ್ಲಿದ್ದೆಯಲ್ಲ.. ಆಮೇಲೆ ಮತ್ತೆ ಹಾಲುಡಿಸಲು ಕರ್ಕೊಂಡು ಬರ್ತಾರಲ್ಲ, ಆಗ ನೋಡೂವಂತೆ.. ಅಪ್ಪನಿಗೆ ತಕ್ಕ ಮಗನಾಗ್ತಾನೆ. ಭುಜಂಗನಿಗೂ ಯಾರ ಭಯವಿಲ್ಲ, ಹಾಗೇ ಅವನ ಮಗ ಕೂಡಾ ಬೆಳೀತಾನೆ.." ಹೆಮ್ಮೆಯಿಂದ ಹೇಳಿಕೊಂಡಳು.

"ಅಮ್ಮಾ...ಗರುಡ ಮಚ್ಚೆ ಇದ್ದ ಮಾತ್ರಕ್ಕೆ ಯಾರೂ ಧೀರರಾಗುಲ್ಲ...ಅದನ್ನೇನು ಹೆಚ್ಚುಗಾರಿಕೆ ಅಂತ ಹೇಳಿಕೊಳ್ತಿದೀಯ.." ನಿಷ್ಠುರದಿಂದ ನುಡಿದ.

"ಯಾಕೋ ಹೀಗೆ ಮಾತಾಡ್ತೀಯ.. ನಿನ್ನ ಮಗ ನಿನ್ನ ಹಾಗೆ ಇದಾನೆ ಅಂತ ಹೆಮ್ಮೆ ಪಟ್ಕೋ.. ಧೀರನೋ, ಶೂರನೋ, ಒಟ್ನಲ್ಲಿ ಎಲ್ಲಾ ರೀತಿಯಿಂದಲೂ ಸರಿಯಾಗಿದ್ರೆ ಸಾಕು..ಅಲ್ವಾ ಪಲ್ಲವಿ?.." ಹೌದು ಎಂಬಂತೆ ಪಲ್ಲವಿ ತಲೆಯಾಡಿಸಿದಳು.. ಭುಜಂಗ ಬೆವರಿದ. "ಈ ಮಗು ನನ್ನಂತೆ ಆಗದಿದ್ದರೂ ಪರವಾಗಿಲ್ಲ, ಆದರೆ ಶ್ವೇತಾಳಂತೆ ವಿಚಿತ್ರವಾಗದಿರಲಿ.. ಇಲ್ಲದಿದ್ದರೆ ಪಲ್ಲವಿಗೆ ತೊಂದರೆ ಆಗುತ್ತದೆ" ಅಂತಂದುಕೊಂಡ.

"ಅತ್ತೇ.. ಏನಾಗಿದೆ ಇವರಿಗೆ! ಉಲ್ಲಾಸವೇ ಇಲ್ಲ, ಅಸಹನೆಯಿಂದ ಇದಾರೆ.."

"ಏನೂ ಇಲ್ಲ, ಇವನಿಗೆ ಆಯಾಸವಾಗಿದೆ. ತಿರುಗಾಟ ಜಾಸ್ತಿಯಾಗಿದೆ. ಚಿದಾನಂದನ ಹೆಂಡತಿಗೆ ಮಗುವಾದಾಗಿನಿಂದ ಬಿಡುವೇ ಇಲ್ಲ, ತೋಟದ ಕೆಲಸವು ಹೆಚ್ಚಾಗ್ತಿದೆ. ನೀನು ಬೇಗ ಮನೆಗೆ ಬಂದ್ಬಿಡು. ಮನೇಲೇ ಇದ್ದರೆ ರೆಸ್ಟು ಸಿಗುತ್ತೆ.." ಡಾಕ್ಟ್ರನ್ನ ಕೇಳೋ ಭುಜಂಗ.. ಯಾವಾಗ ಮನೆಗೆ ಕರ್ಕೊಂಡು ಹೋಗಬಹುದು ಅಂತ..."

"ನಾಳೆ ಕೇಳ್ತೀನಿ. ಈಗ ಏನು ಅವಾಂತರ?" ಎಂದು ರೇಗಿದ.

'ಇಲ್ಲಿ ಮಂದಾಕಿನಿ ಇರ್ತಾಳೆ.. ಏನು ಬೇಕಾದ್ರೂ ಕೇಳು.. ಡಾಕ್ಟ್ರು ಹೇಳೋವರೆಗೂ ಏಳುಕ್ಕೆ ಹೋಗ್ಬೇಡ." ಸಾವಿತ್ರಿ ಸೊಸೆಗೆ ಬುದ್ಧಿವಾದವನ್ನು ಹೇಳಿದಳು. ಸಾವಿತ್ರಿ ಹೊರಗೆ ಕಾರಿಡಾರಿನಲ್ಲಿ ನಿಂತು ಮಂದಾಕಿನಿಯೊಡನೆ ಮಾತನಾಡುತ್ತಿದ್ದಳು. ಪಲ್ಲವಿ ಕೈ ಸನ್ನೆ ಮಾಡಿ ಭುಜಂಗನನ್ನು ಹತ್ತಿರಕ್ಕೆ ಕರೆದಳು. ಅವನ ಬಲಗೈಯನ್ನು ಹಿಡಿದಳು.

"ನಂಗೆ ಥ್ಯಾಂಕ್ಸ್ ಹೇಳುಲ್ವಾ!.. ನಿಮಗೆ ಮಗನನ್ನು ಹೆತ್ತು ಕೊಟ್ಟಿದೀನಿ" ಎಂದಳು.

"ಥ್ಯಾಂಕ್ಸ್" ಪಲ್ಲವಿ ಎಂದ ಮುಗುಳ್ನಕ್ಕು. ಅವಳ ಕೈ ಹಿಡಿದು ಮತ್ತೆ ನುಡಿದ. "ಬೇಗ ಮನೆಗೆ ಬಂದ್ಬಿಡು.. ಮನೇಲಿ ನೀನಿಲ್ಲದೇ ನಂಗೆ ಬೇಸರವಾಗುತ್ತೆ" ಅವಳು ನಕ್ಕಳು. ಇನ್ನು ಮುಂದೆ ತನಗೆ ಬೇಸರವೇ.. ಪಲ್ಲವಿ ಈ ಮಗುವಿನೊಡನೆ ಹೆಚ್ಚು ಹೊತ್ತು ಕಾಲ ಕಳೆಯುತ್ತಾಳೆ. ಇದನ್ನು ಕಂಡಾಗಲೆಲ್ಲಾ ನನ್ನ ಮನಸ್ಸು ಕದಡುತ್ತೆ.." ಎಂದು ಹೇಳಬೇಕೆಂದುಕೊಂಡರೂ ಹೇಳಲಾಗದೇ ಸುಮ್ಮನಾದ.

“ಶ್ವೇತಳ ಮಗುವಿಗಿಂತ ನನ್ನ ಮಗು ಚೆನ್ನಾಗಿದೆ ಅಲ್ವಾ!” ಮುಗ್ಧಳಂತೆ ಕೇಳಿದಳು.

“ಎರಡೂ ಒಂದೇ ತರಹ ಇರಬಹುದು.. ಈಗ್ಲೇ ಹೇಗೆ ಗೊತ್ತಾಗುತ್ತೆ?”

“ಯಾಕ್ರೀ ಗೊತ್ತಾಗುಲ್ಲ? ಆ ಮಗು ಚಿದಾನಂದನಂತೆ ಸಪ್ಪೆ; ಶ್ವೇತಾಳಂತೆ ಚಂಚಲ. ನನ್ನ ಮಗು, ನನ್ನಂತೆ ಚುರುಕು; ನಿಮ್ಮಂತೆ ಸುಂದರ” ಹೆಮ್ಮೆಯಿಂದ ಹೇಳಿದಳು.

“ಇರಬಹುದು” ಎಂದ ಗೋಣನ್ನಾಡಿಸಿ.

“ಏನಾಗಿದೆ ನಿಮಗೆ? ಹೀಗೆ ಕೋಲೆ ಬಸವನ ಥರ ಕತ್ತನ್ನಾಡಿಸ್ತೀರಲ್ಲ.. ಡಾಕ್ಟ್ರು ಏನಾದ್ರೂ ಅಂದಿದಾರಾ!.. ನಿಮ್ಮ ಮುಖದ ಕಳೆಯನ್ನು ನೋಡಿದ್ರೆ ನಂಗೆ ಆತಂಕ ಆಗುತ್ತೆ.”

“ಹಾಗೇನಿಲ್ಲ ಪಲ್ಲವಿ. ಏನನ್ನೋ ಯೋಚಿಸ್ತಿದ್ದೆ..”

“ಹೇಮನ ಬಗ್ಗೆ ಯೋಚಿಸ್ತಿದ್ರಾ! ಚಿದಾನಂದ ವಿಷಯ ತಿಳಿಸಿದಾನೆ.. ನೀವೇನೂ ಹೇಳಬೇಕಾಗಿಲ್ಲ ಅವಳೇನೂ ಬರೋದು ಬೇಡ”. ಭುಜಂಗ ಮಾತಾಡಲಿಲ್ಲ ತಾಯಿಯೊಡನೆ ಹೊರಟು ಹೋದ. ಮಂದಾಕಿನಿ ಒಳಕ್ಕೆ ಬಂದಳು.

* * *

“ಏನೋ ಭುಜೀ.. ಅಂತೂ ತಂದೆಯಾಗ್ಬಿಟ್ಟೆ.. ಖುಷೀನಾ? ಕಂಗ್ರಾಟ್ಸ್ ಕಣೋ..” ಹೇಮಾ ಕೈ ಹಿಡಿದೆಳೆದು ಕುಲಕಿದಾಗ ಇವನು ಕಕ್ಕಾ ಬಿಕ್ಕಿ...ಸಾವರಿಸಿಕೊಂಡ.

“ನೀನ್ಯಾಕೆ ಬಂದೆ! ಬಾ ಅಂತ ಯಾರು ಕರೆದ್ರು?” ಒರಟಾಗಿ ಕೇಳಿದ.

“ಅರೇ! ಇದೇನೋ ಹೀಗೆ ಮಾತಾಡ್ತೀಯ.. ನನ್ನ ಊರು, ನನ್ನ ಮನೆ.. ಅದಕ್ಕೆ ಬಂದೆ...ಇಷ್ಟು ಅಹಂಕಾರ ಬರಬಾರ್ದು ನಿಂಗೆ” ನಗುತ್ತಾ ಬೆನ್ನ ಮೇಲೆ ಗುದ್ದಿದಳು.

“ಸರಿ, ಹಾಗಾದ್ರೆ ನಿನ್ನ ಮನೆಗೆ ನೀನು ಹೋಗು. ನಾನೀಗ ಎಲ್ಲಿಗೋ ಹೊರಟಿದೀನಿ..”

“ನರ್ಸಿಂಗ್ ಹೋಂಗೆ ತಾನೇ!... ನಾನು ಬರ್ತೀನಿ.. ಅದಕ್ಕೇ ಬಂದಿರೋದು..” ಭುಜಂಗ ಉತ್ತರಿಸದೇ ಮನೆಯೊಳಕ್ಕೆ ನಡೆದ. ನೋಡಿ ಅತ್ತೇ ಹೇಗಾಡ್ತಾನೆ ನಿಮ್ಮ ಮಗ.. ಅವನ ಹೆಂಡತಿ ಒಂದು ಮಗೂನ ಹೆತ್ತಿದ್ದಕ್ಕೇ ಇವನಿಗೆ ಇಷ್ಟು ಜಂಭ.. ಹಾಗಿದ್ರೆ ನಿಮಗೆ ಎಷ್ಟು ಜಂಭ ಇರಬಾರ್ದು!” ಲೇವಡಿ ಮಾಡುತ್ತಾ ಆಡಿದಳು.

“ಜಂಭ ಪಡುವಂಥಾದ್ದು ಏನು! ಏನೋ ಆಯಾಸ..ಆತಂಕ.. ಬಹಳ ತಲೆ ಕೆಡಿಸ್ಕೊಂಡಿದಾನೆ ಅಷ್ಟೇ...ನೀನ್ಯಾವಾಗ ಬಂದೆ!.. ವೈದೇಹೀನ ಮಾತನಾಡ್ಸಿದ್ಯಾ?...ಶ್ವೇತನ ಮಗೂನ ನೋಡಿದ್ಯಾ?” ಸಾವಿತ್ರಿ ಕೇಳಿದಳು.

“ಹುಂ ಅತ್ತೆ ನೋಡಿದೆ. ಮಗು ತುಂಬಾ ಮುದ್ದಾಗಿದೆ..ಅಮ್ಮಾನೇ ಬಾಣಂತನ ಮಾಡ್ತಿರುವಂತಿದೆ.. ಮಂದಾಕಿನಿ ಚಿಕ್ಕಮ್ಮ ಪಲ್ಲವಿ ಜೊತೇಲಿದಾರಂತೆ.. ಸಧ್ಯ...ಈ ನೆವದಲ್ಲಾದರೂ ತಾಯಿ ಮಗಳು ಒಟ್ಟಿಗೆ ಇರುವಂತಾಯ್ತಲ್ಲ, ಪಲ್ಲವಿಗೆ ತಾಯಿಯ ಮೇಲೆ ಸಿಟ್ಟು..” ಸರ್ರನೆ, ಭುಜಂಗ ಹಿತ್ತಿಲಿನಿಂದ ಒಳಕ್ಕೆ ಬಂದ. ಹೇಮಾ ಮಾತನ್ನು ನಿಲ್ಲಿಸಿದಳು.

"ಅಮ್ಮಾ..ಕಾಫಿ, ಗಂಜಿ ರೆಡೀನಾ! ಅತ್ತೆಗೆ ತಿಂಡಿ ಇಟ್ಯಾ!"..

"ಹುಂ, ಎಲ್ಲಾ ಸಿದ್ಧವಾಗಿದೆ. ಚೀಲ ಅಲ್ಲಿದೆ ನೋಡು.. ಕೊಟ್ಟಿಟ್ಟು ಬೇಗ ಬಂದ್ಬಿಡು. ಮನೇಲಿ ತುಂಬಾ ಕೆಲಸ ಇದೆ. ಮುಂದಿನ ರೂಮನ್ನು ಕ್ಲೀನ್ ಮಾಡ್ಬೇಕು. ನಿಮ್ಮಪ್ಪಂಗೆ ಫೋನು ಮಾಡು.. ವಿಜಯನ್ನ ಕರ್ಕೊಂಡು ಬರ್ಲಿ ಅಂದ್ಹಾಗೇ ಹೇಮಾ ನಿನ್ಹತ್ರ ಒಂದ್ಮಾತು ಕೇಳ್ಬೇಕು ಕಣೇ..." ಭುಜಂಗ ಚೀಲವನ್ನೆತ್ತಿಕೊಂಡು ಮುಂಬಾಗಿಲ ಕಡೆ ನಡೆದ. ಹೇಮಾ ಅವನ ಹಿಂದೆ ಓಡಿದಳು. ಬೈಕ್ ಸ್ಟಾರ್ಟ್ ಮಾಡುತ್ತಿದ್ದವನ ಕೈ ಮೇಲೆ ಕೈಯನ್ನಿಟ್ಟಳು.

"ನನ್ಮೇಲೆ ಕೋಪವೇನೋ ಭುಜೀ...ಹೀಗ್ಯಾಕೆ ಸೀರಿಯಸ್ ಆಗಿದೀಯ?"

"ನನಗೆ ನಿನ್ನ ಹತ್ರ ಯಾವ ಮಾತೂ ಬೇಕಿಲ್ಲ, ನಿನ್ನ ಮುಖವನ್ನು ನೋಡೋಕೂ ನಂಗೆ ಇಷ್ಟವಿಲ್ಲ." ಮುಖಕ್ಕೆ ಹೊಡೆದಂತೆ ನುಡಿದ.

"ಅಂಥದ್ದೇನು ಮಾಡಿದೀ ನೀ. ಹೇಮಾ" ಕೇಳಿದಳು.

"ಸುಳ್ಳನ್ನು ಹೇಳಿದೀಯ...ನೀನು ಇಂಥವಳು ಅಂತ ನಾನಂದುಕೊಂಡಿರ್ಲಿಲ್ಲ, ಜಾಗ ಬಿಡು ಹೊತ್ತಾಗುತ್ತೆ..." ಕೈ ಝಾಡಿಸಿ ಬೈಕ್ ತಿರುಗಿಸಿದ.

"ಇಲ್ಲ ನಾನು ಏನು ಮಾಡಿದೀನಿ ಅಂತ ನಂಗೆ ಗೊತ್ತಾಗುವವರೆಗೂ ನಿನ್ನನ್ನ ಹೋಗುಕ್ಕೆ ಬಿಡುಲ್ಲ.ನೀನು ನನ್ನ ಆಪ್ತ ಸ್ನೇಹಿತ ಅಂತ ಹೇಳಿಕೊಳ್ತೀಯ.. ಹೀಗಾ ಮಾತಾಡೋದು?.."

"ಈ ಸ್ನೇಹಿತಂಗೆ ಮೋಸ ಮಾಡಿದೋಳು ನೀನು..." ಬೆರಳನ್ನು ತೋರಿದ.

"ವಿಷಯ ಏನೂಂತ ಮೊದಲು ಹೇಳು...ಇಲ್ದಿದ್ರೆ ನಂಗೆ ಅರ್ಥವಾಗುಲ್ಲ..."

"ಅರ್ಥ ಆಗ್ದೇ ಏನಿಲ್ಲ, ಬೇಕೂಂತ ಹೀಗೆ ಮಾಡಿದೀಯ..ಪಲ್ಲವಿಯ ಮೇಲಿನ ಅಸೂಯೆಗೆ ಹೀಗಾ ಮಾಡೋದು?.." ಅವಳೇನು ಅನ್ಯಾಯ ಮಾಡಿದ್ಲು? ನಾನೇನು ದ್ರೋಹ ಮಾಡಿದ್ದೆ?"

"ಭುಜೀ.. ಇನ್ನೂ ಹೊರಡ್ಲಿಲ್ಲವೇನೊ?...ಅವರುಗಳು ಕಾಯ್ತಾ ಇರ್ತಾರೆ. ಬೇಗ ಹೋಗ್ಬಾರ್ದಾ?" ಸಾವಿತ್ರಿ ಜಗುಲಿಯ ಬಳಿ ನಿಂತು ಹೇಳಿದಾಗ, ಹೇಮಾ ಇತ್ತ ತಿರುಗಿದಳು.

"ನೋಡಿ ಅತ್ತೇ, ಹೇಗಾಡ್ತಾನೆ!.. ನಾನೂ ಬರ್ತೀನಿ ಅಂತಂದ್ರೆ ಬೇಡಾಂತಾನೆ.."

"ಕರ್ಕೊಂಡು ಹೋಗೋ.. ಇವಳೂ ಮಗೂನ ನೋಡ್ಲಿ.. ಇವಳು ಪಲ್ಲವಿಗೆ ಎಷ್ಟು ಸಹಾಯ ಮಾಡಿದಾಳೆ.." ಭುಜಂಗ ಹಲ್ಲು ಕಡಿದ ಸದ್ದು ಅವಳಿಗೆ ಕೇಳಿಸಿತ್ತು.

"ನಿನಗೆ ಇಷ್ಟವಿಲ್ಲದಿದ್ರೆ ನಾನು ಬರುಲ್ಲ, ಆದರೆ ನಿನ್ನ ಅಸಮಾಧಾನ ಏನೂಂತ ನಂಗೆ ತಿಳಿಸ್ಲೇ ಬೇಕು.. ನಿನ್ನ ಅಮ್ಮನ ಮೇಲಾಣೇ..."

"ಬಾಯ್ಮುಚ್ಚು...ಸುಮ್ಮನೇ ಹತ್ತು." ಎಂದ ತುಟಿ ಕಚ್ಚಿ, ಅವಳು ಹಿಂದಿನ ಸೀಟನ್ನೇರಿದಳು.....ಬೈಕನ್ನು ಓಡಿಸಿದ. ಆ ವೇಗಕ್ಕೆ ಅವಳು ಅತ್ತಿಂದಿತ್ತ ತೂರಾಡಿದಳು.

"ಸ್ವಲ್ಪ ನಿಧಾನವಾಗಿ ಓಡ್ಸೋ...ನನ್ನನ್ನೇನು ಸಾಯಿಸ್ಬೇಕು ಅಂತ ಇದೀಯಾ!" ಕೆಣಕಿದಳು. ಸರ್ರನೆ ಬ್ರೇಕ್ ಹಾಕಿದ. ಹಿಂದೆ ಕುಳಿತಿದ್ದವಳು ಕೆಳಕ್ಕೆ ಬಿದ್ದಳು. ಅವಳು ನೋವಿನಿಂದ ನರಳಿದಳು.

ಅವನ ಕಡೆ ಕೈ ನೀಡಿದಳು. ಆದರೆ ಅವನು ಕೈ ಕೊಟ್ಟು ಎಬ್ಬಿಸಲಿಲ್ಲ. ದುರು ದುರು ನೋಡುತ್ತಾ ನಿಂತಿದ್ದ. ಕೈ ಮೈಗೆ ಮೆತ್ತಿದ ಧೂಳನ್ನು ಒರೆಸಿಕೊಂಡು ಎದ್ದಳು. ಸರಿದು ಹೋಗಿದ್ದ ದುಪಟ್ಟಾವನ್ನು ಸರಿಪಡಿಸಿಕೊಂಡಳು.

"ಏನಾಗಿದ್ಯೋ ನಿಂಗೆ ತಲೆ ಕೆಟ್ಟೋನ ಥರ ಆಡ್ತಿದೀಯಲ್ಲ."

"ಹೌದು, ನನ್ನ ತಲೆ ಕೆಟ್ಟು ಹೋಗಿದೆ. ಅದಕ್ಕೆ ಕಾರಣ ನೀನು.."

"ಅಂಥಾದ್ದೇನು ಮಾಡ್ದೆ ನಾನು!.. ಮಗ ಹುಟ್ಟಿದ್ದಾನೆ. ನನಗೆ ಗಿಫ್ಟ್ ಕೊಡ್ಬೇಕು ನೀನು...ಅಂಥಾದ್ರಲ್ಲಿ.."

"ನಿನ್ನನ್ನ ಜೈಲಿಗೆ ಹಾಕಿಸ್ತೀನಿ...ನೀನು ನನಗೆ, ಪಲ್ಲವಿಗೆ ಮಾಡಿರುವ ಅನ್ಯಾಯ ತಿಳಿದಿದೆ.. ಈ ಅಧಿಕಾರವನ್ನು ನಿಂಗ್ಯಾರು ಕೊಟ್ರು?" ಅಬ್ಬರಿಸಿದ.

"ನೀನೇನು ಹೇಳ್ತಿದೀಯ ಅಂತ ನಂಗೆ ಒಂಚೂರೂ ಅರ್ಥವಾಗ್ತಿಲ್ಲ. ಸ್ವಲ್ಪ ಬಿಡಿಸಿ ಹೇಳ್ತೀಯಾ ಪ್ಲೀಸ್..." ಅವಳು ಮುಗ್ಧಳಂತೆ ಕೇಳಿದಾಗ ಅವನಿಗೆ ಮತ್ತೂ ರೇಗಿತು.

"ನಂಗೆ ಶ್ವೇತಾ, ಎಲ್ಲವನ್ನೂ ಹೇಳಿದಾಳೆ...ಎಂಥದೋ ಪ್ರಯೋಗ ನಡೆಸುವ ಮೊದಲು, ನನ್ನ ಪರ್ಮಿಷನ್ ತಗೊಂಡಿಲ್ಲ ನೀನು...ನಿಂಗೇನು ಹಕ್ಕಿತ್ತು ಹಾಗ್ಮಾಡೋಕೆ?"

"ಓ...ಅದಾ?...ಪಲ್ಲವಿಯ ಗರ್ಭಕೋಶದಲ್ಲಿ ತೊಂದರೆ ಇತ್ತು ಅಂತ ನಿಂಗೆ ಹೇಳಿದ್ನಲ್ಲ.. ಅದಕ್ಕೇ ಈ ಪ್ರಯೋಗ ಮಾಡ್ದೆ.. ನಿಂಗೆ ಉಪಕಾರವನ್ನೇ ಮಾಡಿದೀನಿ. ಈ ಪ್ರಯೋಗದಿಂದ ಪಲ್ಲವಿಗೆ ಮಗುವಾಗಿದೆ. ನೀನು ತಂದೆ ಆಗಿದೀಯ...ಈ ಮಗು ನಿಂದೇ...ಪಲ್ಲವೀನ ತುಂಬಾ ಪ್ರೀತಿಸ್ತೀಯಾ ಅಲ್ವಾ ? " ಸಮಜಾಯಿಷಿ ಹೇಳಲು ಪ್ರಯತ್ನಿಸಿದಳು.

"ತಾಯಿಯಾಗಿರೋಳು ಶ್ವೇತಾ...ನೆನೆಸಿಕೊಳ್ಳೋಕೇ ಅಸಹ್ಯ ಆಗುತ್ತೆ... ತಂದೆಯಾಗೋಕೆ ನಾನೇ ಬೇಕಾಗಿತ್ತಾ?...ನಿನ್ನನ್ನ ಶ್ವೇತನ್ನ ಇಬ್ಬರನ್ನು ಜೈಲಿಗೆ ಕಳಿಸ್ತೀನಿ..."

"ಹಾಗೆ ಮಾಡು...ನಾನು ಜೈಲಿಗೆ ಹೋದ್ರೆ ನಿಂಗೆ ಸಂತೋಷ...ಅಮ್ಮಂಗೆ ವ್ಯಥೆ ಕೇಳಿದ್ಯಲ್ಲ ಈ ಆದರ್ಶ ಯಾರಿಗಾಗಿ ಅಂತ...ನನಗಾಗಿ...ನನಗಾಗಿ ತಿಳೀತಾ?.."

"ಇದೆಂಥಾ ಆದರ್ಶ? ಕಂಡೋರಿಗೆ ದ್ರೋಹ ಮಾಡಿ... ಆ ಶ್ವೇತ ಮೆರೀತಿದಾಳೆ. ಪಲ್ಲವಿಗೆ ನಿಜ ತಿಳಿದರೆ, ಶಾಕ್‌ನಿಂದ ಸತ್ತು ಹೋಗ್ತಾಳೇ...ಇದು ನಿನಗೆ ಸಂತೋಷ ಅಲ್ವಾ!... ಇದನ್ನು ನೀನು ಬಯಸ್ತಿದ್ದೆ ಅಲ್ವಾ ! ನಾನು ಅವಳನ್ನು ಮದುವೆಯಾದ್ರೆ, ಅದರಲ್ಲಿ ಅವಳ ತಪ್ಪೇನಿತ್ತು!..ತಪ್ಪೆಲ್ಲಾ ನಿನ್ನದು. ಸ್ವಲ್ಪ ಮಟ್ಟಿಗೆ ನನ್ನದು... ಈಗ ಈ ಭಾರಿ ಅಪರಾಧ..ಯಾಕೆ ಬೇಕಿತ್ತು.?"

"ಹೌದು, ನಾನು ತಪ್ಪು ಮಾಡಿದೀನಿ.. ಪ್ರಯೋಗ ಸಕ್ಸಸ್ ಆಯ್ತು.. ನಿನ್ನ ರಕ್ತವನ್ನು ಹಂಚಿಕೊಂಡು, ನಿನ್ನ ವಂಶವನ್ನು ಉದ್ಧಾರ ಮಾಡುವ ಮಗುವನ್ನು ನಿನಗೆ ಕೊಟ್ಟಿದೀನಿ. ನಿನಗೆ ಬೇಡವಾದ್ರೆ ನಂಗೆ ಕೊಟ್ಬಿಡು.. ನಾನು ಸಾಕಿಕೊಳ್ತೀನಿ.."

"ಇದೇ ನಿಂಗೆ ಬೇಕಾಗಿದ್ದುದು, ಹೌದು ತಾನೇ..ನನ್ನನ್ನು ತಿರಸ್ಕರಿಸಿದೆ.. ಆದರೆ ನನ್ನನ್ನ ಹೀಗೆ

ದುರುಪಯೋಗ ಪಡಿಸಿಕೊಂಡೆ...ಹೀನಾಯವಾಗುಲ್ವಾ..ನಿಂಗೆ?"

"ಇಲ್ಲ ನಂಗೆ ಏನೂ ಆಗುಲ್ಲ ನನ್ನ ಭಾವನೆಗಳೆಲ್ಲಾ ಹುಡುಗಿ ಹೋಗಿವೆ.. ನಿನ್ನ ಪರ್ಮಿಷನ್ ಕೇಳಿದ್ದರೆ ನೀನು ಖಂಡಿತಾ ಒಪ್ಪುತ್ತಿರಲಿಲ್ಲ.."

ಅದಕ್ಕೇ? ಈ ಶ್ವೇತಾಳೇ ಯಾಕೆ ಬೇಕಾಗಿತ್ತು?.. ಬೇರೆ ದಾನಿಗಳಿರಲಿಲ್ವಾ!...ಶ್ವೇತಾಳಿಗೆ ನನ್ನ ಮಗು ಯಾಕೆ ಬೇಕಿತ್ತು?.. ಡಾಕ್ಟರಾಗಿ ಇಂಥಾ ಕೆಲಸ ಮಾಡೋದಾ?.. ನನಗೆ ನಿನ್ನ ಮೇಲೆ ನಂಬಿಕೆಯೇ ಹೊರಟು ಹೋಯ್ತು..ಇನ್ನು ಮುಂದೆ ನನಗೂ ನಿನಗೂ ಯಾವ ಸ್ನೇಹವೂ ಇಲ್ಲ ಸಂಬಂಧವೂ ಇಲ್ಲ.. ಎಲ್ಲಾ ಮುಗಿದು ಹೋಯ್ತು.." ಎಂದು ಹೇಳಿ ಅವಳಿಗೆ ಬೆನ್ನು ಮಾಡಿ ನಿಂತ. ಅವಳು ಅವನ ಎದುರಿಗೆ ಬಂದು ನಿಂತಳು.

"ಇಲ್ಲ ಸಂಬಂಧ ಮುಗಿದಿಲ್ಲ, ಈಗ ತಾನೇ ಮತ್ತೊಂದು ಹೊಸ ಸಂಬಂಧ ಶುರುವಾಗಿದೆ...ತಿಳಿದುಕೊಳ್ಳುವ ಆಸೆ ಇದ್ದರೆ ತಿಳಿಸ್ತೀನಿ.. ಪ್ರನಾಳ ಶಿಶುಗಳ ಜನ್ಮ ರಹಸ್ಯ ತಿಳಿಸ್ತೀನಿ."

"ಇನ್ನು ಏನೇನೂ ಅವಾಂತರಗಳನ್ನು ಮಾಡಿದೀಯ...? ನಿನಗೆ ಬುದ್ಧಿ ಸರಿ ಇಲ್ಲ."

"ಹೌದು, ನಂಗೆ ಬುದ್ಧಿ ಸರಿ ಇಲ್ಲ ಆದರೆ ಈಗ ನಾನೊಂದು ವಿಷಯವನ್ನು ತಿಳಿಸ್ತೀನಿ. ನಂಬಿದರೆ ನಂಬು, ಬಿಟ್ಟರೆ ಬಿಡು. ನಂಗೇನೂ ಬೇಸರವಿಲ್ಲ.. ಪಲ್ಲವಿಯ ಗರ್ಭದಲ್ಲಿ ಬೆಳೆದದ್ದು ನಿನ್ನ ಹಾಗೂ ಶ್ವೇತಳ ಶಿಶುವಲ್ಲ..ನನ್ನ ಹಾಗೂ ನಿನ್ನ ಶಿಶು...ನಮ್ಮಿಬ್ಬರದ್ದು"

ಭುಜಂಗ ಛಟೀರನೇ ಅವಳ ಕೆನ್ನೆಗೆ ಹೊಡೆದ. ಅವಳು ಅವನ ಕೈಯನ್ನು ಹಿಡಿದು ತನ್ನ ಕೆನ್ನೆಗೆ ಒತ್ತಿಕೊಂಡಳು. ಅವನು ಬಿಡಿಸಿಕೊಂಡ. "ಹೌದು ಭುಜಂಗ, ಈಗ ನಾನು ಹೇಳಿದ ವಿಷಯ ನೂರಕ್ಕೆ ನೂರು ನಿಜ. ಈ ಬಗ್ಗೆ ನನಗೆ, ಹಾಗೂ, ನನ್ನ ಸಹೋದ್ಯೋಗಿ ಡಾಕ್ಟರುಗಳಿಗೆ ಮಾತ್ರ ತಿಳಿದಿದೆ. ಆದರೆ ತಪ್ಪೆಲ್ಲಾ ನನ್ನದು. ಅವರ್‍ಯಾರದೂ ತಪ್ಪಿಲ್ಲ

"ಎಲ್ಲಾ ಸೇರ್‍ಕೊಂಡು ಯಾಕೆ ಹೀಗೆ ಮಾಡಿದ್ರಿ?.. ನನ್ನ ಮೇಲೆ ಹಗೆ ಇದ್ದರೆ, ತೀರಿಸ್ಕೊಳ್ಳೋಕೆ ಬೇರೆ ವಿಧಾನವಿರಲಿಲ್ವಾ!..ಪ್ರನಾಳ ಶಿಶುವಂತೆ.. ಪ್ರನಾಳ ಶಿಶು.."

"ನಿನ್ನ ಮೇಲೆ ಯಾಕೆ ಹಗೆ ಸಾಧಿಸ್ಲೋ ಭುಜಿ...ನೀನು ಯಾವಾಗಲೂ ನನ್ನ ಆಪ್ತ ಮಿತ್ರನೇ...ನಿನಗೆ ಉಪಕಾರ ಮಾಡ್ಬೇಕು ಅಂತ ಅನ್ನಿಸ್ತು...ಪಲ್ಲವಿ ತಾಯಿಯಾಗಬೇಕಿತ್ತಲ್ವಾ?"

"ನಿಜ ಹೇಳು ಹೇಮ, ಪಲ್ಲವಿ ತಾಯಿಯಾಗುವ ಅರ್ಹತೆ ಹೊಂದಿರಲಿಲ್ವಾ?"

"ಮೆಡಿಕಲ್ ರಿಪೋರ್ಟ್ಸ್‌ಗಳನ್ನು ನೀನೇ ನೋಡಿದ್ಯಲ್ಲ... ಬಾಡಿಗೆ ತಾಯಿಯ ವಿಷಯವನ್ನು ಎತ್ತಿದ್ದರೆ ಪಲ್ಲವಿ ಇರಲಿ, ನಿನಗೇ ಇಷ್ಟವಾಗ್ತಿರಲಿಲ್ಲ ಅದಕ್ಕೇ ಶ್ವೇತಾಳ ಹತ್ರ ಮಾತನ್ನಾಡಲು ಹೋಗಿದ್ದೆ ಪಲ್ಲವಿಯ ಬಗ್ಗೆ ಕೆಲವು ಮಾಹಿತಿಗಳು ನನಗೆ ಬೇಕಾಗಿದ್ದವು.

"ನನ್ನನ್ನೇ ಕೇಳಬಹುದಾಗಿತ್ತಲ್ಲ..ನನ್ನ ಪರ್ಮಿಷನ್ ಇಲ್ಲದೇ, ನೀನು ಹೀಗೆಲ್ಲಾ ಮಾಡಿದ್ದು ಅಪರಾಧ ಅಲ್ವಾ!..ಯಾವ ಫಾರಂಗೆ ನಾನು ಸಹಿ ಹಾಕಿದೀನಿ..?

"ಹೌದು, ಅಪರಾಧ.. ಆ ಸಮಯದಲ್ಲಿ ಹಿಂದು ಮುಂದೆ ಯೋಚಿಸದೇ ನಾನು

ಸ್ವಾರ್ಥಿಯಾಗ್ಬಿಟ್ಟೆ ಭುಜೀ..ಶ್ವೇತಾಳ ಗರ್ಭನಾಳ, ಅಂಡಾಶಯ ಎಲ್ಲವೂ ಆರೋಗ್ಯಯುತವಾಗಿತ್ತು. ಆದರೆ, ಅವಳು ಈ ಪ್ರಯೋಗಕ್ಕೆ ಒಪ್ಪಿಕೊಳ್ಳುವಾಗ ಒಂದು ಕಂಡೀಷನ್ ಹಾಕಿದಳು. ಅದು ಅವಳ ಇಚ್ಛೆಯಾಗಿತ್ತು.. ಅದನ್ನು ಹೇಳಿದರೆ ನಿನಗೆ ಮುಜುಗರವಾಗಬಹುದು. "ನನಗೆ ಭುಜಂಗನ ಮೇಲೆ ಪ್ರೀತಿ ಇದೆ. ಅವರ ಒಂದು ಮಗುವನ್ನು ಹೆರುವಂತೆ ಪ್ರಯೋಗ ಮಾಡಿ ಎಂದು ಕೇಳಿಕೊಂಡಳು. ಆ ಮಗುವೂ ನಿನ್ನದೇ.." ಮತ್ತೆ ಹೊಡೆಯಲೆಂದು ಕೈ ಎತ್ತಿದವನು, ಹಾಗೆ ಮುಷ್ಠಿಯನ್ನು ಬಿಗಿ ಮಾಡಿದ.

"ನೀನು ಒಪ್ಪಿ ಬಿಟ್ಯಾ!... ಇದು ನಿಜವಾಗಿಯೂ ಅಪರಾಧವೇ.. ನಾನು ಸುಮ್ಮನಿರಲ್ಲ"

"ಹೂಂ, ನೀನು ತಂದೆಯಾಗಲಿ ಎನ್ನುವ ಆಸೆಯಿಂದ ಒಪ್ಪಿಗೆ ಕೊಟ್ಟೆ. ಆದರೆ ತತ್‌ಕ್ಷಣವೇ ★ನನ್ನ ಮನಸ್ಸನ್ನು ಬದಲಾಯಿಸಿ ಬಿಟ್ಟೆ...ನನ್ನ, ನಿನ್ನ ಮಗುವನ್ನು ಸೃಷ್ಟಿಸಿ, ಪಲ್ಲವಿಯ ಗರ್ಭದಲ್ಲಿ ಬೆಳೆಸಬೇಕು ಎಂಬ ಆಸೆ ಹುಟ್ಟಿ ಬಿಟ್ಟಿತು.. ನಾನೇನ್ಮಾಡ್ಲೀ..?

"ನನ್ನ ಸ್ನೇಹಕ್ಕೇ ನೀನು ಕಳಂಕವನ್ನು ತಂದ್ಬಿಟ್ಟೆ ಹೇಮಾ.."

"ಇದರಲ್ಲಿ ಕಳಂಕ ಏನ್ಬಂತೋ ಭುಜೀ..? ನಾನು ನಿನ್ನಿಂದ ದೇಹ ಸುಖವನ್ನು ಬಯಸಲಿಲ್ಲ ಇಲ್ಲಿ ಯಾವ ಅತ್ಯಾಚಾರವೂ ನಡೆದಿಲ್ಲ. ಶೀಲ ಕಳೆದಿಲ್ಲ ಪ್ರಯೋಗ ಅಷ್ಟೇ.."

"ಯಾವ ಅಳುಕೂ ಇಲ್ಲದೇ ಹೀಗೆಲ್ಲಾ ಮಾತಾಡ್ತೀಯಲ್ಲ."

"ನಾವು ಡಾಕ್ಟರುಗಳು ಚರ್ಚಿಸುವಾಗ, ಬೇಕಾದಷ್ಟು ವಿಷಯಗಳನ್ನು ನಿರ್ಭಯವಾಗಿ, ನಿರಾಳವಾಗಿ ಮಾತಾಡ್ತೀವಿ.. ಅದು ಸರ್ವೇ ಸಾಮಾನ್ಯ. ನಿನ್ನ ಸ್ನೇಹಕ್ಕೇ ಕೃತಜ್ಞತೆ ಸಲ್ಲಿಸುವ ನೆವದಲ್ಲಿ ನಾನು ದಾನಿಯಾದೆ.. ನನಗೆ ಯಾವ ಅಳುಕೂ ಇಲ್ಲ.. ಶ್ವೇತಾ ಕೂಡ ಯಾವ ಲಜ್ಜೆಯೂ ಇಲ್ಲದೇ, ಈ ರಹಸ್ಯವನ್ನು ನನಗೆ ಹೇಳಿದಳು. ಚಿದಾನಂದನಿಗೆ, ಪಲ್ಲವಿಗೆ ತಿಳಿದರೆ ಯಾವ ಅಭಿಪ್ರಾಯ ಬರುತ್ತದೆ? ನೀನೇ ಹೇಳು...ಭುಜಂಗ ಮಾತಾಡದೇ ಹಾಗೇ ನಿಂತಿದ್ದ ಮಗುವಿನ ತಾಯಿ ಶ್ವೇತಾ ಅಲ್ಲ; ನಾನು...ನಾವಿಬ್ಬರೇ ಜನ್ಮದಾತರು.."

"ಈ ವಿಷಯ ಹೊರಕ್ಕೆ ಬಂದರೆ, ಈ ಊರ್ನಲ್ಲಿ ನಾನು ತಲೆ ಎತ್ತಿ ತಿರುಗಾಡದ ಹಾಗೆ ಆಗುತ್ತೆ. ನನಗೂ ನಿನಗೂ ಮದುವೆ ಅಂತ ಊರಿನವರಿಗೆಲ್ಲ ತಿಳಿದಿತ್ತು.. ಈಗ ನೋಡಿದರೆ ಹೀಗೆ.. ಎಂಥಾ ಮರ್ಯಾದೆ ಮಾಡ್ದೆ ನೀನು ನಂಗೆ...ಯಾವ ನಾಚಿಕೆಯೂ ಇಲ್ವಾ?"

"ಪಲ್ಲವಿಯನ್ನು ಬದುಕಿಸಿದೀನಿ...ಅವಳ ಆಸೆ ನೆರವೇರಿದೆ..ಪಲ್ಲವಿಯ ಪ್ರೀತಿ ಸದಾ ಹಸಿರಾಗಿರುತ್ತೆ...ಹೊರಗಿನವರ್‍ಯಾರಿಗೂ ತಿಳಿಯುವುದಿಲ್ಲ, ನಿರ್ಯೋಜನೆಯಿಂದಿರು."

"ನನಗೆ ಶ್ವೇತಾಳ ಮೇಲೆ ನಂಬಿಕೆ ಇಲ್ಲ."

"ಅವಳಿಗೆ ನಿಜ ಏನೂಂತ ತಿಳಿಸ್ತೀನಿ. ಅವಳಿಗೆ ಗೊತ್ತಿಲ್ಲ, ಅವಳು ಹೆತ್ತಿರುವುದು ನಮ್ಮಿಬ್ಬರ ಮಗುವನ್ನು, ನಮ್ಮಿಬ್ಬರ ಮಕ್ಕಳಿಗೆ, ಅವಳೂ, ಪಲ್ಲವಿ ಇಬ್ಬರೂ ಬಾಡಿಗೆ ತಾಯಿಯರು.."

"ಹೀಗ್ಯಾಕೆ ಮಾಡ್ದೆ ಹೇಮಾ! ಈ ವಿಷಯ ನಿನ್ನ ಗಂಡನಿಗೆ ತಿಳಿದರೆ ಏನು ಗತಿ ಅನ್ನೋ ಭಯಾನೂ ನಿಂಗಿಲ್ವಾ?"

"ಅವನಿಗೆ ಒಂದಲ್ಲ ಒಂದು ದಿನ ನಾನೇ ಹೇಳ್ತೀನಿ. ಅವನೂ ಡಾಕ್ಟರು. ಅವನಿಗೆ ನನ್ನ ಭಾವನೆಗಳ ಬಗ್ಗೆ ಗೌರವವಿದೆ. ನನ್ನ ಆಸೆಗಳಿಗೆ ಬೆಲೆ ಇದೆ."

"ಇದೆಂಥಾ ಆಸೆ?.. ನಿನ್ನ ಬಗ್ಗೆ ತಿರಸ್ಕಾರ ಹುಟ್ಟುಲ್ವಾ?.." ಛೀ.... ಹೀಗೆ ಮಾಡ್ಬಾರ್ದಾಗಿತ್ತು ನೀನು.

"ಇಲ್ಲ, ನನ್ನ ಬಗ್ಗೆ ತಿರಸ್ಕಾರ ಹುಟ್ಟುವ ಛಾನ್ಸೇ ಇಲ್ಲ..ಅವನಿಗೆ ಮಕ್ಕಳಾಗುವ ಅರ್ಹತೆ ಇದ್ದರೆ ತಾನೇ ನನ್ನ ಬಗ್ಗೆ ತಿರಸ್ಕಾರ ಹುಟ್ಟೋದು?.." ಭುಜಂಗ ಕಲ್ಲಿನಂತಾದ.

"ಏನು ಹೇಳ್ತಿದೀಯ ನೀನು?..ಎಷ್ಟು ಸುಳ್ಳುಗಳನ್ನು ಸೃಷ್ಟಿ ಮಾಡ್ತಿದೀಯ?"

"ಹುಂ, ನಿಜಾನೇ ಹೇಳ್ತಿದೀನಿ.. ಆಕ್ಸಿಡೆಂಟ್ ಆದಾಗ, ಅವನು ಪುರುಷತ್ವವನ್ನೇ ಕಳೆದುಕೊಂಡಿದಾನೆ.. ಅವನಿಂದ ಮಗು ಹುಟ್ಟುವುದು ಅಸಾಧ್ಯ.. ಈ ಸತ್ಯವನ್ನು ಅವನೇ ನನಗೆ ಹೇಳಿದ್ದು.."

"ಮತ್ಯಾಕೆ ಅವನನ್ನು ಮದುವೆಯಾದ್ಯೇ ಹೇಮಾ?.."

"ಪ್ರೀತಿ! ಪ್ರೀತಿಸಿದವನನ್ನು ಈ ಕಾರಣದಿಂದಾಗಿ ತಿರಸ್ಕರಿಸಲು ನನ್ನ ಮನಸ್ಸು ಒಪ್ಪಲಿಲ್ಲ, ಅಷ್ಟರಲ್ಲಿ ನಿನ್ನ ಮದುವೆಯೂ ಆಗಿತ್ತು. ಅವನಿಗೆ ಸಂಗಾತಿಯಾಗಿರಲು ಒಪ್ಪಿಕೊಂಡೆ. ಆದರೆ, ಪಲ್ಲವಿ ತಾಯಿಯಾಗುವ ಹಂಬಲವನ್ನು ವ್ಯಕ್ತಪಡಿಸುವಾಗ, ನನ್ನಲ್ಲೂ ಆ ಬಯಕೆಗಳು ಪುಟಿದೇಳುತ್ತಿದ್ದವು.. ನನ್ನ ಅಂಶವನ್ನೊಳಗೊಂಡ ಪುಟ್ಟ ಜೀವವೊಂದು ಈ ಪ್ರಪಂಚಕ್ಕೆ ಬರಲಿ ಎಂದು ಮನಸ್ಸು ಹಾರೈಸುತ್ತಿತ್ತು. ಅಮ್ಮನಿಗೆ ಮೊಮ್ಮಕ್ಕಳು ಬೇಕಾಗಿತ್ತು.. ಆಗ ನನ್ನ ಈ ನಿರ್ಧಾರ ಬಲವಾಯಿತು.."

"ಇದು ಕಾನೂನಿಗೆ ವಿರುದ್ಧವಾದ ಕೆಲಸ ಅಲ್ವಾ!.."

"ಕಾನೂನು ಒಪ್ಪದಿರುವ ಎಷ್ಟೋ ಸಂಗತಿಗಳು ದಿನ ನಿತ್ಯ ಜರುಗುತ್ತಿರುತ್ತವೆ. ಹೆಂಡತಿಯಿದ್ದೂ ಗಂಡ ಬೇರೊಬ್ಬ ಹೆಂಗಸಿನ ಸಹವಾಸವನ್ನು ಮಾಡ್ತಾನೆ.. ತೃಪ್ತಿ ಸಿಗದೆ ಗಂಡನಿಗೆ ತಿಳಿಯದಂತೆ ಬೇರೊಬ್ಬ ಗಂಡಸಿನಿಂದ ದೇಹ ಸುಖವನ್ನು ಅನುಭವಿಸುವ ಹೆಂಗಸರುಗಳಿದ್ದಾರೆ.. ಇಂಥ ಅನೈತಿಕ ಸಂಬಂಧಗಳಿಂದ, ಅತ್ಯಾಚಾರ, ಬಲಾತ್ಕಾರಗಳಿಗೆ ಬಲಿಯಾಗಿ ಬಸಿರಾಗಿ ಅಬಾರ್ಷನ್ ಮಾಡಿಸಿಕೊಳ್ಳುವವರಿದ್ದಾರೆ. ಇದೆಲ್ಲಾ ಅಪರಾಧ ತಾನೇ...?" ಇಲ್ಲಿ ಹಾಗೆ ಯಾವ ಕೊಳಕು ಸಂಬಂಧವೂ ಇಲ್ಲ,

"ಆದರೂ, ನೀನು ವಿದ್ಯಾವಂತೆಯಾಗಿ, ತಿಳುವಳಿಕೆಯುಳ್ಳವಳಾಗಿ..ಹೀಗೆ... ಮಾಡ್ಬಾರ್ದಾಗಿತ್ತು."

"ಎಲ್ಲಕ್ಕಿಂತ ಮೊದಲು ನಾನೊಂದು ಹೆಣ್ಣು ಭುಜೀ...ಅಮ್ಮ ಹೇಳಿದಂತೆ ನಿನ್ನನ್ನು ಮದುವೆಯಾಗಿ, ನಿನ್ನ ಮಕ್ಕಳಿಗೆ ತಾಯಿಯಾಗುವಂತಿದ್ದರೇ.. ಎಂಬ ಬಯಕೆ ಕಂಡೂ ಕಾಣದಂತೆ ಹೃದಯದಲ್ಲಿ ಉದಿಸಿದ್ದರೆ? ಅದು ತಪ್ಪು ಅಂತೀಯ? ಅತೃಪ್ತ ಬಯಕೆ ತಲೆ ಎತ್ತಿತು. ಒಳಗೊಳಗೇ ನಿನ್ನ ಬಗ್ಗೆ ಪ್ರೀತಿ ಇದ್ದೇ ಇತ್ತು.

"ಆದರೂ.. ಈ ವಿಧಾನವನ್ನು ನೀನು ಅನುಸರಿಸಬಾರದಾಗಿತ್ತು.. ನನಗೆ ಹೇಳ್ಬೇಕಾಗಿತ್ತು.." ನನ್ನ ಸ್ನೇಹಕ್ಕೆ ನೀನು ಅವಮಾನ ಮಾಡಿದೀಯ ಅಂತ ನಂಗೊತ್ತು.

"ಆದರೂ ನಾನು ಹೀಗೆ ಮಾಡಿದ್ದು ಸರಿಯಲ್ಲ, ಸರಿ ನಿನಗೆ ನಿಜವನ್ನು ತಿಳಿಸಿದ್ದಾಯಿತು. ಪೋಲಿಸರಿಗೆ ದೂರು ಕೊಡು.. ಕೇಸ್ ಹಾಕಿಸು.. ಜೈಲಿಗೆ ಕಳಿಸು.. ಶಿಕ್ಷೆ ಕೊಡಿಸು.. ಯಾವುದನ್ನೂ ಬೇಡ ಅನ್ನಲ್ಲ. "ಮಕ್ಕಳು ಜನ್ಮ ತಾಳಿವೆ, ಮುಂದೆ ಅವುಗಳ ಬಗ್ಗೆ ಹೇಳು.."

"ಅತ್ತೆಗೆ ತಿಳಿದರೆ ರಂಪ ಆಗ್ದೇ ಇರತ್ತಾ?.. ಅವರು ನಿನ್ನನ್ನ ಎಂದೂ ಕ್ಷಮಿಸುಲ್ಲ"

"ಹೌದು, ನನಗೆ ಯಾರ ಕ್ಷಮೆಯೂ ಇಲ್ಲ...ನಿನಗೆ ಈ ವಿಷಯ ತಿಳಿಯಲೇಬಾರದು. ನನ್ನ ಬಗ್ಗೆ ಕಠೋನಾಗ್ತೀಯ ಅಂತ ನಂಗೆ ಗೊತ್ತಿತ್ತು. ಮೊದಲು ಶ್ವೇತಾಳ ಅಹಂಕಾರವನ್ನು ಮಟ್ಟಹಾಕ್ಬೇಕು. ಅವಳಿಂದ ಮಗುವನ್ನು ಕಿತ್ಕೋಬೇಕು. ಆಗ ಈ ಕೇಸು ಇನ್ನೂ ಪ್ರಬಲವಾಗುತ್ತೆ...ಶಿಕ್ಷೆ ಗ್ಯಾರಂಟಿ...ಆದರೆ ಪುರಾವೆಗಳೆಲ್ಲಿವೆ?.."

"ಪುರಾವೆಗಳನ್ನು ನಾನು ಹೊಂದಿಸ್ತೀನಿ..."

"ಅಂದ್ರೇ.. ಇಷ್ಟೇನಾ ನಿನ್ನ ಪ್ರೀತಿ..? ನಿನ್ನ ಮಾನ ಹರಾಜಾದರೂ ಪರವಾಗಿಲ್ಲ ಅಲ್ವಾ...ಜೊತೆ ಜೊತೆಗೆ ನಿನ್ನ ಮುದ್ದಿನ ಮಡದಿಯ ಅಹಂಕಾರವೂ ಇಳಿಯುತ್ತೆ. ಊರಿಗೆಲ್ಲ ನಿನ್ನ ಪಲ್ಲವಿಗೆ ಮಕ್ಕಳಾಗುವ ಅರ್ಹತೆ ಇರಲಿಲ್ಲ ಅಂತ ತಿಳಿಯುತ್ತೆ.. ಅವಳು ಬದುಕ್ತಾಳಾ? ಅವಳ ಸಾವಿಗೆ ನೀನು ಕಾರಣವಾಗ್ತೀಯ."

"ಇವತ್ತೇ ಅವಳಿಗೆ ನಿಜ ಏನೂಂತ ತಿಳಿಸಿ ಬಿಡ್ತೀನಿ. ಅದೇನಾಗಿ ಹೋಗುತ್ತೋ ಆಗಿ ಹೋಗ್ಲಿ ನಾನು ಅದಕ್ಕೂ ಸಿದ್ಧ..." ಬೈಕ್‌ನ್ನು ಸ್ಟಾರ್ಟ್ ಮಾಡಿದ, ಕೂತ್ಕೋ...ನಿನ್ನ ಎದುರಿಗೇ ಎಲ್ಲಾ ಹೇಳಿ ಬಿಡ್ತೀನಿ. ಆ ನರ್ಸಿಂಗ್ ಹೋಂನವರಿಗೂ ನಮ್ಮ ಮನೆಯ ಡಾಕ್ಟರ ವಿಚಾರ ಗೊತ್ತಾಗಲಿ." ಅವಳು ಕಲ್ಲಿನಂತೆ ನಿಂತಿದ್ದಳು. "ಹತ್ತು.." ಕಿರುಚಿದ. ಅವಳು ಹತ್ತಿದಳು.

ಇವರಿಬ್ಬರನ್ನು ಕಂಡೊಡನೆ, ಕಾರಿಡಾರಿನ ಕಂಬಕ್ಕೊರಗಿ ನಿಂತಿದ್ದ ಮಂದಾಕಿನಿ ಧಾವಿಸಿ ಬಂದಳು. "ಮಗೂಗೆ ಜಾಂಡೀಸ್ ಅಂತೆ.. ಸ್ಪೆಷಲ್ ರೂಂಗೆ ಕರ್ಕೊಂಡು ಹೋಗಿದಾರೆ.. ಪಲ್ಲವಿ ಅಳ್ತಾ ಇದಾಳೆ.."

ಭುಜಂಗ ಓಡೋಡಿ ವಾರ್ಡಿನೊಳಕ್ಕೆ ಬಂದ. ಪಲ್ಲವಿ ನಿಶ್ಯಬ್ಧವಾಗಿ ಅಳುತ್ತಿದ್ದಳು. ಬಳಿಯಲ್ಲಿ ಕುಳಿತು ಸಮಾಧಾನ ಹೇಳಿದ. "ಡಾಕ್ಟರಿದಾರೆ. ನೋಡ್ತಾರೆ..ಮಗೂಗೆ ಏನೂ ಆಗುಲ್ಲ. ಹೆದರ್ಬೇಡ."

"ಅಲ್ಲರೀ ನನ್ನ ಮಗೂಗೇ ಯಾಕೆ ಹೀಗಾಗ್ಬೇಕು?.. ಶ್ವೇತಳ ಮಗು ಎಷ್ಟು ಆರೋಗ್ಯವಾಗಿದೆ ಅಲ್ವಾ? ಯಾಕೆ ಹೀಗಾಯ್ತು?"

"ಅವಳ ಮಗೂಗೆ ಏನಾಯ್ತು, ಏನಾಗ್ಲಿಲ್ಲ ಅಂತ ನಾನು ವಿಚಾರಿಸ್ಲಿಲ್ಲ. ನಿಂಗೂ ಗೊತ್ತಿಲ್ಲ.. ನಾನು ಡಾಕ್ಟರ ಹತ್ರ ಮಾತಾಡ್ಕೊಂಡು ಬರ್ತೀನಿ. ಅತ್ತೇ, ನೀವು ಇಲ್ಲೇ ಕೂತಿರಿ. ಅಳುಕ್ಕೆ ಬಿಡ್ಬೇಡಿ... ಅತ್ತರೆ ನಿನ್ನ ಆರೋಗ್ಯ ಕೆಡುಲ್ವಾ ಪಲ್ಲವೀ..." ಕಣ್ಣೊರೆಸಿದ.

"ನಂಗಂತೂ ದಿಕ್ಕೇ ತೋಚದಂತಾಗಿತ್ತು...ಹೇಮಾ ಬಂದಿದಾಳೆ. ನೀನು ಇನ್ನೇನೂ ಯೋಚ್ನೆ

ಮಾಡ್ಬೇಡ.. ಎಲ್ಲಾ ನೋಡ್ಕೋತಾಳೆ..'' ಮಂದಾಕಿನಿ ಧೈರ್ಯ ಹೇಳಿದಳು.

''ಹೌದಾ! ಹೇಮಾ ಬಂದಿದಾಳಾ? ಈಗ ಅವಳೆಲ್ಲಿ?'' ಕುತೂಹಲದಿಂದ ಕೇಳಿದಳು.

''ಡಾಕ್ಟರ ಹತ್ರ ಹೋಗಿದಾಳೆ..'' ಉದಾಸೀನದಿಂದ ಹೇಳಿದ.

''ಯಾಕ್ರೀ ಹೀಗೆ ಸಪ್ಪಗೆ ಮಾತಾಡ್ತೀರಿ! ಹೇಮ ಏನು ಹೇಳಿದ್ಲು? ಮಗೂಗೆ ಏನಾದ್ರೂ ಹೆಚ್ಚು ಕಡಿಮೆ ಆದ್ರೆ ನಾನಂತೂ ಬದುಕಿರುಲ್ಲ..''

''ಹುಚ್ಚು ಹುಚ್ಚಾಗಿ ಮಾತಾಡ್ಬೇಡ.. ನಾನು ಬಂದಿದೀನಲ್ಲ, ಎಲ್ಲಾ ಸರಿ ಹೋಗುತ್ತೆ..''

''ಇಲ್ಲಿ ಅನುಕೂಲ ಇಲ್ಲದೇ ಇದ್ರೆ, ಬೆಂಗಳೂರಿಗೇ ಹೋಗೋಣ. ಅಲ್ಲಿ ಹೆಸರಾಂತ ನರ್ಸಿಂಗ್ ಹೋಂಗಳಿವೆ. ಸ್ಪೆಷಲಿಸ್ಟ್‌ಗಳಿದಾರೆ..''

''ಡಾಕ್ಟರ್ ಏನಂತಾರೆ ಅಂತ ಮೊದಲು ನೋಡೋಣ. ನಾನು ಈಗ ಬಂದೆ'' ಎಂದು ಹೇಳಿ ಹೊರಕ್ಕೆ ನಡೆದ.. ಪಕ್ಕದ ವಾರ್ಡಿನ ಬಳಿ ಬರುತ್ತಿದ್ದ ಹೇಮಳನ್ನು ಕಂಡು ಅವಳಿಗೆ ಬೆನ್ನು ಮಾಡಿ ನಡೆದ. ಅವಳೂ ನಿಲ್ಲಲಿಲ್ಲ, ಸೀದಾ ಪಲ್ಲವಿ ಇದ್ದ ವಾರ್ಡಿಗೆ ಬಂದಳು.

''ಹಲೋ ಪಲ್ಲವೀ...ಹೇಗಿದೀರಿ!..ಏನಂತಾನೆ ನಮ್ಮ ರಾಜಕುಮಾರ?''

''ಮಗೂನ ನೀವು ನೋಡ್ಲಿಲ್ವಾ?..ಡಾಕ್ಟರು ಸಿಕ್ಕಿದ್ರಾ?..''

''ಇಲ್ಲ, ಅವರು ಅಲ್ಲಿರ್‍ಲಿಲ್ಲ, ಫೋನು ನಂಬರನ್ನು ತಗೊಂಡಿದೀನಿ.. ಮಾತಾಡ್ತೀನಿ, ನಿಮ್ಮ ವಿಷಯ ಹೇಳಿ...''

ಮಂದಾಕಿನಿ, ಮಗುವಿಗೆ ಜಾಂಡೀಸ್ ಆಗಿರುವ ವಿಷಯವನ್ನು ತಿಳಿಸಿದಳು. ಪಲ್ಲವಿ ಮತ್ತೆ ಅತ್ತಳು. ಮಂದಾಕಿನಿ ರೇಗಿದಳು. ''ನೀನಾದ್ರೂ ಧೈರ್ಯ ಹೇಳು ಹೇಮಾ.. ಜಾಂಡೀಸ್ ಅಂತ ತಿಳಿದಾಗ್ನಿಂದ ಅಳ್ತಾನೇ ಇದಾಳೆ..ಬಾಣಂತಿ ಅಳ್ಬಾರ್ದು.. ನಂಜಾಗುತ್ತೆ..''

''ನಂಗೆ ಏನಾದ್ರೂ ಪರವಾಗಿಲ್ಲ.. ಆದರೆ ನನ್ನ ಮಗು ಬೇಗ ಹುಶಾರಾಗ್ಬೇಕು..''

''ಖಂಡಿತಾ ಹುಶಾರಾಗುತ್ತೆ ಪಲ್ಲವೀ.. ಈ ಸಮಸ್ಯೆ ಹೊಸದಾಗಿ ಹುಟ್ಟಿದ ಅನೇಕ ಮಕ್ಕಳಿಗೆ ಬರುತ್ತೆ..ಒಂದೆರಡು ದಿನಗಳಲ್ಲಿ ಸರಿ ಹೋಗುತ್ತೆ. ವರಿ ಮಾಡ್ಕೋಬೇಡಿ..''

''ನನ್ನ ಸಮಾಧಾನಕ್ಕಾಗಿ ಹೇಳ್ತಿಲ್ಲ ತಾನೇ!..''

''ಇಲ್ಲ, ಒಬ್ಬ ಡಾಕ್ಟರಾಗಿ, ನನಗೆ ಗೊತ್ತಿರುವ ವಿಷಯವನ್ನು ಹೇಳ್ತಿದೀನಿ..ನೀವು ಅಪ್ಸೆಟ್ ಆಗ್ಬೇಡಿ.. ಭುಜಂಗನಿಗೆ ಬೇಜಾರಾಗುತ್ತೆ...ಅವನ ಮಗುವಿಗೆ ಏನೂ ಆಗುಲ್ಲ..''

''ಇವರಿಗೆ ಜವಾಬ್ದಾರೀನೇ ಇಲ್ಲ, ಬರೋದು ಎಷ್ಟು ತಡ ಮಾಡಿದ್ರು..''

''ನಾನೂ ಅವನೂ ಮಾತಾಡ್ತಾ ನಿಂತು ಬಿಟ್ಟೆವು. ಅದಕ್ಕೇ ಹೊತ್ತಾಯ್ತು.. ಸಾರೀ..ಆಂಟೀ, ನೀವು ಮನೆಗೆ ಹೋಗಿ ಬರೋದಾದ್ರೆ ಹೋಗ್ಬನ್ನಿ. ನಾನು ಸ್ವಲ್ಪ ಹೊತ್ತು ಇಲ್ಲಿರ್ತೀನಿ..''

''ಪರವಾಗಿಲ್ಲ ಹೇಮಾ.. ಇಲ್ಲಿ ಎಲ್ಲಾ ಅನುಕೂಲಗಳಿವೆ..ಇಲ್ಲೇ ಇರ್ತೀನಿ..''

"ಸರಿ, ನೀವು ಸ್ವಲ್ಪ ಹೊರಗಿರ್ತೀರಾ! ನಾನು ಸ್ವಲ್ಪ ಪರೀಕ್ಷೆ ಮಾಡ್ಬೇಕು" ಎಂದು ಹೇಳಿ ಮಂದಾಕಿನಿಯನ್ನು ಹೊರಕ್ಕೆ ಕಳಿಸಿದಳು. ಪಲ್ಲವಿ ಬೆವೆತಳು. ಬೆದರುಗಣ್ಣಿಂದ ನೋಡಿದಳು.

"ಹೆದರ್ಬೇಡ ಪಲ್ಲವೀ..ನಾನು ಈಗ ಯಾವ ಪರೀಕ್ಷೆಯನ್ನು ಮಾಡಬೇಕಾಗಿಲ್ಲ. ನನ್ನ ಭುಜಂಗನ ಮಗು ನಿನ್ನ ಹೊಟ್ಟೆಯಲ್ಲಿ ಬೆಳೆಯುತ್ತಿದೆ ಎನ್ನುವ ವ್ಯಾಮೋಹ ಹೆಚ್ಚಾಗಿತ್ತು. ಈಗ ಆ ವ್ಯಾಮೋಹ ಕಡಿಮೆ ಆಗಿದೆ. ಭುಜಂಗ ನನ್ನವನಲ್ಲ ಎನ್ನುವ ಸತ್ಯ ತಿಳಿದಿದೆ. ಅವನು ಅತಿಯಾಗಿ ನಿಮ್ಮನ್ನು ಪ್ರೀತಿಸ್ತಾನೆ ಅನ್ನೋ ವಿಚಾರವೂ ತಿಳಿದಿದೆ.."

"ಈಗ ನನಗ್ಯಾಕೆ ಇದನ್ನು ಹೇಳ್ತಿದೀರಿ?..ಇವರೇನಂದ್ರು?"

"ನಾನು ಇನ್ನೂ ಕೆಲವೇ ದಿನಗಳಲ್ಲಿ ಹೊರದೇಶಕ್ಕೆ ಹೊರಟು ಹೋಗ್ತೀನಿ. ಮತ್ತೆ ಈ ದೇಶಕ್ಕೆ ವಾಪಸ್ಸು ಯಾವಾಗ ಬರ್ತೀನೋ ಗೊತ್ತಿಲ್ಲ, ನನ್ನ ಭುಜಂಗನ್ನ, ಅವನ ಮಗುವನ್ನು ನೀನು ಚೆನ್ನಾಗಿ ನೋಡ್ಕೋಬೇಕು.. ಅವನು ನನ್ನನ್ನು ಮರೆಯಬೇಕು..."

"ಅಂದ್ರೇ...ಅವರು ಈಗಲೂ...ನಿಮ್ಮನ್ನು ಮರೆತಿಲ್ವಾ?" ಆತಂಕದಿಂದ ಕೇಳಿದಳು.

"ನಾನು ಅವನನ್ನು ತಿರಸ್ಕರಿಸಿದರೂ, ಅವನು ಬದಲಾಗಿಲ್ಲ, ನನ್ನ ಆಪ್ತ ಸ್ನೇಹಿತನಾಗಿದಾನೆ. ಇದು ನಿನಗೆ ಸಹಿಸುಲ್ಲ ಅಂತ ನಂಗೆ ಗೊತ್ತು.."

"ಹಾಗೇನಿಲ್ಲ.. ನನಗೆ ನಿಮ್ಮ ಬಗ್ಗೆ ಅಂಥ ಭಾವನೆಯೇನಿಲ್ಲ."

"ಅದು ಹಾಗೇನೇ.. ನನಗೂ ಸೈಕಾಲಜಿ ಗೊತ್ತಿದೆ. ಅವನು ಒಳ್ಳೆಯವನು. ಅವನ ಒಳ್ಳೆತನಕ್ಕೆ ಎಲ್ಲರೂ ಮೆಚ್ತಾರೆ.. ಕೆಲವೊಮ್ಮೆ ಮೋಸವೂ ಹೋಗ್ತಾನೆ.." ಬಾಗಿಲು ದಬ ದಬ ಸದ್ದಾಯಿತು. "ಯಾರೋ ಬಡೀತಿದಾರೆ..." ಎಂದು ಹೇಳಿ ಬಾಗಿಲನ್ನು ತೆರೆದಳು. ಭುಜಂಗ, ಆಚೆ ನಿಂತಿದ್ದ ಅವಳನ್ನು ಸರಿಸಿ ಒಳ ಬಂದ. ಅವನ ಮುಖದ ಕಳೆಯನ್ನು ಕಂಡು ಪಲ್ಲವಿ ಹೆದರಿದಳು. ಹಾಗೇ ಹಾಸಿಗೆಯ ಮೇಲೆ ಉರುಳಿದಳು. ಅವಳಿಗೆ ಪ್ರಜ್ಞೆ ತಪ್ಪಿತ್ತು.

"ಏನಾಯ್ತು? ಪಲ್ಲವಿ ಯಾಕೆ ಹೀಗೆ ಬಿದ್ದು ಬಿಟ್ಟಳು..ಸಿಸ್ಟರ್...ಸಿಸ್ಟರ್..ಬನ್ನಿ. ಡಾಕ್ಟ್ರನ್ನ ಕರ್‍ಕೊಂಡು ಬನ್ನಿ." ಕಿರುಚಿದ.

"ನಾನು ಏನಾಗಿದೆ ಅಂತ ನೋಡ್ತೀನಿ." ಮುಂದುವರೆದು ಹೇಮಾಳನ್ನು ತಡೆದ.

"ನೀನು ಮುಟ್ಬೇಡ ಅವಳನ್ನ" ಅವಳು ಹಿಂದಕ್ಕೆ ಸರಿದಳು. ಡ್ಯೂಟಿ ಡಾಕ್ಟರ್ ಗಡಬಡಿಸಿ ಬಂದಳು. ವಿವರಗಳನ್ನು ತಿಳಿದುಕೊಂಡಳು.

"ಏನೂ ಆಗಿಲ್ಲ, ಶೀ ಈಸ್ ಆಲ್‌ರೈಟ್...ವರಿ ಮಾಡ್ಕೋಬೇಡಿ..." ಎಂದು ಹೇಳಿ ಪರೀಕ್ಷಿಸಿದಳು. ಇನ್ನು ಕಾಲು ಗಂಟೆಗಳಲ್ಲಿ ಜ್ಞಾನ ಬರುತ್ತೆ. ಸರಿ ಹೋಗ್ತಾರೆ.. ಏನೋ ಟೆನ್ಷನ್‌ನಿಂದ ಹೀಗಾಗಿದೆ. ಫುಡ್ ಸ್ವಲ್ಪ ಜಾಸ್ತಿ ಕೊಡಿ" ಎಂದು ಹೇಳಿ ಹೊರಕ್ಕೆ ನಡೆದಳು.

"ನೀನು ಏನು ಹೇಳ್ದೆ ಅವಳ ಹತ್ರ!" ಹೇಮಾಳ ಕಡೆ ತಿರುಗಿ ರೇಗಿ ಕೇಳಿದ.

"ಏನೂ ಇಲ್ಲ, ನಾನೇನು ಹೇಳ್ಲಿ!..ನಿನ್ನ ಮುಖಾನ ನೋಡಿ ಗಾಬರಿಯಾದ್ಳು."

"ನೀನು ಆಚೆಗೆ ಹೋಗು. ಬಾಗಿಲನ್ನು ಯಾಕೆ ಹಾಕ್ಕೊಂಡಿದ್ದೆ! ಅತ್ತೇನ ಯಾಕೆ ಹೊರಕ್ಕೆ ಕಳಿಸ್ದೆ ಏನು ಮಾತಾಡ್ದೆ!... ನೀನೇ ಏನೋ ಹೇಳಬಾರದ್ದನ್ನು ಹೇಳಿದೀಯ.." ಗದರಿದ.

"ಏನೂ ಇಲ್ಲ ಅಂತ ಹೇಳಿದ್ನಲ್ಲ, ನನ್ನನ್ನು ನಂಬು..."

"ನನ್ನ ನಂಬಿಕೆಗೆ ನೀನು ತಕ್ಕವಳಲ್ಲ, ಮೋಸಗಾತಿ...ನೀನು ಹೊರಟು ಹೋಗು.."

"ಪ್ಲೀಸ್ ಭುಜಂಗ, ಇದು ಆಸ್ಪತ್ರೆ...ಇಲ್ಲಿ ನನ್ನ ಪರಿಚಯದವರಿದಾರೆ..."

"ಈಗ್ಲೇ ಇಲ್ಲಿಂದ ಹೊರಟು ಹೋಗು...ಮತ್ತೆ ಬರ್ಬೇಡ..." ಬಾಗಿಲತ್ತ ಕೈ ತೋರಿದ. ಅವಳ ಮುಖ ಕೆಂಪಾಗಿತ್ತು. ನಿಧಾನವಾಗಿ ಹೊರಕ್ಕೆ ಬಂದಳು. ನರ್ಸು ಮಗುವನ್ನು ಎತ್ತಿಕೊಂಡು ಬಂದಳು. ಗೊತ್ತಾಗದವಳಂತೆ ಹೇಮಾ, ಮತ್ತೊಂದು ದಿಕ್ಕಿನತ್ತ ನಡೆದಳು.

ಪಲ್ಲವಿಗೆ ಎಚ್ಚರ ಬರುವವರೆಗೂ ಭುಜಂಗ ಅಲ್ಲಿಯೇ ಸಮೀಪದಲ್ಲಿ ಕುಳಿತಿದ್ದ. ಅವಳು ಕಣ್ಣು ಬಿಟ್ಟೊಡನೆ ಕೈ ಹಿಡಿದ. ಅವಳು ಅತ್ತಿತ್ತ ಕಣ್ಣು ಹಾಯಿಸಿದಳು.

"ಹೇಮಾ ಹೊರಟು ಹೋದ್ಲಾ! ಇಷ್ಟು ಬೇಗ?" ಉಗುಳು ನುಂಗುತ್ತಾ ಕೇಳಿದಳು.

"ಅವಳಿಂದ ಇನ್ನೂ ಏನಾಗ್ಬೇಕಾಗಿದೆ?..ನಿಂಗೆ ಏನ್ಹೇಳಿದ್ಲು?"

"ನೀವು ಬಹಳ ಬೇಗ ಮೋಸ ಹೋಗ್ತೀರಿ ಅಂತ ಹೇಳಿದ್ಲು" ಪಲ್ಲವಿ ಕಿರು ನಗೆಯನ್ನು ನಕ್ಕು ಗಂಡನನ್ನು ತುಂಟತನದಿಂದ ನೋಡಿದಳು.

"ಹೌದು..ನಾನು ದಡ್ಡ, ಮೋಸ ಹೋಗ್ತೀನಿ. ಎಲ್ರೂ ನಂಗೆ ಮೋಸ ಮಾಡುವವರೇ.." ಕಟುವಾಗಿ ನುಡಿದ.

"ಯಾಕ್ರೀ ಹಾಗೆ ಕಟುವಾಗಿ ಮಾತಾಡ್ತೀರಿ..? ನೀವು ಒಳ್ಳೆಯವರು, ಅಂತಲೂ ಹೊಗಳಿದಳು. ಅವಳ ಮನದಲ್ಲಿ ಏನೂ ಕಪಟವಿಲ್ಲ ಅಂತ ಅರ್ಥ ಆಯ್ತು ನಂಗೆ.."

"ನೀನು ಎಂಥಾ ಭಾರಿ ಮೋಸ ಹೋಗಿದೀಯ ಅಂತ ನಿಂಗೆ ಗೊತ್ತಿಲ್ಲ" ಅಂತ ಹೇಳಬೇಕೆಂದುಕೊಂಡವನು, ಅವಳ ಕಡೆ ನೋಡಿ ಸುಮ್ಮನಾದ. ಅವಳು ಆಯಾಸಗೊಂಡಿದ್ದಾಳೆನಿಸಿತ್ತು.

"ಯಾಕ್ರೀ ಸುಮ್ಮನಾಗಿ ಬಿಟ್ರಿ? ನಾನು ಹೇಮನ್ನ ಹೊಗಳಿದೆ ಅಂತ ಆಶ್ಚರ್ಯ ಆಗ್ತಿದೆಯಾ? ಸಧ್ಯದಲ್ಲೇ ಅವಳು ಹೊರದೇಶಕ್ಕೆ ಹೊರಟು ಹೋಗ್ತಾಳಂತೆ...ಇನ್ನು ನನಗೆ ಅವಳಿಂದ ಏನಾಗ್ಬೇಕು!...ನಾನ್ಯಾಕೆ ದ್ವೇಷಿಸಲಿ!..ಇನ್ನೇನಿದ್ರೂ ನನ್ನ ಪ್ರಪಂಚವೇ ಬೇರೆ..."

"ನಿಜ ಏನೂಂತ ಗೊತ್ತಾದ್ರೆ, ನಿನಗಾಗಿರುವ ಮೋಸ ತಿಳಿದ್ರೆ, ಜೀವಮಾನವೆಲ್ಲಾ ಅವಳನ್ನು ದ್ವೇಷಿಸ್ತೀಯ.." ಅಂತ ಮನದಲ್ಲೇ ಅಂದುಕೊಂಡ.

"ಯಾಕ್ರೀ ಒಂಥರಾ ಇದೀರಿ.. ಗಂಡು ಮಗು ಹುಟ್ಟಿದೆ. ನಿಮಗೆ ಸಂತೋಷವೇ ಇಲ್ಲವಲ್ಲ.. ನಿಮ್ಮ ತಂಗಿಗೆ ಮಕ್ಕಳಾಗಲಿಲ್ಲ ಅಂತ ಬೇಸರಾನಾ?.. ಅವರಿಗೆ ವಿಷಯ ತಿಳಿಸಿದೀರಿ ತಾನೆ! ನೋಡ್ತಿರಿ. ಇನ್ನೊಂದು ವರ್ಷದೊಳಗೆ ಅವರಿಗೂ ಮಗುವಾಗುತ್ತೆ..

"ವಿಜಯಂಗೆ ಫೋನು ಮಾಡಿ ತಿಳಿಸಿದೆ ಅಂತ ಅಮ್ಮ ಹೇಳಿದ್ಲು.. ನಂಗ್ಯಾಕೋ ಆಯಾಸ ಆಗಿದೆ. ನಾನು ಮನೆಗೆ ಹೋಗಿ ಸ್ವಲ್ಪ ಹೊತ್ತು ರೆಸ್ಟ್ ತಗೋತೀನಿ. ಇಲ್ಲಿ ಅತ್ತೆ ಇರ್ತಾರೆ. ನೀನೂ ರೆಸ್ಟ್ ತಗೋ" ಎಂದು ಹೇಳಿ ಅವಳ ತಲೆಯನ್ನು ಸವರಿದ. ಅವನು ಆಚೆ ಹೋದ. ಮಂದಾಕಿನಿ ಒಳಕ್ಕೆ ಬಂದಳು. ಪಲ್ಲವಿ ಕಣ್ಣುಗಳನ್ನು ಮುಚ್ಚಿಕೊಂಡಳು. ಮಂದಾಕಿನಿಯ ಬಗ್ಗೆ ಮೊದಲಬಾರಿಗೆ, ಹಿತವಾದ ಭಾವನೆ ಸುಳಿಯಿತು. ಮಗುವಿನ ಆರೋಗ್ಯ ಸುಧಾರಿಸಿದ್ದುದು ಸಮಾಧಾನವನ್ನುಂಟು ಮಾಡಿತ್ತು.. ಆದರೆ ಭುಜಂಗ ಯಾಕೋ ಬದಲಾಗಿದ್ದಾನೆನಿಸಿತ್ತು.

* * *

ಭುಜಂಗನ ಹೃದಯ ಕುದಿದು ಹೋಗಿತ್ತು.. ಸ್ನೇಹಿತೆಯಂತೆ ಆದರಿಸಿ, ಸಹಾಯ ಮಾಡಿದ ತನ್ನೊಡನೆ ಇಂಥಾ ನೀಚ ಆಟ..? ಛೆ.. ಯಾರಿಗೂ ಹೇಳುವಂತಿಲ್ಲ. ಒಳಗೇ ಅನುಭವಿಸುವಂತಿಲ್ಲ. ಅಥವಾ ಬೇರೆಯವರಿಗೆ ಹೇಳಿದ್ರೆ ನಂಬ್ತಾರ್ಯೆ?.. ಶ್ವೇತಾ ಹೇಳಿದ್ದ ಸತ್ಯವೇ ಅಸಹ್ಯವೆನಿಸುವಂತಿತ್ತು.. ಈಗ ಅದನ್ನು ಮೀರಿಸಿದ್ದು.. ಪಲ್ಲವಿಯೊಡನೆ, ಇದೆಂಥಾ ಹುಡುಗಾಟ? ಹೇಮಾ ಒಳಗೊಳಗೇ ಪಲ್ಲವಿಯನ್ನು ದ್ವೇಷಿಸುತ್ತಿದ್ದಳೇನೋ?.. ಈಗ ಅವಕಾಶ ಸಿಕ್ಕಿದೆ.. ಪಲ್ಲವಿಗೆ ಸ್ನೇಹಿತೆಯಾಗಿ, ಶ್ವೇತಾ ಅನ್ಯಾಯ ಮಾಡಿದಳು ಅಂತ ಭಾವಿಸಿದ್ದೆ.. ಈಗ ಈ ಹೇಮಾಳ ಮೋಸ ಅದನ್ನು ಮೀರಿಸಿದ್ದು. ಶ್ವೇತಾಳಿಗೂ ಮೋಸ ಮಾಡಿದಾಳಲ್ಲ.. ಈ ವಿಷಯ ಶ್ವೇತಾಳಿಗೆ ತಿಳಿದರೆ ಏನನ್ನಿಸಬಹುದು?.. ಒಳಗೊಳಗೇ ಮೆರೆಯುತ್ತಿದ್ದಳಲ್ಲವೆ? ತಾನೇ ಭಾರಿ ಹೆಣ್ಣೆಂದು ಚಿದಾನಂದನಿಗೆ ದ್ರೋಹ ಮಾಡಿದಳಲ್ಲವೆ?.. ಚಿದಾನಂದ ನನಗಿಂತ ದಡ್ಡ. ಏನೂ ತಿಳಿಯದು ಎಂದುಕೊಳ್ಳುತ್ತಾ ಮನೆಗೆ ಬಂದ. ಮುಂಬಾಗಿಲಿಗೆ ಬರುತ್ತಿದ್ದಂತೆಯೇ ಅತ್ತೆಯ ಧ್ವನಿ ಕೇಳಿಸಿತ್ತು. ಅಲ್ಲೇ ಜಗುಲಿಯ ಮೇಲೆ ಕುಳಿತ. "ಈ ಸಾರಿ,.. ಊರಿಗೆ ಹೋಗುವ ಮೊದಲು ವಿಪರೀತ ಅತ್ತು ಬಿಟ್ಲು. ಎಂದೂ ಹೀಗೆ ಅತ್ತಿರ್ಲಿಲ್ಲ, ನಾನೂ ತುಂಬಾ ಅತ್ಬಿಟ್ಟೆ ಅತ್ತಿಗೇ.." ವೈದೇಹಿ ಸಾವಿತ್ರಿಯೊಡನೆ ಹೇಳಿದ್ದು ಕೇಳಿಸಿತ್ತು.

"ಏನೇನೋ ಸಂಕಟಗಳಿರುತ್ತವೆ ವೈದೇಹಿ. ನೀನೋ, ಬಹಳ ಚುಚ್ಚಿ ಚುಚ್ಚಿ ಮಾತಾಡ್ತೀಯ. ಸುಮ್ಮನೇ ಇರೋದೇ ಇಲ್ಲ.."

"ಏನ್ಮಾಡ್ಲಿ ಅತ್ತಿಗೇ, ಅವಳ ವಯಸ್ನೋರ್ಗೆಲ್ಲಾ ಮದುವೆಯಾಗಿದೆ. ಮಕ್ಕಳನ್ನು ಹೆತ್ತಿದಾರೆ.. ಎದೆ ಹಾಲನ್ನು ಕುಡಿಸೋದನ್ನು ಕಂಡಾಗ, ಏನೇನೋ ಆಗ್ದೇ ಇರುತ್ತಾ?.. ಮನಸ್ಸು ಚಂಚಲವಾಗ್ದೇ ಇರುತ್ತಾ? ಮನಸ್ಸು ಕೆರಳದೇ ಇರುತ್ತಾ? ಅವಳೂ ಹೆಣ್ಣು ಅಲ್ವಾ ? ಬಾಯಿಗೆ ಬಂದ ಹಾಗೆ ಬೈಯೋಣ ಅಂತ ಅನ್ಸುತ್ತೆ..ನನಗೆ ಇರೋಳು ಇವಳೊಬ್ಬಳೇ ಮಗಳು...ಏನೇನೋ ಆಸೆಗಳನ್ನು ಇಟ್ಕೊಂಡಿರ್ತೀವಿ ಅಂತ ಇವಳಿಗೆ ತಿಳೀದೇ ಹೋದ್ರೆ, ಇಷ್ಟು ಓದಿ ಏನು ಪ್ರಯೋಜನ?"

"ಮತ್ತೆ ಮತ್ತೆ ಅದೇ ರಾಗ ಹಾಡ್ತೀಯಲ್ಲ ವೈದೇಹಿ...ಅವಳೂ ಬದಲಾಗುವ ಕಾಲ ಬರಬಹುದು. ತಾಳ್ಮೆ ತಂದುಕೋ.."

"ಏನು ತಾಳ್ಮೆಯೋ?..ಪಲ್ಲವಿ ಯಾವಾಗ ಮನೆಗೆ ಬರ್ತಾಳೆ?.. ಮಂದಾಕಿನಿ ಮನೆಗೆ ಬಂದು, ಅವಳ ಸೊಸೇನ ನೋಡ್ಕೊಂಡ್ರೆ ಸಾಕಾಗಿದೆ. ಇವಳು ನನ್ನ ಮಗಳಲ್ಲ ; ಸೊಸೆಯಲ್ಲ,

ಇವಳ ಸೇವೇನ ನಾನ್ಯಾಕೆ ಮಾಡ್ಲಿ?'' ಸಾವಿತ್ರಿ ಜೋರಾಗಿ ನಕ್ಕಳು.

“ನಿಂಗೆ ಅಷ್ಟು ಬೇಸರವಾದ್ರೆ ಅವಳನ್ನು ನಮ್ಮ ಮನೆಗೇ ಕರ್ಕೊಂಡು ಬಂದ್ರಾಯ್ತು. ಹೇಗೂ, ಪಲ್ಲವಿ ಬಂದ್ಮೇಲೆ ಮಂದಾಕಿನಿ ಇಲ್ಲೇ ಮಗಳ ಜೊತೆ ಇರ್ತೀನಿ ಅಂತ ಅಂದರೂ ಅನ್ನಬಹುದು. “ಇಬ್ಬರನ್ನೂ ಒಟ್ಟಿಗೇ ನೋಡ್ಕೋತಾಳೆ..''

“ಇಷ್ಟು ವರ್ಷ ಮಗಳ ಚಿಂತೆಯೇ ಇರ್ಲಿಲ್ಲ ಇವಳಿಗೆ. ಈ ಸೊಸೆಯೋ ಮದುವೆಗೆ ಮೊದಲೇ ಬಸಿರಿಯಾದವಳು.. ಈ ಮಂದಾಕಿನಿಗೆ ಸಂಭ್ರಮವೋ ಸಂಭ್ರಮ.. ಎರಡೆರಡು ಮೊಮ್ಮಕ್ಕಳು.. ಹಿಗ್ಗಿ ಹೇಗ್ಹೋಗ್ಗಿಡು...''

“ಸದಾ ಹೀಗೇ ಗೊಣಗ್ತಾ ಇದ್ರೆ ನೆಮ್ಮದಿಯಿಂದ ಯಾವಾಗ ಇರ್ತೀಯ?..ಬಾಣಂತಿ ಸೇವೆ ಮಾಡಿದ್ರೆ ಪುಣ್ಯ ಬರುತ್ತೆ ಅಂತ ಹಿರಿಯೋರು ಹೇಳ್ತಾರೆ.. ಭುಜಂಗ, ಚಿದಾನಂದ ಇಬ್ಬರೂ ಹೊರಗಿನೋರಲ್ಲ...ನಿನ್ನ ಮಕ್ಕಳಂತೆಯೇ.. ಅವರ ಮಕ್ಕಳು ನಿನ್ನ ಮೊಮ್ಮಕ್ಕಳೇ.. ಆಡಿಸು.. ನಿಂಗೂ ಬೇಸರ ಕಳೆಯುತ್ತೆ..'' ಸಾವಿತ್ರಿ ಸಮಾಧಾನ ಹೇಳುವಂತೆ ಹೇಳಿದಳು.

ಭುಜಂಗ ಮುಖವನ್ನು ಸಿಂಢರಿಸಿ ಎದ್ದ. ಈ ಅತ್ತೇ ಈಗಲೇ ಏಳುವಂತೆ ಕಾಣುವುದಿಲ್ಲ. ಅವರ ಎದುರಿಗೆ ಹೋಗಲು ತನಗೆ ಮನಸ್ಸಿಲ್ಲ. ಚಿದಾನಂದನನ್ನು ಕರೆದುಕೊಂಡು ತೋಟಕ್ಕೆ ಹೋದರೆ, ಈ ಯೋಚನೆಗಳು ಸ್ವಲ್ಪ ಮಟ್ಟಿಗೆ ಕಡಿಮೆಯಾಗಬಹುದೆಂದುಕೊಂಡು ಅತ್ತೆಯ ಮನೆಗೆ ಬಂದ. “ಚಿದಾನಂದ..ಚಿದಾನಂದಾ...'' ಎಂದು ಕೂಗುತ್ತಾ ಬಾಗಿಲನ್ನು ತಳ್ಳಿಕೊಂಡು ಒಳಗೆ ಬಂದ...ಹಾಲಿನಲ್ಲಿ ಹಾಕಿದ್ದ ಮಂಚದ ಮೇಲೆ ಕುಳಿತು, ಮಗುವಿಗೆ ಹಾಲೂಡಿಸುತ್ತಿದ್ದ ಶ್ವೇತಾ, ಮಾದಕವಾಗಿ ನಕ್ಕು ಸೆರಗನ್ನು ಸರಿಪಡಿಸಿಕೊಂಡಳು. ಇವನು ಅವಳಿಗೆ ಬೆನ್ನು ಮಾಡಿ ಮುಂಬಾಗಿಲಿಗೆ ಬಂದ. ಅವಳು ಮಗುವನ್ನೆತ್ತಿಕೊಂಡು ಅಲ್ಲಿಗೇ ಬಂದಳು.

“ಮಗೂನ ನೋಡ್ಬೇಕು ಅಂತ ಬಂದ್ರಾ!.. ನಂಗೊತ್ತಿತ್ತು.. ನಿಮ್ಮ ಮಗು ಅನ್ನೋ ಸೆಳೆತ ಇದ್ದೇ ಇರುತ್ತೆ ಅಂತ...ಎತ್ಕೋತೀರಾ?..'' ತೊಡೆಯ ಮೇಲಿಂದ ಮಗುವನ್ನೆತ್ತಿದಳು.

“ಸೆಳೆತವೂ ಇಲ್ಲ, ಸ್ವಾರ್ಥವೂ ಇಲ್ಲ. ಚಿದಾನಂದನನ್ನು ಕರೆಯೋಣ ಅಂತ ಬಂದೆ. ಮನೇಲಿ ಇದಾನಾ.. ಇದ್ದರೆ ಕರೀರಿ.'' ಹೊರಡಲಿದ್ದವನನ್ನು ಕುರಿತು ಹೇಳಿದಳು.

“ಚಿದಾನಂದ ಮನೇಲಿ ಇಲ್ಲ ಅನ್ನೋದನ್ನ ತಿಳ್ಕೊಂಡೇ ನೀವು ಬಂದಿದೀರಿ.. ಸುಳ್ಯಾಕೆ ಹೇಳ್ತೀರಿ.. ಸಂಕೋಚ ಯಾಕೆ?.. ನಿಮ್ಮ ಮಗೂನ ನೀವು ನೋಡೋಕೆ ಅಪ್ಪಣೆ, ನೆವ ಯಾಕೆ?'' ಅವಳು ಮೋಹಕವಾಗಿ ನಕ್ಕಾಗ ಅವನು ಬೆವೆತ.

“ನೀವು ಹೀಗೆಲ್ಲಾ ಮಾತಾಡಿ ನನ್ನನ್ನ ಆಕರ್ಷಿಸುಕ್ಕೆ ನೋಡ್ಬೇಡಿ. ನೀವು ಪಲ್ಲವಿಯ ಸ್ನೇಹಿತೆ ಅಂತ ನಾನು ನಿಮ್ಮನ್ನು ಗೌರವಿಸಿದೆ.. ಈಗ ನನಗೆ ಯಾವ ಭಾವನೆಯೂ ಇಲ್ಲ..''

“ಭಾವನೆ ಹೇಗಿದ್ರೇನು! ಸಂಬಂಧ ಇದ್ದೇ ಇದೆಯಲ್ಲ, ನನ್ನ ನಿಮ್ಮ ಬೆಸುಗೆ, ಈ ಮಗುವಿನ ರಕ್ತದಲ್ಲಿ ಇದ್ದೇ ಇದೆಯಲ್ಲ..'' ಎನ್ನುತ್ತಾ ಮಗುವಿಗೆ ಮುತ್ತಿಟ್ಟಳು.

“ನೀವು ತಪ್ಪು ಕಲ್ಪನೆಯಲ್ಲಿರುವುದು ಬೇಡ ಅಂತ ಒಂದು ಸತ್ಯವನ್ನು ಹೇಳಲೇ ಬೇಕು..

ಇಲ್ಲಿದ್ರೆ ನೀವು ಈ ಕಲ್ಪನೆಯ ಲೋಕದಲ್ಲೇ ಇದ್ದು ಬಿಡ್ತೀರಿ.. ಅಲ್ಲಿಂದ ನಿಮ್ಮನ್ನು ಹೊರಕ್ಕೆ ತರಲೇ ಬೇಕು.. ನಿಮಗೂ ಆಘಾತವಾಗುವುದು ಖಂಡಿತಾ.."

'ನಾನು ನನ್ನ ಕಲ್ಪನೆಯ ಲೋಕದಲ್ಲಿ ಸುಖವಾಗಿದೀನಿ ಭುಜಂಗ್...ನಾನು ಚೈತ್ರಳಂತೆ ಸೂಕ್ಷ್ಮಳಲ್ಲ..ಅವಳ ಕನಸು ಚೂರಾಗಬಹುದು ಎನ್ನುವ ಕಾರಣದಿಂದ ಹೇಮಾ ಹೇಳಿದ ಪ್ರಯೋಗಕ್ಕೆ ಒಪ್ಪಿ ನಾನು ನಿಮಗೆ ಸಹಾಯಕಳಾಗಿದೀನಿ.. ಅದಕ್ಕೆ ನಾನು ಯಾವ ಸಂಭಾವನೆಯನ್ನು ತೆಗೆದುಕೊಂಡಿಲ್ಲ. ನೀವು ನನಗೆ ಕೃತಜ್ಞರಾಗಿರ್ಬೇಕು.."

"ನೀವೂ ಮೋಸ ಹೋಗಿದೀರಿ ಅಂತ ನಿಮಗೆ ಗೊತ್ತಿಲ್ಲ. ಆಗ ನಿಮ್ಮ ಕಲ್ಪನೆ, ಕನಸು ಎಲ್ಲವೂ ಚೂರಾಗುತ್ತದೆ...ನೀವು ಅಂದುಕೊಂಡಿರುವಂತೆ ಈ ಮಗು ನಿಮ್ಮದಲ್ಲ, ಹೇಮಾಳದು. ಅವಳ ಮಗುವಿಗೆ ನೀವು 'ಬಾಡಿಗೆ ತಾಯಿ' ಅಷ್ಟೇ.. ಹೇಮಾ ಕೇಳಿದರೆ ಈ ಮಗುವನ್ನು ನೀವು ಕೊಡಲೇ ಬೇಕಾಗುತ್ತೆ...ತಿಳ್ಕೊಳ್ಳಿ..." ಖಾರವಾಗಿ ನುಡಿದ.

"ನನ್ನ ಮೇಲಿನ ಕೋಪಕ್ಕೆ ಏನೇನೋ ಮಾತಾಡ್ತೀಡಿ ಭುಜಂಗ್. ನಾನು ನಂಬುಲ್ಲ."

"ನಂಬದಿದ್ರೆ ನಂಗೇನೂ ನಷ್ಟವಿಲ್ಲ.. ಹೇಮಾಳ ಮಾತಿಗೆ ಒಪ್ಪಿ ಪ್ರಯೋಗಕ್ಕೆ ಒಪ್ಪಿಕೊಂಡಿರಿ...ಈಗ ಮಗು ಬೇಕು ಅಂತಂದ್ರೆ, ಅದಕ್ಕೂ ಒಪ್ಪಿಕೊಳ್ಳಬೇಕಾಗುತ್ತೆ.. ನೋಡ್ತಿರಿ..."

"ಇಲ್ಲ ಈ ಮಗುವನ್ನು ನಾನು ಯಾರಿಗೂ ಕೊಡುವುದಿಲ್ಲ ನೀವು ಕೇಳಿದರೆ ನಿಮಗೂ ಕೊಡುವುದಿಲ್ಲ ನಾನು ಹೊತ್ತು, ಹೆತ್ತಿರುವ ಈ ಮಗು ನನ್ನದು...ಈ ಮಗುವಿನಿಂದ ದೂರ ಖಂಡಿತಾ ಇರಲಾರೆ.." ಮಗುವನ್ನು ಎದೆಗೆ ಒತ್ತಿಕೊಂಡಳು.

"ಕಟ್ಟಿಕೊಂಡ ಚಿದಾನಂದನ ಮೇಲೆ ನಿಮಗೆ ಪ್ರೀತಿ ಇಲ್ಲ, ಗೌರವವಿಲ್ಲ ನಿಮ್ಮದಲ್ಲದ ಈ ಮಗುವಿನ ಮೇಲೆ ಇರುವ ಈ ವ್ಯಾಮೋಹವನ್ನು ಹುಚ್ಚು ಅಂತ ಅಂತಾರೆ.. ಇಂಥ ಅನ್ಯಾಯದ ಸಂಬಂಧಗಳಿಗೆ ಅರ್ಥವೇ ಇಲ್ಲ ಎಲ್ಲವನ್ನೂ ಇಲ್ಲಿಗೇ ಮುಗಿಸಿಬಿಡಿ.. ನಿಮ್ಮ ಪಾಡಿಗೆ ನೀವು ವಾಪಸ್ಸು ಹೊರಟು ಹೋಗಿ...ಇಲ್ಲಿರಬೇಡಿ...ಎಲ್ಲವನ್ನೂ ಮರೆತು ಬಿಡ್ತೀನಿ.. ಪಲ್ಲವಿಗಾಗಿ"

"ಯಾಕೆ ಭಯಾನ ಭುಜಂಗ್.. ನಾನು ಯಾವ ಆಸ್ತಿಯನ್ನೂ ಕೇಳುವುದಿಲ್ಲ ಹೋಗು ಅಂತ ಮಾತ್ರ ಹೇಳ್ಬೇಡಿ.. ಆ ಅಧಿಕಾರ ನಿಮಗಿಲ್ಲ..ನೀವು ಹೇಳಿದ ಹಾಗೆ ನಾನು ಕೇಳಬೇಕಾಗಿಲ್ಲ."

"ಚಿದಾನಂದನಿಗೆ ನಿಜ ತಿಳಿದ ದಿನ, ಎಲ್ಲಾ ಸಂಬಂಧವೂ ಮುಗಿದು ಹೋಗುತ್ತದೆ.."

"ಹಾಗೆಲ್ಲಾ ಹೇಳ್ಬೇಡಿ...ಚಿದಾನಂದನಿಗೆ ಈ ವಿಷಯ ತಿಳಿಯಬಾರದು. ನಾನು ತಪ್ಪು ಮಾಡಿದೀನಿ...ಅದನ್ನು ನಿಮಗೆ ಹೇಳಿದೀನಿ. ದಯವಿಟ್ಟು ಕ್ಷಮಿಸಿ ಬಿಡಿ...ನನ್ನ ಪಾಡಿಗೆ ಬಿಟ್ಟು ಬಿಡಿ.. ಈ ರಹಸ್ಯ ನಮ್ಮಿಬ್ಬರಲ್ಲೇ ಇರಲಿ."

"ಕ್ಷಮೆ?.. ನೀವಿಬ್ಬರೂ ಸೇರಿ ಮಾಡಿರುವ ಈ ಕೃತ್ಯಕ್ಕೆ ಕ್ಷಮೆಯೇ ಇಲ್ಲ ನೀವಂತೂ ಹೊರಗಿನವರು. ಮನೆಯವಳಾಗಿ ಹೇಮಾ ಈ ರೀತಿ ಅಪರಾಧ ಮಾಡ್ತಾಳೆ ಅಂತ ನಾನಂದುಕೊಂಡಿರಲಿಲ್ಲ..ಅದಕ್ಕೇ ನೀವು ಕಾರಣ.." ಪಲ್ಲವಿಯ ಸ್ನೇಹಿತೆಯಾಗಿದ್ದೂ ಅವಳ ವಿಷಯವನ್ನೆಲ್ಲಾ ಹೇಮಾಳಿಗೆ ಯಾಕೆ ಹೇಳಿದ್ರಿ?..ನೀವು ಪಲ್ಲವಿಗೆ ದ್ರೋಹ ಮಾಡಿದ್ರಿ. ಹೇಮಾ

ನಮಗೆಲ್ಲರಿಗೂ ಮಾಡಿದ್ಲು. ನಿಮ್ಮ ಗರ್ಭದಲ್ಲಿ, ಪಲ್ಲವಿಯ ಗರ್ಭದಲ್ಲಿ ಬೆಳೆದ ಮಗು ಹೇಮಾಳದು.. ಅದನ್ನು ಅವಳೇ ಹೇಳಿದಾಳೆ.. ಅವಳನ್ನು ನಾನು ಈ ಜನ್ಮದಲ್ಲಿ ಕ್ಷಮಿಸುವುದಿಲ್ಲ.'' ಅವಳು ಕೆಟ್ಟ ಮುಖ ಮಾಡಿದರು.

"ಅವರ‍್ಯಾಕೆ ಹೀಗೆ ಮಾಡ್ತಾರೆ ?..ನನಗೆ ನಂಬಿಕೆ ಬರ್ತಿಲ್ಲ.'' ಧ್ವನಿ ಕೆಟ್ಟಿತ್ತು.

"ಅದನ್ನ ಅವಳನ್ನೇ ಕೇಳಿ...'' ಎಂದು ಹೇಳಿ ಅಲ್ಲಿಂದ ಹೊರಟು ಬಿಟ್ಟ. ಶ್ವೇತಾ ಮೂಕಳಂತೆ, ಬಾಗಿಲಲ್ಲೇ ನಿಂತಿದ್ದಳು. ಕೆಲವು ನಿಮಿಷಗಳ ನಂತರ, ಚಿದಾನಂದ ಬಂದ. ಬಾಗಿಲಲ್ಲಿ ಮಗುವನ್ನೆತ್ತಿಕೊಂಡು ನಿಂತಿದ್ದವಳನ್ನು ಕಂಡು ಕಣ್ಣರಳಿಸಿದ.

"ಬಾಗಿಲಲ್ಯಾಕೆ ನಿಂತಿದೀಯ..? ದೊಡ್ಡಮ್ಮ ಮನೇಲಿಲ್ವಾ!..''

"ಇಲ್ಲ, ಭುಜಂಗನ ಮನೆಗೆ ಹೋಗಿದಾರೆ. ಭುಜಂಗ ನಿಮ್ಮನ್ನು ಕೇಳ್ಕೊಂಡು ಬಂದಿದ್ರು.. ಭುಜಂಗ ಹೇಳಿದ್ದನ್ನೇ ಯೋಚಿಸುತ್ತಾ ಅವನನ್ನು ಕಳಿಸಲು ನೋಡಿದಳು.''

"ಏನಂತೆ! ನಾನೀಗ್ಲೇ ಹೋಗಿ ಕೇಳ್ಕೊಂಡು ಬರ್ತೀನಿ..''

"ಹಾಗೇ ನಿಮ್ಮ ದೊಡ್ಡಮ್ಮನ್ನ ಕಳಿಸಿ. ಹೊಟ್ಟೆ ಹಸೀತಿದೆ..'' ಎಂದು ಹೇಳಿ ಒಳಕ್ಕೆ ನಡೆದಳು. ಚಿದಾನಂದ ಭುಜಂಗನ ಮನೆಯ ಕಡೆಗೆ ನಡೆದ. ಭುಜಂಗ ಹೇಳಿದ್ದು ನಿಜವಿರಬಹುದೇ ಎಂದು ಯೋಚಿಸುತ್ತಾ ಮಗುವಿನ ಮುಖವನ್ನೇ ನೋಡತೊಡಗಿದಳು.

* * *

ಚಿದಾನಂದ, ಭುಜಂಗ ಒಟ್ಟಿಗೇ ಕುಳಿತು ಊಟ ಮಾಡಿದರು. ಭುಜಂಗ ಹೆಚ್ಚು ಮೌನವಾಗಿರುವುದನ್ನು ಸಾವಿತ್ರಿ ಗಮನಿಸಿದಳು. "ಯಾಕೋ ಭುಜೀ, ಚಿಂತೆಯಲ್ಲಿರುವ ಹಾಗನ್ನುತ್ತೆ, ನಾನು ಶಾಸ್ತ್ರಿಗಳನ್ನು ಕೇಳ್ದೆ ಮಗು ಹುಟ್ಟಿರುವ ಗಳಿಗೆ, ತಿಥಿ, ವಾರ ಎಲ್ಲಾ ಪ್ರಶಸ್ತವಾಗಿದೆಯತೆ. ಯಾವ ಸಮಸ್ಯೆಯೂ ಇಲ್ಲ ಅಂತಂದ್ರು...ಗರುಡ ಮಚ್ಚೆ ಇರೋದು ಬಹಳ ಒಳ್ಳೇದು. ಮಗು ತುಂಬಾ ಮುಂದೆ ಬರುತ್ತೆ ಅಂತಂದ್ರು...ನೀನೇನೂ ಆತಂಕ ಪಡೋದೇ ಬೇಡ...''

"ಭುಜಂಗ ದುರು ದುರು ತಾಯಿಯನ್ನೇ ನೋಡಿದ. "ಗರುಡ ಮಚ್ಚೆ! ಗರುಡ ಮಚ್ಚೆ! ಯಾರಿಗೆ ನೋಡಿದ್ರೂ ಅದೊಂದೇ ಕಾಣೋದು. ಏನೂ ಒಳ್ಳೇದಾಗುಲ್ಲ ತಿಳ್ಕೋ...'' ರೇಗಿದ. ತಾಯಿ ಅವಾಕ್ಕಾದಳು. ಚಿದಾನಂದ ಬೆರಗಾಗಿ ಅವನ ಕಡೆ ನೋಡಿದ. ಈ ರೂಪ ಹೊಸದಾಗಿ ಕಂಡಿತ್ತು.

"ಯಾಕೆ ಹೀಗೆ ಸಿಡುಕ್ತೀಯೋ.. ಅವರು ಹೇಳಿದ್ದನ್ನ ಹೇಳ್ದೆ. ನಿಂಗೂ ಗರುಡ ಮಚ್ಚೆ ಇದ್ಯಲ್ಲಾ...ನಿನಗೇನಾಗಿದೆ ಹೇಳು.. ದಿವಿನಾಗಿದೀಯಲ್ಲ..''

"ಅಮ್ಮಾ ಸ್ವಲ್ಪ ಸುಮ್ನೇ ಇರ್ತೀಯಾ.. ಬೇಕಾದ್ದು ಬೇಡವಾದ್ದು ಎಷ್ಟೋ ಸಮಸ್ಯೆಗಳು ಕಾಡ್ತಿವೆ.. ನೀನ್ಯಾಕೆ ಶಾಸ್ತ್ರ ಕೇಳ್ದೆ..?''

"ಏನೋ ಆದರಲ್ಲೇನು ತಪ್ಪು? ನನಗೆ ಅಷ್ಟೂ ಸ್ವಾತಂತ್ರ್ಯವಿಲ್ವಾ?...ನೀನೋ ಊರವರ ಸಮಸ್ಯೇನಲ್ಲ ತಲೆ ಮೇಲೆ ಹೊತ್ಕೋತೀಯ, ಅದಕ್ಕೇ ಹೀಗೆ ಸಮಸ್ಯೆ.. ಹೋಗ್ಲಿ ನಿಧಾನವಾಗಿ ಊಟ ಮಾಡು. ನಾನು ಮಾತನ್ನೇ ಆಡುಲ್ಲ.." ಎನ್ನುತ್ತಾ ಮೌನವನ್ನು ಧರಿಸಿದಳು. ತಾಯಿ ಬೇಸರಗೊಂಡಳೆಂದುಕೊಂಡ. ಊಟ ಮುಗಿಸಿ ಕೈ ತೊಳೆದು ಎದ್ದರು. ಚಿದಾನಂದನೇ ತಟ್ಟೆಗಳನ್ನು ತೆಗೆದು ಗೋಮೆ ಹಚ್ಚಿ ನೆಲವನ್ನು ಒರೆಸಿದ.

"ನೀನ್ಯಾಕೆ ಮಾಡ್ತೀಯಪ್ಪಾ? ನಾನು ಮಾಡ್ತೀನಿ ಬಿಡು.." ಎಂದು ಸಾವಿತ್ರಿ ಬಾಯಿ ಮಾತಿಗೆ ಹೇಳಿದಳು. ಭುಜಂಗ ಷರಟನ್ನು ಧರಿಸಿದ."

"ಸ್ವಲ್ಪ ತೋಟದ ಕಡೆಗೆ ಹೋಗಿ ಬರ್ತೀನಿ" ಎಂದ.

"ಒಂದು ಗಳಿಗೆ ಸುಧಾರಿಸ್ಕೋಳ್ಬಾರ್ದೇನಪ್ಪಾ..? ಊಟ ನಿದ್ದೆ ಇಲ್ಲದೇ ತಿರುಗ್ತೀಯ"

"ಬೇಗ ಬರ್ತೀನಿ" ಎಂದಷ್ಟೇ ಹೇಳಿದ. ಚಿದಾನಂದ ಅವನೊಡನೆ ಹೆಜ್ಜೆ ಹಾಕಿದ. ಸ್ವಲ್ಪ ದೂರ ನಡೆ ನಂತರ ಚಿದಾನಂದ ಕೇಳಿದ.

"ಬೇಸರ ಮಾಡ್ಕೋಬೇಡಿ ಭುಜಂಗ್...ನನ್ನಿಂದ ಏನಾದ್ರೂ ಕೆಲಸ ಆಗಬೇಕಾಗಿದ್ರೆ ಹೇಳಿ.. ನನಗೋಸ್ಕರ ಎಷ್ಟು ಮಾಡಿದೀರಿ? ನೀವು ಯಾಕೋ ಆತಂಕಗೊಂಡಿರುವಂತೆ ಅನ್ಸುತ್ತೆ.."

"ಹಾಗೇನಿಲ್ಲ ಚಿದಾನಂದ್...ಏನೇನೋ ವಿಷಯಗಳು ತಲೇನ ಕೆಡ್ಸಿವೆ.."

"ಬೆಳಿಗ್ಗೆ ನನ್ನನ್ನ ಹುಡುಕ್ಕೊಂಡು ಬಂದಿದ್ರಂತೆ ಶ್ವೇತಾ ಹೇಳಿದ್ಲು" ಭುಜಂಗ ಸರ್ರನೆ ಅವನ ಕಡೆ ತಿರುಗಿದ.. ಶ್ವೇತಾ ಎಲ್ಲವನ್ನು ಹೇಳಿರಬಹುದೇ ಎಂಬ ಸಂದೇಹ ಕಾಡಿತು. ಈ ಶ್ವೇತಾ, ನಂಬಿಕೆಗೆ ಅರ್ಹಳಲ್ಲ, ಒಂದಲ್ಲ ಒಂದು ದಿನ ಇವನಿಗೆ ಎಲ್ಲವನ್ನು ಹೇಳಬಹುದು, ಏನೇನು ಹೇಳುವಳೋ? ಬರೀ ಸುಳ್ಳುಗಳನ್ನೇ ಹೇಳಿದರೂ ಇವನಿಗೆ ಗೊತ್ತಾಗುವುದಿಲ್ಲ ಅಂತಂದುಕೊಂಡು ಹೇಳಿದ.

"ಏನೇನೋ ವಿಚಾರಗಳು ನಡೆದಿದೆ ಚಿದಾನಂದ್...ನಿಮಗೆ ಹೇಗೆ ಹೇಳ್ಬೇಕೋ ನಂಗೆ ಗೊತ್ತಾಗ್ತಿಲ್ಲ.. ಒಂಥರಾ ಸುಳಿಯಲ್ಲಿ ಸಿಕ್ಕಿ ಬಿದ್ದು ಬಿಟ್ಟಿದೀನಿ.. ದಿಕ್ಕೇ ತೋಚ್ತಿಲ್ಲ.."

"ಅಂಥಾದ್ದೇನಾಯ್ತು ಭುಜಂಗ್.. ನನಗೆ ಹೇಳಬಹುದಾದ್ರೆ ಹೇಳಿ..."

"ನೀವೂ ಈ ಮನೆಯವರೇ..ಆದರೆ ವಿಷಯ ಕೇಳಿದ್ರೆ ನಿಮಗೆ ಏನನ್ನಿಸುತ್ತೋ ನಂಬಿಕೆ ಬರುತ್ತೊ ಇಲ್ವೋ...ಹೇಳ್ಬೇಕೋ ಬೇಡ್ವೋ ಅಂತ ಕೂಡಾ ಗೊತ್ತಾಗ್ತಿಲ್ಲ.."

"ನಿಮ್ಮ ಬಗ್ಗೆ ಗೌರವವಿದೆ...ನಿಮ್ಮ ಬಗ್ಗೆ ನಂಬಿಕೆ ಇದೆ... ಹೇಳಿ ಪರವಾಗಿಲ್ಲ."

ಇಬ್ಬರೂ, ಒಂದು ಕಡೆ, ಹೆಚ್ಚು ಜನ ಸಂಚಾರವಿಲ್ಲದ ಕಡೆ ಕುಳಿತರು. ಚಿದಾನಂದ, ಭುಜಂಗ ಏನು ಹೇಳುವನೋ ಎಂಬಂತೆ ಕುತೂಹಲದಿಂದ ಕಾದ, ಭುಜಂಗ ಅತ್ತಿತ್ತ ನೋಡಿ, ಮಾತುಗಳನ್ನು ಹುಡುಕಿ ನುಡಿದ.

"ಮುಂಚಿನಂತೆ, ಮಕ್ಕಳಿಲ್ಲದ ದಂಪತಿಗಳು ಮಕ್ಕಳಾಗಲಿಲ್ಲ ಅಂತ ಕೊರಗಬೇಕಾಗಿಲ್ಲ, ದತ್ತು

ತೆಗೆದುಕೊಳ್ಳಬೇಕಾಗಿಲ್ಲ..ಡಾಕ್ಟರ್‌ಗಳು ಹೊಸ ಹೊಸ ಸಂಶೋಧನೆಗಳನ್ನು ನಡೆಸಿದಾರೆ. ಪ್ರಯೋಗಗಳನ್ನು ಮಾಡಿದಾರೆ. ಕೃತಕವಾಗಿ ಗರ್ಭಧಾರಣೆ ಮಾಡಿಸಿ, ತಾಯಿಯಾಗುವಂತೆ ಮಾಡುತ್ತಾರೆ.. ಬಾಡಿಗೆ ತಾಯಂದಿರೂ ಸಿಗುತ್ತಾರೆ...ನಿಮಗೂ ತಿಳಿದಿರಬಹುದು..''

ಚಿದಾನಂದ ತಲೆ ತಗ್ಗಿಸಿದ.. ''ಅಮ್ಮನೇ ಚೈತ್ರಂಗೆ ಬಾಡಿಗೆ ತಾಯಿ...ಈ ವಿಷಯ ನಿಮಗೂ ಗೊತ್ತೇ ಇತ್ತು ಅಲ್ವಾ! ಅದರಿಂದ ಏನಾದ್ರೂ ಸಮಸ್ಯೆ ಆಗಿದೆಯಾ?''

''ಈಗ ನಾನು ಹೇಳ್ತಾ ಇರೋದು ಪಲ್ಲವಿಯ ಬಗ್ಗೆ ಅಲ್ಲ, ಆ ಸಮಯದಲ್ಲಿ ನಿಮ್ಮ ತಾಯಿ ಒಪ್ಪಿಯೇ ಕೃತಕವಾದ ರೀತಿಯಲ್ಲಿ ಗರ್ಭಿಣಿಯಾದರು..ಎಲ್ಲರ ಸಮ್ಮತವಿತ್ತು.''

''ಚೈತ್ರ ಇವತ್ತಿಗೂ ಅಮ್ಮನನ್ನು ಗೌರವಿಸುವುದಿಲ್ಲ, ಈ ಬಗ್ಗೆ ಅಮ್ಮನಿಗೆ ಕೊರಗಿದೆ..''

''ಹೌದು. ಪಲ್ಲವಿಗೆ ಏನೋ ರೋಷ, ಏನೋ ದ್ವೇಷ...ಎಲ್ಲಾ ಸರಿಯಾಗಿದ್ದು ನಿಜ ತಿಳಿದರೂ, ಪಲ್ಲವಿಗೆ ತನ್ನ ಜನ್ಮದ ಬಗ್ಗೆ ಅಸಂತೋಷ.. ಈಗ ಆ ಕೊರಗು ಕಡಿಮೆ ಆಗಿದೆ..''

''ಈಗ್ಲೂ ಚೈತ್ರ ಹೀಗೇ ಆಡಿದರೆ ಅದರಲ್ಲಿ ಅರ್ಥವಿಲ್ಲ, ನಾನು ಅವಳ ಹತ್ರ ಮಾತಾಡ್ತೀನಿ. ಅಮ್ಮಂಗೆ ಏನೋ ಆಸೆ...ಈಗ್ಲಾದ್ರೂ ಈ ಸಂಬಂಧ ಒಪ್ಪಿಗೆಯಾಗಬಹುದು ಅಂತ. ಆದರೆ ಈ ವಿಷಯ ಬೇರೆ ಯಾರಿಗೂ ಗೊತ್ತಿಲ್ಲ ಅಲ್ವಾ!''

''ಇಲ್ಲ, ಈಗ ಆ ಸಮಸ್ಯೆ ಅಲ್ಲ, ಬೇರೆಯೇ ಒಂದು, ಹೊಸ ಸಮಸ್ಯೆಗಳು ಹುಟ್ಟಿಕೊಂಡಿವೆ. ಒಂದಲ್ಲ ಎರಡು..ಹೇಮಾ ಹೀಗೆ ಮಾಡ್ತಾಳೆ ಅಂತ ನಾನಂತೂ ಅಂದುಕೊಂಡಿರ್ಲಿಲ್ಲ.. ಶ್ವೇತಾ ಕೂಡಾ ಶಾಮೀಲಾಗಿದಾಳೆ.. ಇಬ್ಬರೂ ಸೇರಿ ಪಲ್ಲವಿಗೆ ಮುಚ್ಚು ಮರೆ ಮಾಡಿದಾರೆ. ಅವಳಿಗೆ ತಿಳಿದರೆ, ಖಂಡಿತಾ ಹುಚ್ಚಿಯಾಗಿ ಬಿಡ್ತಾಳೆ..'' ಚಿದಾನಂದ ಸುಮ್ಮನೇ ನೋಡಿದ ಭುಜಂಗನೇ ಮಾತನ್ನು ಮುಂದುವರಿಸಿದ.

''ಪಲ್ಲವಿಗೆ ತಾನೂ, ತನ್ನ ಸ್ವಂತ ತಾಯಿಯಂತೆ, ಬಂಜೆ ಆಗಿ ಬಿಡ್ತೀನೇನೋ ಅನ್ನುವ ಸಂದೇಹ ಪ್ರಾರಂಭವಾದದ್ದೇ ಇಷ್ಟಕ್ಕೆಲ್ಲಾ ಕಾರಣ ಆಯ್ತು..''

''ಆದರೆ ಅಂಥಾ ಸಮಸ್ಯೆಯೇನೂ ಬರಲೇ ಇಲ್ಲ ಅಲ್ವಾ?''

''ಇಲ್ಲ, ಹಾಗೆ ಹೇಳಿದ್ದು ಹೇಮಾ.. ನಾನು ಅದನ್ನು ನಂಬಿದೆ. ನನಗೆ ತಿಳಿಯದಂತೆ, ಕೃತಕವಾದ ರೀತಿಯಲ್ಲಿ ಪಲ್ಲವಿಗೂ, ಶ್ವೇತಾಳಿಗೂ ಗರ್ಭಧರಿಸುವಂತೆ ಮಾಡಿದ್ದು ಹೇಮಾ...ಈ ವಿಷಯ ಶ್ವೇತಾಳಿಗೆ ಗೊತ್ತಿತ್ತು...ಎರಡೂ ಪ್ರನಾಳ ಶಿಶುಗಳು! ಚಿದಾನಂದ ಎದ್ದ.

''ಅಂದರೇ..? ಶ್ವೇತಾಳ ಮಗುವಿಗೆ ತಂದೆ ನಾನಲ್ಲ ಅಂತ ಹೇಳ್ತಿದೀರಾ?..''

''ಹೌದು, ಈ ವಿಷಯ ತಿಳಿದರೆ, ನಿಮಗೆ ಆಘಾತವಾಗದೇ ಇರುತ್ತಾ! ಆದರೆ ಇದು ನಿಜ.. ಇದನ್ನು ಹೇಮಾಳೇ ಹೇಳಿದ್ದು.. ನಿಮ್ಮೊಡನೆ ಸಂಬಂಧ ಬೆಳೆಸಿದರೂ ಶ್ವೇತಾ.. ಗರ್ಭಿಣಿಯಾಗಿರಲಿಲ್ಲ... ಹೇಮಾ ಸಂದರ್ಭವನ್ನು ದುರುಪಯೋಗ ಪಡಿಸಿಕೊಂಡಿದಾಳೆ..''

''ಮಗುವಿನ ತಂದೆ ಯಾರು ಅಂತ ನಾನು ಕೇಳುವುದಿಲ್ಲ ಭುಜಂಗ್.. ನಾನು ಊಹಿಸಬಲ್ಲೆ. ಆದರೆ ಹೇಮ ಹೀಗೆ ಮಾಡ್ಬಾರ್ದಾಗಿತ್ತು.. ಮನೆಯೋರ್ಗೆ ಮೋಸ? ಛೇ... ಇದೆಂಥಾ ವಿಕೃತ ಆಸೆ !''

"ಇದರಲ್ಲಿ ನನ್ನ ತಪ್ಪು ಏನೂ ಇಲ್ಲ ಚಿದಾನಂದ್.. ಯಾವ ವಿಷಯವೂ ನನ್ನ ಅರಿವಿಗೆ ಬಂದಿರಲಿಲ್ಲ. ಪಲ್ಲವಿ ಗರ್ಭವತಿಯಾಗದೇ ಇರೋಕೆ ಕಾರಣ, ನಾನು ಇದ್ದರೂ ಇರಬಹುದು ಎನ್ನುವ ಸಂದೇಹದಿಂದ ನನ್ನನ್ನು ಅನೇಕ ಪರೀಕ್ಷೆಗೆ ಒಳಪಡಿಸಿದ್ದರು.. ಆದರೆ ಹೇಮಾ ಇಷ್ಟು ಕೆಳ ಮಟ್ಟಕ್ಕೆ ಇಳಿಯುತ್ತಾಳೆ ಅಂತ ನಾನಂದುಕೊಂಡಿರಲಿಲ್ಲ."

ಚಿದಾನಂದ ಎದ್ದು ಅತ್ತಿತ್ತ ತಿರುಗಾಡಿದ. ತಲೆಗೂದಲಲ್ಲಿ ಕೈಯಾಡಿಸಿಕೊಂಡ.

"ಶ್ವೇತಾ ಬಹಳ ದೊಡ್ಡ ತಪ್ಪು ಮಾಡಿದಾಳೆ. ನನಗೆ ಒಂದ್ಮಾತು ತಿಳಿಸಿದ್ದರೆ, ನಾನು ಎಚ್ಚರ ವಹಿಸ್ತಿದ್ದೆ. ನಿಮಗೂ ಎಚ್ಚರಿಕೆ ಹೇಳ್ತಿದ್ದೆ." ಅವನ ದನಿ ಕೆಟ್ಟು ಹೋಗಿತ್ತು.

"ಹೇಮಾ ಮೊದಲು, ಪಲ್ಲವಿಯ ಬಗ್ಗೆ ವಿಷಯವನ್ನು ತಿಳಿದುಕೊಳ್ಳಲು ಅವಳನ್ನು ಕರೆಸಿ, ಅವಳಿಗೆ ದುಡ್ಡಿನ ಆಸೆಯನ್ನು ತೋರಿಸಿ ಈ ಪ್ರಯೋಗಕ್ಕೆ ಒಪ್ಪಿಸಿರಬಹುದು.

"ಶ್ವೇತಾಳ ಬಳಿ ಯಾವ ಹಣವೂ ಇದ್ದಂತಿಲ್ಲ ಚೈತ್ರನ್ನ ಕೇಳ್ಬೇಕು ಅಂತ ಆಗ ಈಗ ಹೇಳ್ತಿದ್ಲು. ನಾನೇ ಬೇಡ ಅಂತ ಅಂದಿದ್ದೆ."

"ಇರಬಹುದು, ಶ್ವೇತಾಳಿಗೆ ಹಣ ಸಿಗದೇ ಇರಬಹುದು. ಆದರೆ ಹೇಮಾ ಪಲ್ಲವಿಯ ಹತ್ರ ಲಕ್ಷಗಟ್ಟಳೆ ದುಡ್ಡನ್ನು ಪಡೆದಿದಾಳೆ.. ಏಕೆ ತಗೊಂಡ್ಲೋ? ಏನು ಮಾಡಿದ್ಲೋ?"

"ಯಾಕೆ ಅಂತ ಗೊತ್ತಾಗಲೇ ಇಲ್ವಾ ? ಈ ಪ್ರಯೋಗಗಳಿಗೆ ಇಷ್ಟು ಖರ್ಚಾಗುತ್ತಾ?"

"ಈ ಪ್ರಯೋಗಕ್ಕೆ ಎಷ್ಟು ಖರ್ಚು ಮಾಡಿದಳೋ.. ಯಾರ್‍ಯಾರಿಗೆ ಎಷ್ಟೆಷ್ಟು ಕೊಟ್ಟಳೋ ಅದು ಅವಳಿಗೇ ಗೊತ್ತು.. ಇದರಲ್ಲಿ ಅವಳ ಗಂಡನ ಕೈವಾಡವೂ ಇರಬಹುದು.. ಕೆಲವು ಡಾಕ್ಟರ್ಸ್ ಅವಳಿಗೆ ಸಹಾಯ ಮಾಡಿದಾರೆ ಅಂತ ಹೇಳಿದ್ಲು"

"ಗಂಡನಾ?...ಹೇಮಾ ಯಾವಾಗ ಮದುವೆಯಾದ್ಲು?..ನಂಗೆ ಗೊತ್ತಾಗ್ಲೇ ಇಲ್ಲ.."

"ಮದುವೆ ಆದದ್ದು ಇತ್ತೀಚೆಗೆ.. ಆದರೆ ಗೆಳೆಯನೊಬ್ಬ ಮೊದಲ್ನಿಂದ ಇದ್ನಂತೆ.. ಆ ಕಾರಣದಿಂದಲೇ ನನ್ನ ಅವಳ ಮದುವೆ ಮುರಿದದ್ದು ಆದರೆ, ಇವತ್ತಿಗೂ ಅತ್ತೆಗೆ ಈ ವಿಷಯ ಗೊತ್ತಿಲ್ಲ...ಅವಳ ಮದುವೆಗೆ ನಾನು ಸಾಕ್ಷಿ ಆಗಿದೀನಿ.. ಈಗಲೇ ಯಾರಿಗೂ ತಿಳಿಸುವುದು ಬೇಡ ಅಂತ ಹೇಳಿದ್ಲು, ನಾನು ಒಪ್ಪಿದ್ದೆ.. ಈಗ ನನ್ನ ತಪ್ಪು ಏನೂಂತ ಅರಿವಾಗಿದೆ.."

"ನೀವು ಒಳ್ಳೆಯವರು ಭುಜಂಗ್, ನಿಮಗೇ ಇಂಥಾ ಫಜೀತಿಗಳು ಬರುತ್ತಲ್ವಾ.."

"ಈಗ ನಿಮಗೂ ಫಜೀತಿ ಒದಗಿದೆ ಚಿದಾನಂದ್.. ಈಗ ನೀವು ಏನ್ಮಾಡ್ತೀರಿ?.."

"ಹೇಮಾಳ ಮೇಲೆ ಕಂಪ್ಲೆಂಟ್ ಕೊಡೋಣ...ಇಬ್ಬರೂ ಶಿಕ್ಷೆಯನ್ನು ಅನುಭವಿಸಲಿ"

"ಗಿರೀಶನನ್ನು ನೋಡಿದಾಗ ಮರುಕ ಹುಟ್ಟಿತ್ತು. ಹೇಮಾಳ ಆದರ್ಶದ ಬಗ್ಗೆ ಹೆಮ್ಮೆ ಅಂತ ಅನ್ನಿಸಿತ್ತು. ಅವನು ಆಕ್ಸಿಡೆಂಟ್‌ನಲ್ಲಿ ಕಾಲುಗಳನ್ನು ಕಳೆದುಕೊಂಡಿದಾನೆ. ಹಾಗೇ ತನ್ನ ಪುರುಷತ್ವವನ್ನು ಕಳೆದುಕೊಂಡಿದಾನಂತೆ.. ಹೇಮಾ ಹೇಳಿಕೊಂಡಳು.."

"ಸುಳ್ಳಿರಬಹುದು, ಹಣವನ್ನು ಕೀಳುವ ಸಂಚು ಇರಬಹುದು. ಹೇಗಾಯ್ತಂತೆ?"

"ಡೆಲ್ಲೀಲಿ ಬಾಂಬ್ ಸ್ಫೋಟಗೊಂಡಾಗ, ಆದ ಆಕ್ಸಿಡೆಂಟ್‌ನಲ್ಲಿ ಹೀಗಾಯ್ತಂತೆ. ಇವಳು ಅವನನ್ನು ಪ್ರೀತಿಸ್ತಿದ್ಲು. ಅವನೂ ಡಾಕ್ಟರ್.. ಆದರೆ, ಈಗ ಅವನು, ಇವಳ ಮೇಲೆ ಅವಲಂಬಿತನಾಗಿದಾನೆ. ಇವಳು ವಿದೇಶಕ್ಕೆ ಕರ್ಕೊಂಡು ಹೋಗ್ತಾಳಂತೆ.. ಪಲ್ಲವಿ ಧನ ಸಹಾಯ ಮಾಡಲು ಒಪ್ಪಿಕೊಂಡಳು. ಆದರೆ ಇವಳು ಪಲ್ಲವಿಗೇ ತಿಳಿಯದಂತೆ ಏನೇನೋ ಮಾಡಿಬಿಟ್ಟಳು. ನನಗೆ ಈಗ ಹೇಮಾಳ ಯಾವ ಮಾತಿನ ಮೇಲೂ ನಂಬಿಕೆ ಇಲ್ಲ. ಎಲ್ಲಾ ನಾಟಕವಿರಬಹುದು ಅಂತ ಅನ್ನಿಸ್ತಿದೆ.. ಇವಳಿಗೆ ಮಕ್ಕಳನ್ನು ಸೃಷ್ಟಿಸುವ ಆಸೆ ಯಾಕೆ ಹುಟ್ಟಿತೋ.. ದೊಡ್ಡ ತಪ್ಪು ಮಾಡಿದಳು."

"ಅವಳಿಗೆ ಈಗ ಪಶ್ಚಾತ್ತಾಪವಾಗಿರಬಹುದೋ! ಏನೋ ಈಗ ನಿಮ್ಮ ಮೇಲೆ ಆಸೆ ಹುಟ್ಟಿರಬಹುದು. ಆದರೂ ಅವಳು ಮಾಡಿದ್ದು ತಪ್ಪು."

"ಅದನ್ನೇ ನಾನು ಹೇಳ್ತಾ ಇರೋದು. ಗಿರೀಶನಿಂದ ಮಕ್ಕಳಾಗುವುದು ಸಾಧ್ಯವಿಲ್ಲ ಅಂತ ತಿಳಿದೂ ಅವನನ್ನೇ ಮದುವೆಯಾಗಿದಾಳೆ. ಹಣವನ್ನು ಕಿತ್ಕೊಂಡಿದಾಳೆ. ಈಗ ಎರಡೆರಡು ಗಂಡು ಮಕ್ಕಳಾಗಿವೆ.. ತನ್ನ ಮಕ್ಕಳು ತನಗೆ ಬೇಕು ಅಂತ ಕೇಳಬಹುದು. ಹಾಗೇನಾದ್ರೂ ಹಗರಣವಾದರೆ, ಪಲ್ಲವಿಯ ಹೃದಯ ಒಡೆದು ಹೋಗುತ್ತದೆ. ನನಗೆ ಅದೇ ಚಿಂತೆ ಆಗ್ತಿದೆ."

"ಶ್ವೇತಾಳನ್ನು ಒಪ್ಪಿಸಿ, ಈ ಮಗುವನ್ನು ಹೇಮಾಳಿಗೆ ಕೊಟ್ಟರೆ? ಸರಿಯಾಗುತ್ತಾ?"

"ಶ್ವೇತಾ ಒಪ್ತಾಳೆ ಅಂತ ಅನ್ಸುತ್ತಾ..? ಇದು ಅವಳದ್ದೇ ಮಗು ಅಂತ ತಿಳ್ದಿದಾಳೆ."

"ನಾನು ಅವಳ ಹತ್ರ ಮಾತಾಡ್ತೀನಿ."

"ಆದರೆ ಪಲ್ಲವಿಗೆ ಯಾವ ವಿಷಯವೂ ತಿಳಿಯಕೂಡದು. ಅನಾಹುತವಾಗಿ ಬಿಡುತ್ತೆ.."

"ನೀವು ಚಿಂತೆ ಮಾಡ್ಬೇಡಿ.. ನಾನು ಶ್ವೇತಾಳ ಬಾಯಿ ಮುಚ್ಚಿಸ್ತೀನಿ.."

"ನನಗೊಂದು ಸಂದೇಹ ಕಾಡುತ್ತೆ ಚಿದಾನಂದ್, ನಿಜ ಏನೂಂತ ತಿಳಿದ್ಮೇಲೆ ನಾವು ನಮ್ಮ ನಮ್ಮ ಮಕ್ಕಳನ್ನು ಪ್ರೀತಿಯಿಂದ ಬೆಳೆಸುಕ್ಕೆ ಆಗದೇ ಹೋಗಬಹುದು. ಆದ್ದರಿಂದ ಹೇಮಾಳಿಗೆ ಮಕ್ಕಳನ್ನು ಕೊಟ್ಟು ಬಿಡುವುದೇ ಸರಿ ಅಂತ ಅನ್ಸುತ್ತೆ. ಮೊದಲು ಹೇಮಾಳ ಹತ್ರ ಮಾತಾಡಿ, ನಿಜ ಏನೂಂತ ತಿಳ್ಕೊಂಡು ಮುಂದುವರೆಯಬೇಕು. ನಾನು ಹೇಮಾಳನ್ನು ಬಹಳ ಕಟುವಾಗಿ ಅಂದು ಬಿಟ್ಟಿದೀನಿ. ಈಗ ಅವಳ ಹತ್ರ ಮಾತಾಡುವ ಮನಸ್ಸೇ ಇಲ್ಲ. ಸ್ನೇಹವೂ ಇಲ್ಲ ಸಂಬಂಧವೂ ಇಲ್ಲ, ಅವಳ ಮನಃಸ್ಥಿತಿಯೂ ಸರಿ ಇಲ್ಲ...ನಾನಂತೂ ಗೊಂದಲದಲ್ಲಿ ಮುಳುಗಿ ಹೋಗಿದೀನಿ.. ಏನ್ಮಾಡ್ಬೇಕು ಅಂತ ಯೋಚಿಸುವ ವಿವೇಚನೆಯೂ ಹೊರಟು ಹೋಗಿದೆ.. ಆದರೂ ಒಂದಲ್ಲ ಒಂದು ದಿನ ಇತ್ಯರ್ಥವಾಗ್ಬೇಕು. ನನಗೆ ನಿಮ್ಮ ಸಹಕಾರ ಬೇಕು."

"ನಿಮ್ಮ ತುಮುಲ ನಂಗೆ ಅರ್ಥವಾಗುತ್ತೆ ಭುಜಂಗ್.. ಯಾಕೆ ಹೀಗಾಯ್ತು, ಇದಕ್ಕೆ ಪರಿಹಾರವೇನು ಅಂತ ಶಾಸ್ತ್ರ ಕೇಳಿದರೆ?.. ಕವಡೆ ಶಾಸ್ತ್ರದಲ್ಲಿ ನಿಜ ಗೊತ್ತಾಗುತ್ತಂತೆ.."

"ಶಾಸ್ತ್ರದಿಂದ ಪರಿಹಾರವಾಗುವ ಸಮಸ್ಯೇನಾ ಇದು ಚಿದಾನಂದ್? ಅವರು ಹೇಳುವ ಉಪಾಯದಿಂದ ಎಲ್ಲಾ ಸರಿ ಹೋಗುತ್ತೆ ಅಂತ ಭಾವಿಸ್ತೀರಾ!.. ನನಗೆ ಮಗುವಿನ ಮುಖ

ನೋಡುವುದು ಕೂಡಾ ಬೇಡ ಅಂತ ಅನ್ನಿಸ್ತಿದೆ.. ಈ ತುಮುಲಗಳಿಗೆ ಯಾವ ಪರಿಹಾರವೂ ಇಲ್ಲ... ವಿಚಿತ್ರ ಸುಳಿಯೊಳಗೆ ಸಿಕ್ಕಿಸಿಬಿಟ್ಟಿದಾಳೆ ಹೇಮ."

"ಇದರಲ್ಲಿ ಮಕ್ಕಳ ತಪ್ಪು ಏನಿದೆ ಭುಜಂಗ್..? ಕೃತಕವಾದ, ಪ್ರಯೋಗದಿಂದ ಪ್ರಯೋಗಶಾಲೆಯಲ್ಲಿ ಪ್ರನಾಳಗಳಲ್ಲಿ ತಮ್ಮ ಜನ್ಮ ಆಗಿದೆ ಅಂತ ಕೂಡಾ ತಿಳಿಯದ ಅಮಾಯಕತನದ ಅವಸ್ಥೆ ಮಕ್ಕಳದು. ಏನಿದ್ರೂ ಈ ತೊಳಲಾಟ ನಮ್ಮದು ಅಷ್ಟೇ.. ಅದಕ್ಕೇ ಪರಿಹಾರ ಬೇಕಾಗಿದೆ.."

"ಈ ತೊಳಲಾಟಕ್ಕೆ ಕೊನೆಯೇ ಇಲ್ಲ ಅಂತ ಅನ್ನುತ್ತೆ.. ಎಲ್ಲಿಗಾದರೂ ಹೊರಟು ಹೋಗೋಣ ಅಂತ ಅನ್ನುತ್ತೆ.. ಆದರೆ, ಅಮ್ಮ, ಅಪ್ಪ, ಪಲ್ಲವಿಯ ಮುಖ ಕಣ್ಣೆದುರಿಗೆ ಬರುತ್ತೆ. ನಾನೇನ್ಮಾಡ್ಲೀ?"

"ನೀವೇ ಹೀಗೆ ಆಡಿದ್ರೆ ನಾನೇನು ಹೇಳ್ಲಿ? ಶ್ವೇತಾಳ ವರ್ತನೆಗೆ ಮರುಳಾಗಿ ಅವಳೊಡನೆ ಸಂಬಂಧ ಬೆಳೆಸಿದ್ದು ತಪ್ಪು.. ಅವಳ ಗರ್ಭದಲ್ಲಿ ಬೆಳೆಯುತ್ತಿರುವುದು ನನ್ನ ಮಗು ಅಂತ ತಿಳಿದದ್ದು ಮೂರ್ಖತನ. ಮದುವೆಯಾದ ದಿನದಿಂದ, ನಾನೂ ಅವಳೂ ಹತ್ತಿರವಾಗಿಯೇ ಇಲ್ಲ.. ಅವಳಿಂದ ನನಗೆ ವಂಚನೆಯಾಗಿದೆ. ಅವಳೊಡನೆ ಬಾಳ್ವೆ ನಡೆಸುವ ಆಸೆ ನನಗಿಲ್ಲ.. ಅವಳು ಹೊರಟು ಹೋಗಲಿ.. ಇದನ್ನು ಅವಳಿಗೆ ಹೇಳಿ ಬಿಡ್ತೀನಿ.."

"ದುಡುಕಬೇಡಿ ಚಿದಾನಂದ್.. ನಿಧಾನವಾಗಿ ಯೋಚಿಸಿ ಈ ನಿರ್ಧಾರ ಸರಿ ಅಂತ ಇಬ್ಬರಿಗೂ ಅನ್ನಿಸಬೇಕು.. ಆದರೆ ನಿಮ್ಮಷ್ಟು ಸಲೀಸಾಗಿ ನನ್ನಿಂದ ಇರಲು ಆಗುತ್ತಿಲ್ಲ. ಪಲ್ಲವಿಯನ್ನು ಮನಸಾರೆ ಪ್ರೀತಿಸಿದೆ. ಈಗ ಅವಳಿಗೆ ಯಾವ ರೀತಿಯಿಂದಲೂ ನೋವನ್ನುಂಟು ಮಾಡಲು ನನಗಿಷ್ಟವಿಲ್ಲ.. ಏನೇನು ಪರಿಣಾಮಗಳನ್ನು ಎದುರಿಸಬೇಕಾಗುತ್ತದೋ ಅಂತ ದಿಗಿಲಾಗುತ್ತದೆ. ನಮ್ಮಮ್ಮ, ನಿಮ್ಮಮ್ಮ, ಮೊಮ್ಮಕ್ಕಳು ಬಂದಿರುವ ಸಂಭ್ರಮವನ್ನು ತುಂಬಿಕೊಳ್ಳುತ್ತಿದಾರೆ. ಸಧ್ಯದಲ್ಲೇ ನಾಮಕರಣದ ಸಮಾರಂಭ ಮಾಡ್ಬೇಕು ಅಂತ ಅಪ್ಪ ಅಮ್ಮನಿಗೆ ಆಸೆ.. ಅಜ್ಜಿಗೆ ಕನಕಾಭಿಷೇಕದ ಚಿಂತೆ.. ಈಗ ಈ ಮಗುವಿನ ಬಗ್ಗೆ ಯಾರಿಗೆ ಏನೇ ಹೇಳಿದ್ರೂ ನಂಬಿಕೆ ಬರುಲ್ಲ ತಮಾಷೆ ಅಂತ ಅನ್ನುತ್ತೆ. ಹೇಮಾಳನ್ನು ಕರೆಸಿ, ಡಂಗೂರ ಹೊಡೆಸುವ ಮನಸ್ಸೂ ಇಲ್ಲ."

* * *

ಈ ತೊಳಲಾಟದಲ್ಲಿ ಕೆಲವು ದಿನಗಳು ಕಳೆದವು. ಚಿದಾನಂದನೂ ಬದಲಾಗಿರುವುದನ್ನು ಶ್ವೇತಾ ಗಮನಿಸಿದ್ದಳು. ಅವಳಿಗೆ ಒಳಗೊಳಗೇ ಭಯ ಪ್ರಾರಂಭವಾಗಿತ್ತು. ಪಲ್ಲವಿ ಮನೆಗೆ ಬಂದಿದ್ದಳು. ಪಲ್ಲವಿ ಅವಳ ಲೋಕದಲ್ಲಿ ವಿಹರಿಸುತ್ತಿರುವುದನ್ನು ಭುಜಂಗ ಗಮನಿಸಿದ್ದ. ಹೆಚ್ಚು ಹೆಚ್ಚು ತೋಟದಲ್ಲೇ ಕಾಲ ಕಳೆಯಲಾರಂಬಿಸಿದ್ದ. ಊಟಕ್ಕೆ, ನಿದ್ದೆಗೆ, ಸ್ನಾನಕ್ಕೆ ಮನೆಗ ಬರುತ್ತಿದ್ದ. ಪಲ್ಲವಿ ಮುನಿಸಿನಿಂದ ಕೇಳಿದ್ದಳು.

"ಈಚೀಚೆಗೆ ನಿಮಗೆ ನನ್ಮೇಲೆ ಪ್ರೀತೀನೇ ಇಲ್ಲ. ನಮಗಿಂತ ತೋಟದ ಕೆಲಸವೇ ಹೆಚ್ಚಾಯ್ತಾ? ಮಗು ಜೊತೆ ಆಡ್ಬೇಕು ಅಂತ ಅನ್ನಿಸೋದೇ ಇಲ್ವಾ?"

"ಅದನ್ನೆಲ್ಲಾ ನಿನಗೇ ಬಿಟ್ಟು ಬಿಟ್ಟಿದೀನಿ. ಹಂಬಲಿಸಿ ಹೆತ್ತಿರೋಳು ನೀನು.."

"ನನ್ನ ಹಂಬಲಕ್ಕೆ ನಿಮ್ಮ ಬೆಂಬಲವೂ ಇತ್ತಲ್ವಾ?.. ಇಲ್ದಿದ್ರೆ ಈ ಪೋರ ಹುಟ್ತಿದ್ನಾ?"

ಈ ಸರಸದ ಮಾತನ್ನೆಲ್ಲಾ ಆಡ್ತಾ ಕೂತ್ಕೊಳ್ಳೋಕೆ ಸಮಯವಿಲ್ಲ, ತೋಟದ ಕೆಲಸದ ಕಡೆ ಗಮನವೇ ಇಲ್ಲ ಅಂತ ಅಪ್ಪಯ್ಯ ಬೈತಾನೇ ಇರ್ತಾರೆ.. ಅದೂ ಮುಖ್ಯವಾದ ಕೆಲಸವೇ ಅಲ್ವಾ! ನೀನುಂಟು ನಿನ್ನ ಮಗುವುಂಟು.. ನನ್ನನ್ನ ಎಳೀಲೇ ಬೇಡ.."

"ಏನ್ರೀ, ನಿನ್ನ ಮಗು ನಿನ್ನ ಮಗು ಅಂತ ಹೇಳ್ತೀರಿ? ನಿಮಗೆ ಯಾವ ಸಂಬಂಧವು ಇಲ್ವಾ!...ನಿಜ ಹೇಳಿ, ಈಗಲೇ ಮಗುವಾಗುವುದು ನಿಮಗೆ ಇಷ್ಟವಿರ್ಲಿಲ್ವಾ? ಹಾಗಂತ ಮುಂಚೇನೇ ಹೇಳ್ಬೇಕಾಗಿತ್ತು...ಈ ಮಗುವಿನಿಂದ ನಮ್ಮಿಬ್ಬರ ನಡುವೆ ಅಂತರ ಹುಟ್ಟಿದೆ ಅಂತ ಅನ್ನಿಸ್ತಿದೆ.." ಅವಳು ಹುಸಿ ಮುನಿಸಿನಿಂದ ಹೇಳಿದಳು.

"ಹಾಗೇ ತಿಳ್ಕೋ.." ಎಂದು ಹೇಳಿ ಹೊರಕ್ಕೆ ಬಂದ. ಅವನ ವರ್ತನೆ ಹಿಡಿಸಲಿಲ್ಲ.

"ಕನಕಾಭಿಷೇಕಕ್ಕೇ ಮುಹೂರ್ತ ಗೊತ್ತು ಮಾಡಿದ್ದಾಯ್ತೇನೋ ಭುಜೀ.." ಅಜ್ಜಿ ಬೊಚ್ಚು ಬಾಯಿ ಬಿಟ್ಟುಕೊಂಡು ಕೇಳಿದಾಗ ಹಲ್ಲು ಕಡಿದ.

"ನಿನಗೆ ಕನಕಾಭಿಷೇಕದ ಚಿಂತೆ.. ನನ್ನನ್ನೇನೂ ಕೇಳ್ಬೇಡಿ.." ರೇಗಿದ.

"ಏನೋ ಹೀಗಂದ್ರೆ! ನಿನ್ನ ಮಗ ಹುಟ್ಟಿದ್ದಕ್ಕೇ ತಾನೇ ಈ ಅವಕಾಶ ನನಗೆ ಸಿಕ್ಕಿರೋದು. ಇದರಿಂದ ನಿನಗೆ, ನಿನ್ನ ಮಗನಿಗೇ ಶ್ರೇಯಸ್ಸು, ನನಗೇನಂತೆ?.. ಮಾಡ್ತುಲ್ಲ ಅಂತ ಹೇಳ್ಬಿಡು. ಬಾಯ್ಮುಚ್ಕೊಂಡು ಬಿದ್ದಿರ್ತೀನಿ..ನಿನ್ಹತ್ರ ಕೇಳಿದ್ದೇ ತಪ್ಪಾಯ್ತು.."

"ಸರಿ, ನಿನ್ನ ನಾಟಕ ಶುರು ಆಯ್ತಾ?.. ಏನಾದ್ರೂ ಮಾಡ್ಕೊಳ್ಳಿ.." ಸಿಡುಕಿದ.

"ಯಾಕೋ ಭುಜಿ ರೇಗ್ತೀಯ? ಈಚೆಗೆ ಯಾಕೋ ಬಹಳ ಬೇಗೆ ತಾಳ್ಮೆನ ಕಳ್ಕೊಳ್ತಾ ಇದೀಯ.. ಅವರು ಹೇಳಿದ್ರಲ್ಲಿ ತಪ್ಪೇನಿದೆ? ಏನಾಗಿದೆ ನಿಂಗೆ?"

"ಎಲ್ಲೋ ಅಪ್ಪನಿಗೆ ಆಗದ ನಕ್ಷತ್ರದಲ್ಲಿ ಮಗುವಿನ ಜನ್ಮ ಆಗಿರ್ಬೇಕು. ಸರಿಯಾಗಿ ತಿಳ್ಕೋ, ಶಾಂತಿ ಮಾಡಿಸ್ಬೇಕಾದ್ರೆ ಮಾಡ್ಸಿ.. ಸರಿ ಹೋಗ್ತಾನೆ.." ಅಜ್ಜಿ ಮತ್ತೆ ಮಾತಾಡಿತ್ತು.

"ನನ್ನನ್ನು ಸುಮ್ನೆ ಬಿಟ್ರೆ ಶಾಂತಿ ತಾನಾಗೇ ಸಿಗುತ್ತೆ.." ಗೊಣಗಿದ.

"ಯಾಕೋ ಭುಜೀ.. ಏನಾಯ್ತೋ.. ನನ್ನ ಹತ್ರವೂ ಹೇಳ್ಕೊಳ್ಳೋಕೆ ಆಗದಂಥ ವಿಷಯ ಏನಿದೆ? ಏನೇ ಸಮಸ್ಯೆ ಇದ್ರೂ ನನಗೇ ತಾನೇ ನೀನು ಹೇಳ್ತಾ ಇದ್ದದ್ದು.." ಸಾವಿತ್ರಿ ಅಳುವಿನ ಧ್ವನಿಯಲ್ಲಿ ಕೇಳಿದಾಗ ಅವನು ಮೆತ್ತಗಾದ.. ಉತ್ತರಿಸದೇ ಹಿತ್ತಲ ಬಾಗಿಲಲ್ಲಿ ಹೋಗಿ ನಿಂತ. ಸಾವಿತ್ರಿ ಅವನ ಹಿಂದೆ ಬಂದು ನಿಂತು ಅವನ ಭುಜದ ಮೇಲೆ ಕೈಯನ್ನಿಟ್ಟಳು. ಅವನನ್ನು ತನ್ನ ಕಡೆಗೆ ತಿರುಗಿಸಿಕೊಂಡಳು. ಅವನ ಕಣ್ಣುಗಳಲ್ಲಿ ಅಸಹಾಯಕತೆಯ ರೋಷ! ಏನೋ ನಡೆಯಬಾರದ್ದು ನಡೆದಿದೆ ಎಂದು ಊಹಿಸಿದಳು. "ಏನಾಯ್ತೋ ಭುಜೀ.. ಯಾರ ಹತ್ರ ಏನದ್ರೂ ಜಗಳ ಕದನ ನಡೀತಾ?.. ಮನೇಲಿ ಸಂಭ್ರಮದ ವಾತಾವರಣವಿರ್ಬೇಕು..ಯಾರು

ಏನೇ ಅಂದಿದ್ರೂ ಅದನ್ನೆಲ್ಲಾ ಮರೆತು ಬಿಡು. ದ್ವೇಷ, ಶತ್ರುತನ ಇದೆಲ್ಲಾ ಒಳ್ಳೇದಲ್ಲ.. ವೈದೇಹಿ ಏನಾದ್ರೂ ನೋವಾಗುವಂಥೆ ಮಾತಾಡಿದ್ರೆ ತಲೆಗೆ ಹಚ್ಕೋ ಬೇಡ. ಅದೇನು ಹೊಸದೇ ನಿಂಗೆ?''

"ಇಲ್ಲಮ್ಮ, ಅತ್ತೆ ಬಗ್ಗೆ ನನಗೆ ಯಾವ ಕೆಟ್ಟ ಭಾವನೆಯೂ ಇಲ್ಲ, ಆಮೇಲೆ ಮಾತಾಡ್ತೀನಿ..ಬಿಸಿ ಬಿಸಿ ಕಾಫಿ ಕೊಡು. ಕುಡಿದು ತೋಟಕ್ಕೆ ಹೋಗ್ತೀನಿ..'' ಹೊರಡಲನುವಾದ.

"ತೋಟ, ತೋಟ ಅಂತ ಅಲೀಬೇಡ ಮುಖ ನೋಡು ಹೇಗಾಗಿದೆ?...ಕಣ್ತುಂಬಾ ನಿದ್ದೆ ಮಾಡು. ಖಾಯಿಲೆಯಿಂದ ಎದ್ದವನ ಥರ ಕಾಣ್ತೀಯ'' ತಾಯಿ ಆತಂಕ ತೋರಿದಳು.

"ಆಯ್ತಮ್ಮ, ಸಾಯಂಕಾಲ ನೀನು ಈಶ್ವರನ ಗುಡಿಯ ಹತ್ತಿರಕ್ಕೆ ಬಾ.. ನಾನು ಸ್ವಲ್ಪ ಹೊತ್ತಿನ ನಂತರ ತೋಟದಿಂದ ಹಾಗೇ ಬರ್ತೀನಿ. ಅಲ್ಲಿ ಮಾತಾಡೋಣ. ಈಗ ಒಂದು ಗಳಿಗೆ ಮಲಗ್ತೀನಿ'' ಅಂತ ಹೇಳಿ ಮಹಡಿನ್ನೇರಿದ. ಮನಸ್ಸಿಗೆ ಸ್ವಲ್ಪ ಹಿತವೆನಿಸಿತ್ತು.. ಸ್ವಲ್ಪ ಹೊತ್ತು ಹೊರಳಾಡಿದ ನಂತರ ನಿದ್ದೆ ಬಂದಿತ್ತು.. ಕೆಟ್ಟ ಕನಸುಗಳು.. ಬಗೆಹರಿಯದ ವಿಷಯಗಳದ್ದು.

* * *

ದೇವರ ಗುಡಿಯಲ್ಲಿ ಹಣ್ಣುಕಾಯಿ ಒಡೆಸಿ, ಭುಜಂಗನಿಗಾಗಿ ಕಾಯುತ್ತಾ ಮೆಟ್ಟಿಲ ಮೇಲೆ ಕುಳಿತಿದ್ದಳು. ಮಗನ ಸಮಾಧಾನಕ್ಕಾಗಿ ತಾನು ಮಾತನ್ನಾಡಲು ಬಂದುದಾಗಿತ್ತು. ಆದರೆ ಏನು ಹೇಳಿ ಬಿಡುವನೋ, ತಾನು ಏನು ಹೇಳಬೇಕಾಗುತ್ತದೋ ಎಂಬ ಆತಂಕ ಸಣ್ಣಗೆ ಕಾಡಿತ್ತು ಸಾವಿತ್ರಿಗೆ. ಭುಜಂಗ, ದೇವರಿಗೆ ನಮಸ್ಕಾರ ಮಾಡಿ, ತೀರ್ಥ ಪ್ರಸಾದವನ್ನು ಸ್ವೀಕರಿಸಿ, ತಾಯಿ ಇದ್ದಲ್ಲಿಗೆ ಬಂದು ಕುಳಿತ. "ಭುಜೀ, ಮನದಲ್ಲಿ ಏನೋ ಕೊರಗನ್ನು ತುಂಬಿಕೊಂಡಿದ್ದಿಯೇನೋ?'' ಪ್ರಶ್ನಿಸಿದಳು. ನಿಧಾನವಾಗಿ ಎಲ್ಲವನ್ನು ವಿವರವಾಗಿ ತಿಳಿಸಿದ. ಸಾವಿತ್ರಿ ಏನು ಹೇಳಬೇಕೆಂದು ತೋಚದೇ ಕುಳಿತಿದ್ದಳು. ಹೀಗೆ ಆಗುಕ್ಕೆ ಸಾಧ್ಯನಾ ಅಂತ ಚಿಂತಿಸುತ್ತಿದ್ದಳು. "ಅಮ್ಮಾ ನೀನೇ ಹೇಳಮ್ಮಾ ಎಂಥಾ ಸಂದಿಗ್ಧಕ್ಕೆ ತಳ್ಳಿ ಬಿಟ್ಟಳಲ್ಲ. ಏನ್ಮಾಡ್ಬೇಕು ನಾನೀಗ?.. ಯಾಕಮ್ಮಾ ಮೊದಲ್ನಿಂದ ನನಗೆ ಮೋಸಾನೇ ಮಾಡ್ತಿದಾಳಲ್ಲಮ್ಮಾ..''

"ಹೇಮಾ, ಹೀಗೆ ಮಾಡ್ಬಾರ್ದಾಗಿತ್ತು.. ತಾನೊಬ್ಬಳೇ ನಿರ್ಧರಿಸಬಾರ್ದಾಗಿತ್ತು.. ನಿನಗೆ ತಿಳಿಸ್ಲೇ ಬೇಕಾಗಿತ್ತು.. ನಿನ್ಮೇಲೆ ಏನೇ ಸೇಡು ಇದ್ರೂ.. ಹೀಗೆ ಮಾಡಿದ್ದು ಶುದ್ಧ ತಪ್ಪು..''

"ತಿಳ್ಸಿದ್ರೆ, ನಾನು ಖಂಡಿತಾ ಬೇಡ ಅಂತ ಹೇಳ್ತಿದ್ದೆ, ಪಲ್ಲವಿಗೆ ಖಂಡಿತಾ ಸಮ್ಮತವಾಗ್ತಿರಲಿಲ್ಲ. ಪಲ್ಲವೀನೆ ನಾನು ಪ್ರೀತಿಸೋದು.. ಇದರಲ್ಲಿ ಪಲ್ಲವಿಯ ತಪ್ಪೇನಿದೆ?''

"ಆತುರ ಪಡದೇ, ಸಮಯ ತಗೊಂಡಿದ್ರೆ ಪಲ್ಲವೀನ ಒಪ್ಪಿಸಬಹುದಾಗಿತ್ತು.''

"ಏನೋ ನಂಗೊತ್ತಿಲ್ಲಮ್ಮ, ಸುಳ್ಳು ಹೇಳಿದಾಳೆ ಅಂತ ಅನುಮಾನ ಬರ್ತಿದೆ ನಂಗೆ..''

"ಹೇಮನ್ನ ಕರೆಸು.. ಅವಳಿಗೆ ಛೀಮಾರಿ ಹಾಕಿ ಯಾಕೆ ಹೀಗ್ಮಾಡ್ದೆ ಅಂತ ಕೇಳ್ತೀನಿ.. ವೈದೇಹಿಗೆ ತಿಳಿದ್ರೆ ಅವಳೂ ಬೈತಾಳೆ..'' ಒಟ್ನಲ್ಲಿ ನೆಮ್ಮದಿ ಇಲ್ಲ ನಿಂಗೆ..''

"ಯಾರು ಎಷ್ಟೇ ಬೈದರೂ ಈಗ ಇದನ್ನು ಸರಿ ಮಾಡುಕ್ಕೆ ಆಗುತ್ತೇನಮ್ಮಾ.. ಮುಂದೆ

ಮಕ್ಕಳ ಪಾಡೇನು?..ಜನ್ಮ ತಾಳಿಯಾಗಿದೆಯಲ್ಲ..ಏನಮ್ಮಾ ಮಾಡೋದು?"

"ಹೇಮ ಸಾಕಿಕೊಳ್ಳುವುದಾದ್ರೆ ಸಾಕಿಕೊಳ್ಳಲಿ, ಕೊಟ್ಟು ಬಿಡೋಣ.."

"ಹಾಗಾದ್ರೆ ಪಲ್ಲವಿಯನ್ನು ನೀನೇ ಒಪ್ಪಿಸ್ಬೇಕು.. ನನ್ನಿಂದಂತೂ ಸಾಧ್ಯವಿಲ್ಲ."

"ಪ್ರಯತ್ನಪಡ್ತೀನಿ. ದೇವರ ಇಚ್ಛೆಹೇಗಿದೆಯೋ ಹಾಗಾಲಿ.. ಹೇಗೂ ಗುಡಿಗೆ ಬಂದುದಾಗಿದೆ. ಒಂದು ತೀರ್ಮಾನ ಆಗಿಯೇ ಹೋಗಲಿ. ನಮ್ಮ ತೊಳಲಾಟದಲ್ಲಿ ಮಕ್ಕಳ ಭವಿಷ್ಯ ಹಾಳಾಗಬಾರದು.. ದೇವರೇ ನಿರ್ಣಯವನ್ನು ತಿಳಿಸಲಿ. ಅದನ್ನೇ ಪಾಲಿಸೋಣ.."

"ನೀನೂ ಹೀಗೆ ಹೇಳ್ತಿಯೇನಮ್ಮಾ.. ನಾವೇ ನಿರ್ಣಯ ತಗೊಳ್ಳೋಕೆ ಆಗುಲ್ವಾ?"

"ಒಂಭತ್ತು ತಿಂಗಳು, ಪಲ್ಲವಿ ಬಸಿರನ್ನು ಹೊತ್ತವಳು. ಮಗುವಿನ ಬಗ್ಗೆ ಮಮಕಾರವನ್ನು ಬೆಳೆಸಿಕೊಂಡಿದಾಳೆ.. ಶ್ವೇತಾ ತಿಳಿದೂ, ಮಗುವನ್ನು ಹೊತ್ತು ಹೆತ್ತಿದಾಳೆ. ಈಗ ಈ ಮಗುವನ್ನು ಪಲ್ಲವಿಯಿಂದ ದೂರ ಮಾಡಬೇಕಾದ್ರೆ ಯೋಚಿಸ್ಬೇಡ್ವೇನೋ...ಅಲ್ಲದೇ ಇಲ್ಲಿ ಇನ್ನು ಒಂದು ವಿಷಯದ ಬಗ್ಗೆ ಯೋಚಿಸು. ಹೇಮಾ, ಈ ಮಕ್ಕಳನ್ನು ವೈದೇಹಿಗೋಸ್ಕರ ಜನಿಸುವಂತೆ ಮಾಡಿದ್ದರೆ ಈ ಮಕ್ಕಳು ಇಲ್ಲಿಯೇ ಬೆಳೆಯಲಿ.. ಕೃಷ್ಣ ಬಲರಾಮರಂತೆ.."

"ಅತ್ತೆಯ ಕೈಯಲ್ಲಿ ಬೆಳೆಸುಕ್ಕೆ ಆಗುತ್ತೇನಮ್ಮಾ..? ಅವರಿಗೆ ಏನು ಹೇಳ್ತೀಯಾ?.."

"ದೇವಕಿಯ ಗರ್ಭದಲ್ಲಿ ಬೆಳೆದು, ಯಶೋದೆಯ ಮಡಿಲಲ್ಲಿ ಕೃಷ್ಣ ಬೆಳೆಯಲಿಲ್ಲವೇ ಹಾಗೇ ಅಂತ ಅಂದ್ಕೋ.. ಆದರೆ ಇಲ್ಲಿ ಸ್ವಲ್ಪ ವ್ಯತ್ಯಾಸ. ಗರ್ಭವೂ ಇವರದ್ದೇ...ಬೆಳೆಸುವವರೂ ಇವರೇ.. ದೇವರ ನಿಯಾಮಕ ಹೀಗೇ ಅಂತ ಇದ್ದರೆ ಹಾಗೇ ಆಗಲಿ.. ನಡೀ..." ಇಬ್ಬರೂ ಮತ್ತೇ ದೇವರ ಗುಡಿಯಲ್ಲಿಬಂದು ನಿಂತರು. ಭುಜಂಗ ಅರ್ಚಕರೊಡನೆ ಏನೋ ಮಾತನಾಡಿದ.. "ಸರಿ", 'ಸರಿಯಲ್ಲ' ಅಂತ ಎರಡು ಬೇರೆ ಬೇರೆ ಚೀಟಿಗಳಲ್ಲಿ ಬರೆದು ಅರ್ಚಕರ ಕೈಗೆ ಕೊಟ್ಟ ಅವರು ಅದನ್ನು ದೇವರ ಪಾದದ ಅಡಿಯಲ್ಲಿ ಇಟ್ಟರು. ಕಣ್ಣುಗಳನ್ನು ಮುಚ್ಚಿ ಕೈ ಮುಗಿದು ಪ್ರಾರ್ಥಿಸಿ, ಒಂದು ಚೀಟಿಯನ್ನು ಎತ್ತಿದರು. ಭಕ್ತಿಯಿಂದ ಕಣ್ಣಿಗೊತ್ತಿಕೊಂಡು, ಚೀಟಿಯನ್ನು ಬಿಡಿಸಿದರು. ಅಲ್ಲಿ ಬರೆದಿರುವುದನ್ನು ಭುಜಂಗನಿಗೆ ತೋರಿಸಿದರು. ಅವನ ಮುಖದಲ್ಲಿ ಗಂಭೀರ ಗೂಡು ಕಟ್ಟಿತ್ತು. ಚೀಟಿಯನ್ನು ಎತ್ತಿಕೊಂಡು ಜೇಬಿನಲ್ಲಿ ಇಳಿಬಿಟ್ಟ ಹೃದಯ ಭಾರವಾದಂತಿತ್ತು. ಅರ್ಚಕರು, ಮತ್ತೆ ಮಂಗಳಾರತಿಯನ್ನು ಮಾಡಿದರು. ಇಬ್ಬರೂ ಮಂಗಳಾರತಿ, ತೀರ್ಥ ಪ್ರಸಾದವನ್ನು ಸ್ವೀಕರಿಸಿದರು. ಭುಜಂಗ ಅರ್ಚಕರಿಗೆ ದಕ್ಷಿಣೆಯನ್ನು ಕೊಟ್ಟು ನಮಸ್ಕರಿಸಿದ.

"ದೇವರು ಮಾರ್ಗವನ್ನು ತೋರಿದಾನೆ. ಅದನ್ನು ಪ್ರಸಾದವೆಂದು ಸ್ವೀಕರಿಸಿ ಮುಂದುವರೆಯಿರಿ. ಮನದಲ್ಲಿ ಅಳುಕು, ಶಂಕೆ ಯಾವುದೂ ಬೇಡ.. ಎಲ್ಲಾ ಒಳ್ಳೆಯದಾಗಲಿ" ಎಂದು ಹಾರೈಸಿ ಆಶೀರ್ವದಿಸಿದರು. ಇಬ್ಬರೂ ಒಟ್ಟಾಗಿ ಮನೆಗೆ ಬಂದರು. ಚಿದಾನಂದ ಮುಂಬಾಗಿಲಿನಲ್ಲಿ ಕುಳಿತಿದ್ದ, ಎದ್ದುನಿಂತ. ಸಾವಿತ್ರಿ ಅವನನ್ನು ಒಳಕ್ಕೆ ಕರೆದು ಅವನ ಕೈಗೂ ತೀರ್ಥ ಪ್ರಸಾದಗಳನ್ನು ಕೊಟ್ಟಳು. ಚಿದಾನಂದ ಕಣ್ಣಿಗೊತ್ತಿಕೊಂಡು ಸ್ವೀಕರಿಸಿದ. ಭುಜಂಗ ಒಳಗೆ ನಡೆದಿದ್ದ ಸಾವಿತ್ರಿ ನುಡಿದಳು. "ಚಿದೂ, ಯಾವ ಜಿಜ್ಞಾಸೆಯೂ ಬೇಡ. ದೇವರು ನಿರ್ಣಯವನ್ನು ತಿಳಿಸಿದ್ದಾನೆ. ಹಾಗೇ ಮುಂದುವರೆಯಿರಿ. ಭುಜಂಗ ಎಲ್ಲವನ್ನೂ ಹೇಳ್ತಾನೆ. ಮಹಡಿ ಮೇಲೆ

ಕೂತ್ಕೊಂಡು ಮಾತಾಡಿ'' ಎಂದು ಹೇಳಿ ತಾನೇ ಅವರಿಬ್ಬರನ್ನು ಕಳಿಸಿದಳು. ತಾನೇನೋ ತನಗೆ ತೋಚಿದ ಉಪಾಯವನ್ನು ಸೂಚಿಸಿದ್ದಾಗಿತ್ತು. ಆದರೆ ಭುಜಂಗ, ಚಿದಾನಂದ ಇಬ್ಬರೂ ಬೆಳೆದವರು. ತಿಳುವಳಿಕೆ ಇರುವವರು, ತನ್ನ ಈ ಉಪಾಯವನ್ನು ಪಾಲಿಸದಿದ್ದರ್ರೇ.. ದೇವರೇ ಹಾಗಾಗದಿರಲಿ. ನಾನು ಯಾವತ್ತೂ ನಿನ್ನನ್ನು ನಂಬಿದೀನಿ. ಈ ಮಕ್ಕಳು ಮಾರ್ಗ ತಪ್ಪದಂತೆ ಕಾಪಾಡಪ್ಪಾ.. ಎಂದು ದೇವರ ಮನೆಯಲ್ಲಿ ಕೈ ಮುಗಿದು ಪ್ರಾರ್ಥಿಸಿದಳು. ಈ ಮಕ್ಕಳೂ ಚೆನ್ನಾಗಿರಬೇಕು. ಮೊಮ್ಮಕ್ಕಳೂ ಚೆನ್ನಾಗಿರಬೇಕು ಕೇಳಿಕೊಂಡಳು. ಭುಜಂಗ ಚಿದಾನಂದನೊಡನೆ ಎಲ್ಲವನ್ನೂ ತಿಳಿಸಿದ. ತನ್ನ ಅಭಿಪ್ರಾಯ ಏನೆಂದು ತಿಳಿಸಲಿಲ್ಲ, ನಿನ್ನ ಅಭಿಪ್ರಾಯ ಏನೆಂದು ಕೇಳಲಿಲ್ಲ. ಸ್ವಲ್ಪ ಹೊತ್ತು ಸುಮ್ಮನಿದ್ದ ಚಿದಾನಂದ ನುಡಿದ. "ನಾನು ಹೇಮಳ ಹತ್ರ ಮಾತಾಡ್ಬೇಕು. ಅವಳು ನನ್ನನ್ನ ದಡ್ಡ ಅಂತ ತಿಳೀಬಾರ್ದು.'' ಎಂದ.

* * *

ಹೇಮಾಳ ಮೊಬೈಲ್ ಫೋನು ರಿಂಗಾಗುತ್ತಲೇ ಇತ್ತು. "ನೋ ಆನ್ಸರ್'' ಅಂತ ಬರುತ್ತಲೇ ಇತ್ತು. "ಅವಳಿಗೆ ನಮ್ಮ ಹತ್ರ ಮಾತಾಡುಕ್ಕೆ ಬಾಯಿಲ್ಲ, ಅದಕ್ಕೇ ರಿಸೀವ್ ಮಾಡ್ತಿಲ್ಲ'' ಅಂತಂದುಕೊಂಡ ಚಿದಾನಂದ. ನೇರವಾಗಿ ಅವಳ ಎದುರಿಗೆ ಹೋಗಿ ನಿಂತು ಕೇಳಬೇಕೆಂದುಕೊಂಡ.

"ನಾನು ಎರಡು ದಿನಗಳ ಮಟ್ಟಿಗೆ ಬೆಂಗಳೂರಿಗೆ ಹೋಗ್ಬೇಕಾಗಿದೆ. ನೀವೂ ಬರ್ತೀರಾ?'' ಭುಜಂಗನನ್ನು ಕೇಳಿದ.

"ಇಲ್ಲ, ನೀವು ಹೋಗ್ಬನ್ನಿ'' ಎಂದಷ್ಟೇ ಹೇಳಿದ. ಯಾಕೆ ಹೋಗ್ತಾ ಇದೀರಿ ಅಂತ ಇವನೂ ಕೇಳಲಿಲ್ಲ, ಅವನೂ ಹೇಳಲಿಲ್ಲ.

ಮಂದಾಕಿನಿ ಮಾತ್ರ ಕೇಳಿದ್ದಳು.. "ಈಗ್ಯಾಕೋ ಸುಮ್ಸುಮ್ನೆ ಬೆಂಗಳೂರಿಗೆ, ಅಲ್ಲಿ ಯಾರಿದಾರೆ ಅಂತ ಹೋಗ್ತಾ ಇದೀಯ.. ಭುಜಂಗನೂ ಬರ್ತಾ ಇದಾನಾ?'' ಅಂತ.

"ಇಲ್ಲ ಕಣಮ್ಮಾ.. ಕೆಲಸ ಇರೋದು ನನಗೆ ಮಾತ್ರ'' ಎಂದಿದ್ದ ಶ್ವೇತಾಳ ಕಡೆ ನೋಡಿ, ಅವಳು ಹೆದರಿದಳು. ಮಂದಾಕಿನಿಗೆ ಕಾಣದಂತೆ ಕೇಳಿದ್ದಳು.

"ಹೇಮನ್ನ ನೋಡೋಕೆ ಹೋಗ್ತಿದೀರಾ?.. ನಾವು ನಾವೇ ತೀರ್ಮಾನ ತಗೊಂಡ್ರೆ ಆಗುಲ್ವಾ? ಅವಳ್ಯಾಕೆ..? ಇದು ನಮಗೆ ಸಂಬಂಧಿಸಿದ ವಿಷಯ..''

"ನೀನು ಸುಮ್ನಿರು. ಈಗ ಒಂದು ಇತ್ಯರ್ಥವಾಗಲೇ ಬೇಕಾಗಿದೆ.. ನಿನ್ನ ಅಭಿಪ್ರಾಯವನ್ನು ಕೇಳಲಿಲ್ಲ ನಾನು..'' ರೇಗಿದ.

"ಈ ಮುಂಚೆ ನೀವು ಹೀಗಿರ್ಲಿಲ್ಲ.. ಭುಜಂಗನ ಜೊತೆ ಸೇರಿ ಹಾಳಾಗ್ತಿದೀರಿ..''

"ನಿನ್ನ ಬಲೆಗೆ ಬಿದ್ದು ಹಾಳಾದವನು ನಾನು. ಭುಜಂಗ ನನ್ನನ್ನು ಮೇಲೆತ್ತಲು ನೋಡಿದವರು.. ಅವರ ಹೆಸರನ್ನು ಎತ್ತುವ ಯೋಗ್ಯತೆಯೂ ನಿನಗಿಲ್ಲ..'' ಮೂದಲಿಸಿದ.

"ನನ್ನ ಯೋಗ್ಯತೆ ಏನು ಅಂತ ನನಗೀಗ ಗೊತ್ತಾಗಿದೆ. ಹಾಗಾದರೆ ನನಗೆ ಕ್ಷಮೆಯೇ

ಇಲ್ವಾ!..ಪ್ರಾಯಶ್ಚಿತ್ತಕ್ಕೆ ಆಸ್ಪದವೇ ಇಲ್ವಾ?" ಕ್ಷಮೆ ಯಾಚಿಸುವಂತೆ ಆಡಿದಳು.

"ಇದು ಹುಡುಗಾಟವಲ್ಲ, ನನ್ನ ಭಾವನೆಗಳ ಜೊತೆ ಆಟ ಆಡಿದೀಯ ನೀನು. ನನ್ನನ್ನ ನಿನ್ನ ಸ್ವಾರ್ಥಕ್ಕೆ ಬಳಸಿಕೊಂಡಿದೀಯ.. ಭುಜಂಗ ನಿನ್ನನ್ನು ಕ್ಷಮಿಸಿದರೂ, ನಾನು ನಿನ್ನನ್ನ ಕ್ಷಮಿಸುಲ್ಲ..ನನ್ನನ್ನ ಹಾಳು ಮಾಡಿದವಳ ಜೊತೆ ನನಗೇನು ಸಂಬಂಧ?"

"ಸರಿ, ಹಾಗಾದ್ರೆ ನನಗೆ ಡೈವೋರ್ಸ್ ಕೊಟ್ಟು ಬಿಡಿ. ನಾನು ನನ್ನ ಮಗುವಿನ ಜೊತೆ ವಾಪಸ್ಸು ಹೊರಟು ಹೋಗ್ತೀನಿ.. ಬಲವಂತವಾಗಿ ಇಲ್ಲಿ ಇರುವ ಆಸೆ ನನಗೂ ಇಲ್ಲ."

"ಇದು ನಿನ್ನ ಮಗುವಲ್ಲ, ನಿನಗೆ ಯಾವ ಅಧಿಕಾರವೂ ಇಲ್ಲ. ಹೋಗೋದಾದ್ರೆ ನೀನು ಒಬ್ಬಳೇ ಹೋಗ್ಬೇಕು.." ಎಂದು ಹೇಳಿ ಹೊರಡುವ ತಯಾರಿಯನ್ನು ಮಾಡಿಕೊಂಡ.

"ಹಾಗಾದ್ರೆ ಒಂದ್ಮಾತನ್ನು ನಾನೂ ಹೇಳ್ತೀನಿ.. ಪಲ್ಲವಿಗೆ ಎಲ್ಲವನ್ನೂ ಹೇಳ್ತೀನಿ. ಅವಳೇನು ಮಾಡ್ತಾಳೋ ನಾನೂ ಹಾಗೇ ಮಾಡ್ತೀನ.. ಇದೆಲ್ಲಾ ಶುರುವಾದದ್ದು ಅವಳಿಂದ. ಇಲ್ದಿದ್ರೆ ನನಗೆ ಈ ಹಳ್ಳಿಗೆ ಬರುವ ಅಗತ್ಯವೇ ಇರ್ಲಿಲ್ಲ.. ಎಲ್ಲವನ್ನು ಮುಗಿಸ್ಬಿಟ್ಟೇ ಹೋಗ್ತೀನಿ.."

"ನಾನು ವಾಪಸ್ಸು ಬರೋವರ್ಗೂ ನೀನು ಯಾರ ಹತ್ರಾನೂ ಮಾತಾಡ್ಕೂಡ್ದು. ಇದೇ ನಿನಗೆ ನಾನು ಕೊಡುವ ಶಿಕ್ಷೆ" ಅಂತಂದ. ಶ್ವೇತಾ ಕೆಟ್ಟ ಮುಖ ಹಾಕಿಕೊಂಡು ಕುಳಿತಳು. ಚಿದಾನಂದ ಭುಜಂಗನ ಮನೆಗೆ ಬಂದ. "ಶ್ವೇತಾ ಎಲ್ಲವನ್ನು ಪಲ್ಲವಿಗೆ ತಿಳಿಸುವ ಬೆದರಿಕೆ ಹಾಕ್ತಿದಾಳೆ. ನೀವು ಸ್ವಲ್ಪ ಎಚ್ಚರದಿಂದ ಇರ್ಬೇಕು" ಎಂದ. ಭುಜಂಗ ಕೆನ್ನೆಯ ಮೇಲೆ ಬೆರಳುಗಳನ್ನಾಡಿಸಿಕೊಂಡ.

"ನೀವು ಬೆಂಗಳೂರಿಗೆ ಹೋಗ್ಲೇ ಬೇಕಾ?.. ನಾನು ಕಾವಲು ಕಾಯುಕ್ಕೆ ಆಗುತ್ತಾ?.. ಶ್ವೇತಾ ನಿಮ್ಮ ಮೇಲಿನ ಕೋಪಕ್ಕೇ ಎಲ್ಲರೊಡನೆ ಹೇಳಿದರೆ?.. ಕೆಲವು ದಿನಗಳು ಸುಮ್ಮನಿದ್ಬಿಡಿ.."

"ಯಾರೂ ಅವಳ ಮಾತನ್ನು ನಂಬುಲ್ಲ, ತಮಾಷೆ ಅಂದ್ಕೊಳ್ತಾರೆ ಅಷ್ಟೇ.. ಹೇಮಾಳ ಹತ್ರ ಮಾತಾಡ್ಲೇ ಬೇಕು ಅಂತ ನಾನು ನಿರ್ಧರಿಸಿದೀನಿ.." ಎನ್ನುತ್ತಾ ಮುಂಬಾಗಿಲಿಗೆ ಬಂದ. ಕೊರಿಯರ್ ಸರ್ವೀಸ್‌ನವರು ಭುಜಂಗನ ಹೆಸರಿಗೆ ಬಂದಿದ್ದ ಪತ್ರವನ್ನು ಕೊಟ್ಟ. ಭುಜಂಗ ಆತಂಕದಿಂದ ಚಿದಾನಂದನ ಕಡೆ ನೋಡಿ, ಕುತೂಹಲದಿಂದ ಪತ್ರವನ್ನು ಹೊರತೆಗೆದ.

"ಡಿಯರ್ ಭುಜಂಗ.. ಎಂದು ಪ್ರಾರಂಭವಾಗಿತ್ತು. ಹೇಮಾಳ ಕೈ ಬರಹವೆಂದು ಗುರುತಿಸಿದ. ಹೇಮಳಿಂದ ಬಂದಿದೆ.." ನನಗೆ ಓದುವ ಮನಸ್ಸಿಲ್ಲ, ನೀವೆ ಓದಿ.. ಅಥವಾ ಹರಿದು ಹಾಕಿ" ಎಂದು ಹೇಳಿ ಚಿದಾನಂದನ ಕೈಗೆ ಕೊಟ್ಟ.

"ಇದು ನಿಮಗೆ ಬರೆದಿರುವ ಪತ್ರ. ಇದನ್ನು ನಾನು ಓದಿದರೆ ತಪ್ಪಾಗುತ್ತದೆ.."

"ಇಲ್ಲ, ನಾನೇ, ಓದಿ ಅಂತ ಹೇಳ್ತಿದೀನಲ್ಲ.." ಎಂದು ಹೇಳಿ ಮನೆಯ ಹಿತ್ತಿಲಿಗೆ ನಡೆದ. ಚಿದಾನಂದ ಅವನ ಹಿಂದೆಯೇ ನಡೆದ. ಒಂದು ಕಡೆ ನಿಂತು ಬೇಗ ಬೇಗ ಓದಿ ಭುಜಂಗನ ಕಡೆ ತಿರುಗಿದ. ಗಾಬರಿಯಿಂದ ನುಡಿದ.

"ಹೇಮಾ ಏನೋ ಅಪಾಯ ಮಾಡ್ಕೊಂಡಿದಾಳೆ ಅಂತ ಅನ್ನಿಸ್ತಿದೆ.. ಅವಳ ಮೊಬೈಲ್ ಫೋನ್ ಸಹ ಸ್ವಿಚ್ ಆಫ್ ಆಗಿತ್ತು.." ಭುಜಂಗನಿಗೂ ಗಾಬರಿಯಾಯಿತು. ಪತ್ರವನ್ನು

ಕೈಗೆತ್ತಿಕೊಂಡು ಸರಸರನೆ ಓದಿದ.

"ದಯವಿಟ್ಟು ನನ್ನನ್ನು ಕ್ಷಮಿಸಿಬಿಡು. ಈವರೆಗೆ ನನ್ನ ಎಷ್ಟೆಷ್ಟೋ ತಪ್ಪುಗಳನ್ನು ಮನ್ನಿಸಿದೀಯ. ಅದರಿಂದ ನಿನಗೆ ಬೇಸರವಾಗಿರಬಹುದು. ನಾನು ನಿನ್ನ ಸ್ನೇಹಕ್ಕೇ ಅರ್ಹಳಲ್ಲ ಎನ್ನುವ ಭಾವನೆ ಅತಿಯಾಗಿ ಕಾಡುತ್ತಿದೆ.. ನನ್ನ ಬಗ್ಗೆಯೇ ನನಗೆ ತಿರಸ್ಕಾರ ಹುಟ್ಟಿದೆ.. ಆದರೆ ಈ ಪ್ರಪಂಚಕ್ಕೆ ಬಂದಿರುವ ಮಕ್ಕಳ ತಪ್ಪೇನು? ಅತ್ಯಾಚಾರಕ್ಕಾಗಲೀ, ಬಲಾತ್ಕಾರಕ್ಕಾಗಲಿ ಹುಟ್ಟಿದುವಲ್ಲ, ಕಾಮಕ್ಕೆ ಸೃಷ್ಟಿಗೊಂಡವಲ್ಲ.. ಕೇವಲ ಕೃತಕ ವಿಧಾನದ ಪ್ರಯೋಗಕ್ಕೆ ಸೃಷ್ಟಿಗೊಂಡವೆಂದು ಆ ಮುಗ್ಧ ಜೀವಿಗಳಿಗೇನು ಗೊತ್ತು? ತಪ್ಪೆಲ್ಲಾ ನನ್ನದೇ.. ನಾನು ಶಿಕ್ಷೆಗೂ ಅನರ್ಹಳು. ಆದರೆ ಅಮ್ಮನ ಬಗ್ಗೆ ಯೋಚಿಸುವಾಗ ಅವಳ ಬಗ್ಗೆ ಮರುಕ ಹುಟ್ಟುತ್ತದೆ. ಅಪ್ಪ ಅಮ್ಮನಿಗೆ ತಕ್ಕ ಮಗಳು ನಾನಾಗಲಿಲ್ಲ, ಆದರೆ ನಮ್ಮ ಎರಡು ಮಕ್ಕಳನ್ನು ಅವಳಿಗೆ ಉಡುಗೊರೆಯನ್ನಾಗಿ ಕೊಟ್ಟಿದೀನಿ. ಇದು ಅಪಕಾರವೋ, ಉಪಕಾರವೋ ನನಗೆ ಗೊತ್ತಿಲ್ಲ, ಆದರೆ ಇದನ್ನು ಬಹಿರಂಗವಾಗಿ ಒಪ್ಪಿಕೊಳ್ಳುವುದಂತೂ ಅಸಾಧ್ಯ.. ಎಲ್ಲರೆದುರಿಗೆ ನಾನು ಸಣ್ಣವಳಾಗಲು ನನಗೆ ಕಷ್ಟವಾಗುತ್ತದೆ. ಆದ್ದರಿಂದ ಈ ಮಕ್ಕಳ ಜನ್ಮ ರಹಸ್ಯ ರಹಸ್ಯವಾಗಿಯೇ ಉಳಿಯಲಿ ಅಂತ ನನ್ನ ಅಪೇಕ್ಷೆ.. ಇದು ನನ್ನ ಅಂತಿಮ ಇಚ್ಛೆ. ನನ್ನ ಮೇಲಿನ ತಿರಸ್ಕಾರದಿಂದ ನಮ್ಮ ಮಕ್ಕಳನ್ನು ದ್ವೇಷಿಸಬೇಡ. ಇದು ನನ್ನ ಕೋರಿಕೆ. ನನಗೀಗ ಯಾವ ಸ್ನೇಹವನ್ನೂ, ಸಂಬಂಧವನ್ನೂ, ಪ್ರೀತಿ ವಿಶ್ವಾಸ ನಂಬಿಕೆಗಳನ್ನುಳಿಸಿಕೊಂಡು ನಿಮ್ಮೆಲ್ಲರ ನಡುವೆ ಬದುಕುವುದು ಅಸಾಧ್ಯ ಅಂತ ಅನ್ನಿಸ್ತಿದೆ. ಈ ಬಗ್ಗೆ ಗಿರೀಶನೊಡನೆ ಯಾವ ಚರ್ಚೆಯೂ ಬೇಡ. ಅವನೀಗ ವಿದೇಶಕ್ಕೆ ಹೊರಟು ಹೋಗಿದ್ದಾನೆ. ಅವನ ಚಿಕಿತ್ಸೆಗೆ ಎಲ್ಲಾ ತಯಾರಿ ನಡೆದಿದೆ. ಅವನಿಗೆ ನನ್ನ ಅಗತ್ಯವಿರುವಂತೆ ಅನ್ನಿಸುವುದಿಲ್ಲ, ಅವನಿಗೆ ಬೇಕಾದ ಹಣದ ವ್ಯವಸ್ಥೆಯಾಗಿದೆ. ಅಷ್ಟು ಸಾಕು. ಕ್ರಮೇಣ ಅವನು ನನ್ನನ್ನು ಮರೆಯುತ್ತಾನೆ ಅಂತ ನನಗೆ ಗೊತ್ತು. ಎಲ್ಲರೂ ನನ್ನನ್ನು ಮರೆಯಬೇಕು. ಇದನ್ನೇ ನಾನು ಬಯಸುವುದು. ನನ್ನನ್ನು ಹುಡುಕಿಸುವ ಪ್ರಯತ್ನ ಮಾಡಬೇಡಿ. ಈ ಪತ್ರ ನಿನ್ನ ಕೈ ಸೇರುವ ವೇಳೆಗೆ ನಾನು ನಿಮ್ಮೆಲ್ಲರಿಂದ ಬಲು ದೂರ ಹೊರಟು ಹೋಗಿರುತ್ತೇನೇ..ಹೇಮಾ...ಪತ್ರವನ್ನು ಉಂಡೆ ಕಟ್ಟಿ ಮುಷ್ಟಿಯಲ್ಲಿ ಅದುಮಿದ. "ಹೇಡಿ" ಎಂದು ಗೊಣಗಿಕೊಂಡ.

"ಈಗೇನ್ಮಾಡೋದು? ಅವಳನ್ನು ತಡೆಯುವುದು ಹೇಗೆ?.." ಚಿದಾನಂದ ಕೇಳಿದ.

"ಈ ಪತ್ರ ಬಂದಿರುವ ವಿಷಯವನ್ನು ಯಾರಿಗೂ ಹೇಳೋದು ಬೇಡ." ಒಂದು ವೇಳೆ ಹೇಮಾ ಏನಾದ್ರೂ ಅಪಾಯ ಮಾಡ್ಕೊಂಡಿದ್ರೆ, ಪೋಲಿಸ್ ಕೇಸಾಗುತ್ತದೆ. ಪೋಲಿಸರು ಇಲ್ಲಿಗೂ ಬರಬಹುದು.. ಅಥವಾ ನನ್ನನ್ನು ಮೆಚ್ಚಿಸಲು ಈ ಪತ್ರವನ್ನು ಬರೆದಿದ್ದರೂ ಬರೆದಿರಬಹುದು. ಹೇಗೂ ನೀವು ಬೆಂಗಳೂರಿಗೆ ಹೊರಟಿದೀರಲ್ಲ, ತಾನಾಗಿಯೇ ಗೊತ್ತಾಗುತ್ತೆ. ಸುಮ್ಮನಿದ್ದು ಬಿಡೋಣ.." ಹಾಗೆ ಹೇಳಿದರೂ ಆತಂಕ ಕಾಡಿತ್ತು.

"ನೀವೂ ನನ್ನ ಜೊತೆಯಲ್ಲಿ ಬನ್ನಿ. ನನ್ನ ಕೈ ಕಾಲುಗಳು ಈಗಲೇ ನಡುಗುತ್ತಿವೆ. ಮೊದಲು ಹಾಸ್ಟೆಲ್ಲಿಗೆ ಹೋಗೋಣ.. ಅವಳು ಮೊಬೈಲ್‌ಗೂ ಉತ್ತರಿಸಿಲ್ಲವಲ್ಲ." ಭುಜಂಗ 'ಹುಂ' ಅಂತಂದ. ಇಬ್ಬರೂ ಅದೇ ರಾತ್ರಿ ಬೆಂಗಳೂರಿಗೆ ಪ್ರಯಾಣ ಬೆಳೆಸಿದರು.

* * *

ಇಬ್ಬರೂ ಹೇಮಾ ಇದ್ದ ಲೇಡಿಸ್ ಹಾಸ್ಟೆಲ್ಲಿಗೆ ಬಂದರು. ಭುಜಂಗನ ಪರಿಚಯವಿದ್ದ ಹಾಸ್ಟೆಲ್ ವಾರ್ಡನ್ ನಗು ಮುಖದಿಂದ ಸ್ವಾಗತಿಸಿದಳು. "ಹೇಮಾ ಈಗ ಇಲ್ಲಿಲ್ಲ.. ಮದುವೆಯಾಯ್ತಲ್ಲ.. ಬೇರೆ ಮನೆ ಮಾಡಿದೀನಿ ಅಂತ ಹೇಳ್ತಿದ್ರು.." ಅವಳು ನುಡಿದಾಗ ಅವನ ಎದೆ ಧಸಕ್ ಎಂದಿತು. ಚಿದಾನಂದನ ಕಡೆ ನೋಡಿದ.

"ಮನೆಯ ಅಡ್ರೆಸ್ ಗೊತ್ತಾ?"

"ಇಲ್ಲ, ಫೋನು ಮಾಡಿ ಹೇಳ್ತೀನಿ ಅಂತ ಹೇಳಿದ್ರು. ಇದುವರೆಗೂ ಫೋನು ಬಂದಿಲ್ಲ"

"ಹಾಗಾದ್ರೆ ರೂಮು ಖಾಲಿ ಮಾಡಿ ಹೊರಟು ಹೋಗಿದಾಳೆ.." ತನಗೇ ಎಂಬಂತೆ ಹೇಳಿದ್ದ

"ಯಾಕೆ! ನಿಮಗ್ಯಾರಿಗೂ ತಿಳಿಸ್ಲೇ ಇಲ್ವಾ!.." ಆಕೆ ವಿಸ್ಮಯದಿಂದ ಕೇಳಿದ್ದಳು.

"ಹದಿನೈದು ದಿನಗಳ ಹಿಂದೆ ನಮ್ಮೂರಿಗೆ ಬಂದಿದ್ಲು. ಮದುವೆಯಾಗಿರುವ ವಿಷಯ ನನಗೆ ಮಾತ್ರ ಗೊತ್ತು.. ಆದಕ್ಕೇ ಹೇಳಲಿಲ್ಲ ಅಂತ ಕಾಣುತ್ತೆ.. ಫೋನಿನಲ್ಲೂ ಮಾತನಾಡುಕ್ಕಾಗ್ಲಿಲ್ಲ.. ಪರವಾಗಿಲ್ಲ ಬಿಡಿ" ಎಂದು ಹೇಳಿದ. ಇಬ್ಬರೂ ಅಲ್ಲಿಂದ ಹೊರ ಬಂದರು. ಭುಜಂಗ ತನಗೆ ಪರಿಚಯ ಮಾಡಿಕೊಟ್ಟಿದ್ದ ಡಾಕ್ಟರನ್ನು ನೋಡಬೇಕೆಂದುಕೊಂಡ. ಆ ಡಾಕ್ಟರ್ರೂ ಊರಿನಲ್ಲಿರಲಿಲ್ಲ

"ಪೋಲಿಸರಿಗೆ ಕಂಪ್ಲೆಂಟ್ ಕೊಡೋಣ್ವಾ" ಚಿದಾನಂದ ಕೇಳಿದ.

"ಬೇಡ, ನಾವೇ ಸಂಶಯವನ್ನು ಪ್ರಕಟಿಸಿದಂತಾಗುತ್ತದೆ.. ಊರಿಗೆ ವಾಪಸ್ಸು ಹೋಗೋಣ. ಅತ್ತೆಗೆ ಫೋನು ಮಾಡಿದ್ರೆ ಗೊತ್ತಾಗುತ್ತೆ. ಆದರೆ ನಾವಾಗಿಯೇ ಕೇಳುವುದು ಬೇಡ.." ಇಬ್ಬರೂ ಊರಿಗೆ ವಾಪಸ್ಸಾಗಿದ್ದರು. ಇಬ್ಬರ ಮನದಲ್ಲೂ ಮಂಕು ಕವಿದಿತ್ತು. ಒಳಗೊಳಗೇ ಭಯವೂ ಕಾಡಿತ್ತು. ಇದು ಎಲ್ಲಿಂದ ಎಲ್ಲಿಗೆ ಹೋಗಿ ಮುಟ್ಟುವುದೋ ಎಂಬ ಚಿಂತೆ ಆವರಿಸಿಕೊಂಡಿತ್ತು. ಶ್ವೇತಾಳಿಗೆ ಚಿದಾನಂದನೊಡನೆ ಮಾತನಾಡುವ ಮನಸ್ಸಿಲ್ಲದೇ ಸುಮ್ಮನಾಗಿದ್ದಳು. ಅವನೂ ಸುಮ್ಮನಾಗಿದ್ದ

ಎರಡು ದಿನಗಳು ಕಳೆದಿದ್ದವು. ಪೋಲಿಸ್ ಸ್ಟೇಷನ್‌ನಿಂದ ಭುಜಂಗನಿಗೆ ಫೋನು ಬಂದಾಗ ಬೆವೆತ. ಚಿದಾನಂದನಿಗೆ ತಿಳಿಸಿ, ಅವನನ್ನು ತನ್ನೊಡನೆ ಕರೆದೊಯ್ದ. ಪೋಲಿಸ್ ಇನ್‌ಸ್ಪೆಕ್ಟರ್ ಮಾತಾಡಿದರು.

"ಇಲ್ಲಿಗೆ ಎರಡು ಮೂರು ಕಿಲೋ ಮೀಟರ್ ದೂರದಲ್ಲಿ, ನದಿಯ ದಡದ ಮೇಲೆ ನಮಗೆ ಒಂದು ಬಾಡಿ ಸಿಕ್ಕಿದೆ. ಹಾಗೇ ದಡದಲ್ಲಿ ಒಂದು ಹ್ಯಾಂಡ್‌ಬ್ಯಾಗ್ ಹಾಗೂ ಒಂದು ಪತ್ರ ಸಿಕ್ಕಿದೆ.. ಬ್ಯಾಗ್‌ನಲ್ಲಿ ನಿಮ್ಮ ಫೋನು ನಂಬರು ಇದ್ದ ಮೊಬೈಲ್ ಸಿಕ್ಕಿದೆ. ಬಾಡೀನಾ ಗುರುತಿಸ್ತೀರಾ!" ಕೇಳಿದರು. ಭುಜಂಗ ಬೆವೆತ.

"ಯಾವ ಬಾಡಿ ಸಾರ್? ಎಲ್ಲಿದೆ?" ಚಿದಾನಂದ ಕೇಳಿದ.

"ಇವರ್‍ಯಾರು?.." ಇನ್‌ಸ್ಪೆಕ್ಟರ್ ಕೇಳಿದ.

"ಇವರು ನಮ್ಮ ಸಂಬಂಧಿಯೇ.. ನಮ್ಮ ಜೊತೇಲಿದಾರೆ.. ಬಾಡಿ ಯಾರದ್ದು..?"

"ಡಾ||ಹೇಮಾ ಅವರದ್ದು ಅವರು ನಿಮಗೇನಾಗ್ಬೇಕು..?" ಇಬ್ಬರಿಗೂ ಉಸಿರು ಕಟ್ಟಿದಂತಾಗಿತ್ತು.

"ಅವಳು ನನ್ನ ಕಸಿನ್.. ಬೆಂಗಳೂರಿನ ಮೆಡಿಕಲ್ ಕಾಲೇಜ್ನಲ್ಲಿ ಓದುತ್ತಿದಾಳೆ..."

"ಓದುತ್ತಿದಾಳೆ ಅಲ್ಲ, ಓದುತ್ತಿದ್ರು. ಇದು ಹೇಮಾ ಅವರದ್ದೇ ಬಾಡಿ.. ಅವರ ಐ.ಡಿ. ಕಾರ್ಡ್ ಸಹ ಸಿಕ್ಕಿದೆ. ಹೋಗಿ ಐಡೆಂಟಿಫೈ ಮಾಡಿ.. ಅವರು ಇಲ್ಲಿಗೆ ಬಂದಿದ್ರಾ?.."

"ಹದಿನೈದು ದಿನಗಳ ಕೆಳಗೆ ಬಂದಿದ್ಲು, ಆಗಾಗ್ಗೆ ಬರ್ತಾ ಇರ್ತಾಳೆ.."

"ಸರಿ, ಹೋಗಿ ಬಾಡೀನ ಐಡೆಂಟಿಫೈ ಮಾಡಿ.. ಹಾಗೇ ಸಿಕ್ಕಿರುವ ವಸ್ತುಗಳನ್ನು ಗುರುತಿಸಿ. ಪಟ್ಟಿ ಮಾಡಿ.. ನಂತರ ಸಹಿ ಹಾಕಿ.. ಬಾಡೀನ ಕ್ಲೈಂ ಮಾಡಿ. ಪೋಸ್ಟ್ ಮಾರ್ಟಂ ಆದ ಮೇಲೆ ಕೊಡ್ತೀವಿ.." ಮಾಮೂಲು ಎಂಬಂತೆ ಇನ್‌ಸ್ಪೆಕ್ಟರ್ ಮಾತಾಡಿದ್ದ ಚಿದಾನಂದ ತಲೆಯಾಡಿಸಿ ನುಡಿದ.

"ಅವಳ ತಂದೆ ತಾಯಿ ಇದಾರೆ ಸಾರ್.. ವಯಸ್ಸಾಗಿದೆ.."

"ಅವರಿಗೂ ತಿಳಿಸೋಣ. ಅವರನ್ನು ಕರೆಸೋಣ.."

"ಅವಳ ತಂದೆಯ ಆರೋಗ್ಯ ಸರಿ ಇಲ್ಲ, ತಾಯಿಗೆ ಧೈರ್ಯವಿಲ್ಲ."

"ಹಾಗಂತ ತಿಳಿಸ್ದೇ ಇರೋಕೆ ಆಗುತ್ತಾ?.. ನಮ್ಮ ಡ್ಯೂಟಿ ನಮಗೆ ಗೊತ್ತು.. ನೀವು ಮೊದಲು ಹೋಗಿ ನೋಡಿ. ಅವರನ್ನು ಕರೆಸ್ತೀನಿ.." ಭುಜಂಗ ಚಿದಾನಂದ ಇಬ್ಬರನ್ನೂ ಪೋಲಿಸ್ ಜೀಪಿನಲ್ಲಿ ಸರ್ಕಾರಿ ಆಸ್ಪತ್ರೆಗೆ ಕರೆದುಕೊಂಡು ಹೋದರು.

ಕೆಲವೇ ಗಂಟೆಗಳಲ್ಲಿ ಪೋಲಿಸು ವ್ಯಾನು ವೈದೇಹಿ ಮನೆಯ ಮುಂದೆ ಬಂದು ನಿಂತಿತು. ಅವರೊಡನೆ ಭುಜಂಗ ಚಿದಾನಂದನೂ ಇಳಿದರು. ರಸ್ತೆಯ ಜನರೆಲ್ಲಾ ಒಬ್ಬೊಬ್ಬರಾಗಿ ಸೇರಿದರು. ವೈದೇಹಿಯ ಕೈ ಕಾಲುಗಳು ಥರಥರನೆ ನಡುಗಿದವು. ಮುಂಬಾಗಿಲಿಗೆ ಬಂದಳು. ಪೋಲಿಸರು ತಿಳಿಸಿದ ವಾರ್ತೆಯನ್ನು ಅರ್ಥಮಾಡಿಕೊಳ್ಳಲು ಸಮಯ ಹಿಡಿಯಿತು. ಕಾಲುಗಳ ಶಕ್ತಿಯನ್ನು ಕಳೆದುಕೊಂಡವಳಂತೆ ಕುಸಿದು ಬಿದ್ದಳು. ಭುಜಂಗ ಬಂದು ಅವಳನ್ನು ಹಿಡಿದುಕೊಂಡ. ಚಿದಾನಂದ ತಾಯಿಯನ್ನು ಕರೆದ. ವೈದೇಹಿ ನಂಬದವಳಂತೆ ತಲೆಯಾಡಿಸಿದಳು.. "ನನ್ನ ಮಗಳು ಅಂಥೋಳಲ್ಲ, ಡಾಕ್ಟರಾಗಿದ್ದವಳು.. ಆತ್ಮಹತ್ಯೆ ಮಾಡಿಕೊಳ್ಳುವಷ್ಟು ಹೇಡಿಯಾಗಿರಲಿಲ್ಲ ಅವಳು.. ಯಾರೋ ಏನೋ ಮಾಡಿದಾರೆ.. ನಾನು ನೋಡ್ಬೇಕು.. ಎಲ್ಲಿ ಎಲ್ಲಿ?" ಬಡಬಡಿಸಿದಳು.

"ಅದರ ವಿಚಾರಣೆಯನ್ನೆಲ್ಲಾ ನಾವು ಮಾಡ್ತೀವಿ ತಾಯಿ.. ಈಗ ನಿಮ್ಮ ಯಜಮಾನರೊಂದಿಗೆ ಸರ್ಕಾರಿ ಆಸ್ಪತ್ರೆಗೆ ಬರಬೇಕಾಗುತ್ತದೆ.." ಇನ್‌ಸ್ಪೆಕ್ಟರ್ ಹೇಳಿದ.

"ನೋಡೋ ಭುಜೀ.. ಇವರು ಏನೇನೋ ಆಡ್ತಿದಾರೆ. ನೀನಾದ್ರೂ ಹೇಳು.. ಹೇಮಾ ಎಷ್ಟು ಧೈರ್ಯವಂತೆಯಾಗಿದ್ಲು, ಇವಳು ಯಾರೋ ಏನೋ?.. ನೀನು ನೋಡಿದ್ಯಾ?.."

"ಇವರಿಬ್ಬರೂ ನೋಡಿದಾರೆ. ಆಮೇಲೇ ನಿಮಗೆ ತಿಳಿಸ್ತಿರೋದು. ಬನ್ನಿ ಹೊತ್ತಾಗುತ್ತೆ."

ಅವರು ಅವಾಂತರ ಪಡಿಸಿದಾಗ, ಸಾವಿತ್ರಿ ವೈದೇಹಿಯನ್ನು ಎಬ್ಬಿಸಿದಳು. ಅವಳಿಗೆ ಅಲ್ಪ ಸ್ವಲ್ಪ ಅರ್ಥವಾಗಿತ್ತು. ವೈದೇಹಿ ಸಾವಿತ್ರಿಯನ್ನು ಹಿಡಿದು ಜೋರಾಗಿ ಅಲುಗಾಡಿಸಿದಳು.

"ನೋಡಿ ಅತ್ತಿಗೇ.. ಇವರೆಲ್ಲಾ ಏನೇನೋ ಹೇಳ್ತಿದಾರೆ. ನಮ್ಮ ಹೇಮಾ ಹೇಡಿಯಲ್ಲ ಅಂತ ನೀವಾದ್ರೂ ಹೇಳಿ.. ಅವಳಿಗೆ ಏನಾಗಿತ್ತು ಆತ್ಮಹತ್ಯೆ ಮಾಡಿಕೊಳ್ಳುವಂಥ ಕರ್ಮ? ನಾನು ನಂಬುಲ್ಲ.. ಆತ್ಮಹತ್ಯೆಯಲ್ಲ... ಯಾರೋ ಕೊಲೆ ಮಾಡಿದಾರೆ... ಅವಳಇಗೆ ಆಗದವರು."

"ಯಾರಿಗೂ ನಂಬಿಕೆ ಬರುಲ್ಲ ವೈದೇಹಿ.. ಇವರು ಹೇಳುವ ಮಾತು ಸುಳ್ಳಾಗಿರಲಿ.."

"ನಾನು ಎಲ್ಲಿಗೂ ಬರುಲ್ಲ, ಭುಜಂಗ ನೀನಾದ್ರೂ ಹೇಳೋ ಇವರಿಗೆ.."

"ಹೋಗಲಿ ಬಿಡಿ ಇನ್‌ಸ್ಪೆಕ್ಟರ್. ಇವರಿಗೆ ಶಾಕ್ ಆಗಿದೆ. ಮಾವನ ಆರೋಗ್ಯ ಸರಿ ಇಲ್ಲ"

"ಇಲ್ಲ, ಹಾಗಾಗುಲ್ಲ" ಇನ್‌ಸ್ಪೆಕ್ಟರ್ ಮತ್ತೆ ನುಡಿದಾಗ, ಭುಜಂಗ ಅವರಿಗೆ ಕೈ ಮುಗಿದ.

"ನಾವಿಬ್ಬರೂ ನೋಡಿ, ಹೇಮಾಳದ್ದೇ ಅಂತ ಹೇಳಿದೀವಲ್ಲ, ಇನ್ಯಾಕೆ ಬಲವಂತ ಮಾಡ್ತೀರಿ! ಅವರಿಗೂ ವಯಸ್ಸಾಗಿದೆ. ಅವರನ್ನು ಬಿಟ್ಬಿಡಿ.. ಆದಷ್ಟು ಬೇಗ ಪೋಸ್ಟ್ ಮಾರ್ಟಂಗೆ ಸಿದ್ಧತೆ ಮಾಡಿ.. ನಾವಿಬ್ಬರೂ ನಿಮ್ಮ ಜೊತೆಗೆ ಬರ್ತೀವಿ. ನಾವೇ ಸಹಿ ಹಾಕ್ತೀವಿ, ಹೇಗೆ ಹೇಳ್ತೀರೋ ಹಾಗೇ ಆಗ್ಲಿ."

"ಏನು ಹೇಳ್ತಿದೀಯೋ ಭುಜೀ.. ಅವಳು ನಮ್ಮ ಹೇಮಾನೇ ಅಂತೀಯ.. ಸರಿಯಗಿ ನೋಡಿದ್ಯಾ! ಇವಳಿಗೇನು ಬಂತೋ ಕೇಡುಗಾಲ?.... ಈ ಮೊದಲು ನಮ್ಮ ಹೊಟ್ಟೆ ಉರಿಸಿದ್ದು ಸಾಲ್ದಾಗಿತ್ತಾ? ಈಗ ಏನು ಉಳಿದಿತ್ತು ? ..." ವೈದೇಹಿ ಕೂಗಾಡಿದಳು.

"ಅಮ್ಮ ಅತ್ತೆಯ ಜೊತೇಲೇ ಇರು.. ನಾವು ಈಗ ಹೋಗ್ಬೇಕು.." ಅಂತಂದ. ಅವನ ತಂದೆಯೂ ಅವನೊಂದಿಗೆ ಹೊರಟರು. ಬೀದಿಯ ಕೆಲವು ಮಂದಿಗಳು ಕೂಡಾ ಪೋಲಿಸ್ ಜೀಪ್‌ನ ಹಿಂದೆ ಹಿಂದೆ ಹೊರಟರು. ವಿಷಯ ಅಕ್ಕಪಕ್ಕದವರಲ್ಲಿ ಹರಡಿತ್ತು.

ಸಾವಿತ್ರಿಗೆ ವೈದೇಹಿಯನ್ನು ಸಮಾಧಾನಗೊಳಿಸುವುದು ಅಸಾಧ್ಯವೆನಿಸಿತ್ತು. ಮಂದಾಕಿನಿಯೂ ಅಕ್ಕನ ಬಳಿ ಕುಳಿತು ರೋಧಿಸತೊಡಗಿದಳು. ಶ್ವೇತಾ ಗೋಡೆಗೊರಗಿ ನಿಂತು ವೈದೇಹಿಯನ್ನು ನೋಡಿದಳು. ಪಾಪ ಅಂತೆನ್ನಿಸಿತು. ಜೊತೆಯಲ್ಲೇ ಮನಸ್ಸಿಗೆ ನಿರಾಳವೆನಿಸಿತ್ತು. ಈಗ ಹೇಮಾಳೇ ಇಲ್ಲ, ಅಲ್ಲಿಗೆ ಎಲ್ಲಾ ಸಮಸ್ಯೆಗೂ ಮುಕ್ತಾಯ.. ಮಗು ನನ್ನ ಬಳಿಯೇ ಉಳಿಯುತ್ತೆ. ಚಿದಾನಂದನೂ ಸುಮ್ಮನಾಗಬಹುದು ಅಂತಂದುಕೊಂಡಳು. ಪಲ್ಲವಿಯೊಡನೆ ಮಾತನಾಡಬೇಕೆನಿಸಿತ್ತು. ಸಾವಿತ್ರಿಯನ್ನು ಕೇಳಿದಳು.

"ಅತ್ತೇ, ಪಲ್ಲವಿ ಒಬ್ಬಳೇ ಇದಾಳೆ, ನಾನು ಹೋಗ್ಲಾ..?"

"ಏನೂ ಬೇಡ. ವಾಣಿ ಇದಾಳೆ, ಅಜ್ಜಿ ಇದಾರೆ. ಈಗ ನೀನು ಹೋದರೆ ಅವರು ಏನಾದ್ರೂ ಅಂದೇ ಅಂತಾರೆ.." ಶ್ವೇತಾ ಮೂತಿ ಚೂಪು ಮಾಡಿದಳು. "ಮಂದಾಕಿನಿ, ನಮ್ಮ ಮನೆಗೆ ಹೋಗಿ ಕಾಫಿ ಬೆರೆಸಿಕೊಂಡು ಬಾ.. ವೈದೇಹಿಗೆ ಕುಡಿಯಲು ಕೊಡು.. ಸುಸ್ತಾಗಿದೆ.."

"ನನಗೆ ಏನೂ ಬೇಡ ಅತ್ಗೇ.. ಪೋಲಿಸಿನವರು ಹೇಳಿದ್ದು ನಿಜ ಇರಲಾರದು

ಅಲ್ವಾ!..ಹೇಮಂಗೇನಾದ್ರೂ ಆಗಿದ್ರೆ ನಾನು ಹೇಗೆ ಬದುಕಿರಲಿ! "ನಾನ್ಯಾಕಿರ್ಬೇಕು?"

"ಸಮಾಧಾನ ಮಾಡ್ಕೋ ವೈದೇಹಿ.. ಭುಜಂಗ ಹೋಗಿದಾನಲ್ಲ.."

"ಭುಜಂಗನ್ನ ಮದುವೆ ಆಗಿದ್ದಿದ್ರೆ ಖಂಡಿತಾ ಹೀಗೆಲ್ಲಾ ಆಗ್ತಿರ್ಲಿಲ್ಲ.. ಅಲ್ಲಿ ಅವಳಿಗೆ ಏನಾಯ್ತೋ.. ಯಾರು ಮೋಸ ಮಾಡಿದ್ರೋ.. ನಾನಂತೂ ಬೈದೂ ಬೈದೂ ಶಾಪ ಹಾಕ್ತಿದ್ದೆ.. ಬೇಸರಗೊಂಡು ಏನು ಮಾಡ್ಕೊಂಡ್ಲೋ"

"ಹೀಗೇ ಗೋಳಾಡಿ ಸುಸ್ತು ಮಾಡ್ಕೊಂಡ್ರೆ, ನಿನ್ನ ಗಂಡನ್ನ ನೋಡ್ಕೋಳ್ಳೋರು ಯಾರು? ತಗೋ ಕಾಫಿ ಕುಡಿ.." ಮಂದಾಕಿನಿ ತಂದಿತ್ತ ಕಾಫಿಯನ್ನು ಕುಡಿಯಲು ಕೊಟ್ಟಳು. ವೈದೇಹಿ ಒಂದೆರಡು ಗುಟುಕು ಕುಡಿದು ಬಟ್ಟಲನ್ನು ಪಕ್ಕಕ್ಕೇ ಇಟ್ಟಳು.

"ಗಂಟಲಲ್ಲಿ ಹೇಗೆ ಇಳಿಯುತ್ತೆ ಅತ್ತಿಗೇ.. ಬಲವಂತ ಮಾಡ್ಬೇಡಿ.. ನಾನು ಹೇಮನ್ನ ನೋಡ್ಬೇಕು.. ಯಾಕೆ ಹೀಗೆ ಮಾಡ್ದೆ ಅಂತ ದಬಾಯಿಸಿ ಕೇಳ್ಬೇಕು.." ಇವಳ ಸಂಕಟಕ್ಕೆ ಕೊನೆಯಿಲ್ಲ ತಾನಾಗಿಯೇ ಸಮಾಧಾನ ಮಾಡಿಕೊಳ್ಳಲಿ ಎಂದು ಸುಮ್ಮನಾದಳು. ಮಂದಾಕಿನಿ ಪಲ್ಲವಿಗೆ ಊಟವನ್ನು ಬಡಿಸಲು ಹೋದಳು. ಪಲ್ಲವಿ ಮಂದಾಕಿನಿಯನ್ನು ಪ್ರಶ್ನಿಸಿದಳು.

"ಹೇಮಾ ಸತ್ತಿರೋದು ನಿಜಾನಾ?.. ಯಾಕೆ ಹಾಗೆ ಮಾಡ್ಕೊಂಡ್ಳಂತೆ.."

"ಏನೋ ಗೊತ್ತಿಲ್ಲ.. ಹೇಳೋರು ಯಾರು?" ಅಕ್ಕನ ಸಂಕಟಾನ ನೋಡೋಕಾಗ್ತಿಲ್ಲ.."

"ನಂಗ್ಯಾಕೋ ಭಯ ಆಗುತ್ತೆ.. ಅವಳಿಗೆ ಈ ಮಗು ಮೇಲೆ ಭಾಳ ಪ್ರೀತಿ ಇತ್ತು.."

"ಭಯ ಯಾಕೆ ಚೈತ್ರಾ! ಪ್ರೀತಿ ಇದ್ದಲ್ಲಿ ರಕ್ಷಣೆಯೂ ಇರುತ್ತೆ.. ಮಕ್ಕಳಿಗೆ ಕೆಡುಕು ಮಾಡುವಷ್ಟು ಕೆಟ್ಟವರು ಯಾರೂ ಇರುಲ್ಲ.." ಅರ್ಥಗರ್ಭಿತವಾಗಿ ನುಡಿದಳು.

"ನೀವು ಇಲ್ಲೇ ಇರಿ.. ಒಬ್ಬಳೇ ಇದ್ದರೆ ಏನೇನೋ ಯೋಚ್ನೆ ಬರುತ್ತೆ. ವಾಣಿ ಮೇಲಿನ ರೂಂನಲ್ಲಿ ಓದ್ಕೋತಿದಾಳೆ. ಅಜ್ಜಿ ಮಲಗಿದಾರೆ.." ಮಂದಾಕಿನಿ ವಿಸ್ಮಯದಿಂದ ನೋಡಿದಳು.

"ಆಯ್ತು ಇಲ್ಲೇ ಇರ್ತೀನಿ. ರಾಮ ನಾಮ ಸ್ಮರಣೆ ಮಾಡು. ಭಯವಾಗುಲ್ಲ, ಬೇಗ ಬೇಗ ಊಟ ಮಾಡು. ಆರಿ ಹೋಗುತ್ತೆ.." ಪಲ್ಲವಿ ಊಟವನ್ನು ಮುಗಿಸಿ, ಮಗುವನ್ನು ಪಕ್ಕದಲ್ಲಿ ಮಲಗಿಸಿಕೊಂಡು ಮಲಗಿದಳು. ಕಣ್ಣ ಮುಂದೆ ಹೇಮಾಳ ಚಿತ್ರ ಬಂದು ಬಂದು ನಿಲ್ಲುತ್ತಿತ್ತು. ಮನ ಅತ್ತ ಚಲಿಸಿತ್ತು. ಹೇಮಂಗ್ಯಾಕೆ ಇಂಥಾ ಕೆಟ್ಟ ಆಲೋಚನೆ ಬಂತು? ಎಲ್ಲರಿಂದ ದೂರ ವಿದೇಶಕ್ಕೆ ಹಾರಿ ಹೋಗದಿದ್ದಿದ್ರೆ ಆಗ್ತಿರ್ಲಿಲ್ವಾ! ತನಗೆ ತಾನೇ ಮೋಸ ಮಾಡಿಕೊಂಡಳು. ಭುಜಂಗನಿಗೆ ಎಲ್ಲಾ ಗೊತ್ತಿರುತ್ತೆ. ಕೇಳಿದ್ರೆ ಹೇಳ್ತಾರೋ ಇಲ್ವೋ.. ಈಚೆಗ್ಯಾಕೋ ಹೇಮನ ಬಗ್ಗೆ ಸ್ನೇಹ ಕಡಿಮೆ ಆಗಿತ್ತು. ಅವಳು ಏನನ್ನಾದ್ರೂ ಕೇಳಿರಬಹುದೋ? ಭುಜಂಗನ್ನ ಪ್ರೀತಿಸ್ತಿದ್ಲೇ?..ಪ್ರೀತಿ ಹೆಚ್ಚಾಗಿ ಹತ್ತಿರವಾಗಲು ಬಯಸಿರಬಹುದೇ.. ಇವರು ಛೀಮಾರಿ ಹಾಕಿರಬಹುದೇ?..ಅಷ್ಟಕ್ಕೆಲ್ಲಾ ಆತ್ಮಹತ್ಯೆ ಮಾಡಿಕೊಳ್ಳುವಷ್ಟು ದುರ್ಬಲ ಮನಸ್ಸಿನವಳಲ್ಲ ಅವಳು. ಹಾಗಾದ್ರೆ ಇನ್ನೇನಾಗಿರಬಹುದು..? ಯೋಚಿಸುತ್ತಾ ಮಲಗಿದ್ದವಳಿಗೆ ಹಾಗೇ ನಿದ್ದೆ ಬಂದಿತ್ತು. ಮಧ್ಯೆ ಮಧ್ಯೆ ಕನಸಿನ ಮಾಲೆ.. ಹೇಮಾಳ ಸುತ್ತ, ಅವಳಿಗೆ ಎಚ್ಚರವಾದಾಗ ಕತ್ತಲಾಗುತ್ತಾ ಬಂದಿತ್ತು. ದೀಪಗಳನ್ನು ಹಚ್ಚಿದ್ದರು.

"ಕಾಫಿ ಕೊಡ್ಲಾ ಕುಡಿತೀಯ?" ಮಂದಾಕಿನಿ ಕೇಳಿದಾಗ 'ಹೂಂ' ಅಂತಂದಳು.

"ಇನ್ನು ಯಾರೂ ಬಂದಿಲ್ವಾ! ಯಾಕೆ ತಡ ಆಗ್ತಿದೆ..?"

"ಏನೋ ಗೊತ್ತಿಲ್ಲ, ಪೋಲಿಸು, ಕೇಸು ಇವೆಲ್ಲಾ ಬೇಗ ಬಗೆ ಹರಿಯಬೇಕಲ್ಲ.." ನೀನು ಇದರ ಬಗ್ಗೆ ಚಿಂತಿಸ್ಬೇಡ ಚೈತ್ರಾ.. ಮೊದಲೇ ನಿನ್ನ ಮನಸ್ಸು ಸೂಕ್ಷ್ಮ ಈಗ ಬಾಣಂತಿ.."

"ಶ್ವೇತಾ ಎಲ್ಲಿದಾಳೆ! ಅವಳಿಗೆ ಭಯ ಆಗುಲ್ವಾ!.. ಅವಳೂ ಬಾಣಂತಿಯೇ.."

"ಅವಳ ಪಾಡಿಗೆ ಅವಳಿದಾಳೇ. ಅವಳು ಧೈರ್ಯವಂತೆ.. ಅವಳ ಬಗ್ಗೆ ನನಗೆ ಚಿಂತೆಯಿಲ್ಲ ನಿನ್ನದೇ ನನಗೆ ಚಿಂತೆ. ಹೇಮಾ ಇದ್ದುದ್ದು ಬೆಂಗಳೂರ್ನಲ್ಲಿ ಇಲ್ಲಿಗೆ ಯಾವಾಗ ಬಂದ್ಲೋ.. ತೊರೆಗೆ ಯಾಕೆ ಹಾರಿಕೊಂಡ್ಲೋ.. ಯಾರಿಗೂ ಗೊತ್ತೇ ಇಲ್ಲ ನೋಡು.." ಲೊಚಗುಟ್ಟಿದಳು.

ಪಲ್ಲವಿ ಒಂದು ಗಳಿಗೆ ಯೋಚಿಸಿ ನುಡಿದಳು. "ಅವಳಿಗೆ ಭುಜಂಗನನ್ನ ಮರೆಯೋಕೆ ಆಗಿರ್ಲಿಲ್ಲ, ಅವರು ನನ್ನನ್ನ ಮದುವೆಯಾದ್ರು ಅಂತ ಅಸೂಯೆ ಇತ್ತು. ತಾನು ಪ್ರೀತಿಸಿದವನನ್ನು ಮದುವೆ ಆಗಿದ್ರೂ.. ಅವಳಿಗೆ ನನ್ನ ಗಂಡನ ಮೇಲಿನ ಪ್ರೀತಿ ಹಾಗೇ ಇತ್ತು.. ಆ ಪ್ರೀತಿಯಿಂದ ಈ ಅನಾಹುತವಾಗಿದ್ರೆ, ಅವಳು ಭೂತವಾಗಿ ಬಂದು ಕಾಡದೇ ಇರ್ತಾಳಾ?" ಭೀತಿಯಿಂದ ನಡುಗಿದಳು.

"ಹೇಮಾ ಮದುವೆ ಆಗಿದ್ಲಾ?.. ಅವಳ ಗಂಡ ಯಾರು? ನಿಂಗೆ ಹೇಗೆ ಗೊತ್ತು?" ಪಲ್ಲವಿ ತುಟಿ ಕಚ್ಚಿದಳು.

"ಈ ವಿಷಯ ಗುಟ್ಟು.. ಭುಜಂಗನ ಹೊರತು ಇನ್ಯಾರಿಗೂ ಗೊತ್ತಿಲ್ಲ.."

"ಸರಿ ಬಿಡು, ನಾನು ಯಾರನ್ನೂ ಕೇಳುಲ್ಲ.." ಮಂದಾಕಿನಿ ಹಾಗೆ ಹೇಳಿದರೂ, ಅವಳ ಮಿದುಳು ಮಂಥನವನ್ನು ಪ್ರಾರಂಭಿಸಿತ್ತು. ಏನು ಎಡವಟ್ಟೋ..ಅಕ್ಕಂಗೆ ತಿಳಿಯದಂತೆ ಮದುವೆ, ಅಕ್ಕಂಗೆ ಈ ವಿಷಯ ತಿಳಿದ್ರೆ, ಖಂಡಿತಾ ಅವಳನ್ನು ಕ್ಷಮಿಸುವುದಿಲ್ಲ, ಯಾರೋ, ಯಾವ ಜನವೋ? ಎಲ್ಲಿದಾನೋ.. ಈಗ ಅಳಿಯ ಅಂತ ಹೇಳಿಕೊಂಡು ಬಂದರೇ..? ದುರಾಲೋಚನೆ ಹರಿದಿತ್ತು..

ರಾತ್ರಿಯ ಹೊತ್ತಿಗೆ ಎಲ್ಲವೂ ಮುಗಿದಿತ್ತು. ಮನೆಯ ಬಳಿಗೆ ತರುವುದು ಬೇಡ ಅಂತ ವೈದೇಹಿಯೇ ಹೇಳಿದ್ದರಿಂದ, ವೈದೇಹಿಯನ್ನು ಅವಳ ಗಂಡನನ್ನು ಜೀಪಿನಲ್ಲಿ ಕರೆದೊಯ್ದಿದ್ದರು. ವೈದೇಹಿ ಕುಸಿದು ಕುಳಿತಳು. ಜ್ಞಾನ ಹೋಗಿತ್ತು.. ಡಾಕ್ಟರು ನೋಡಿ ಮನೆಗೆ ಕರೆದೊಯ್ಯುವಂತೆ ಸಲಹೆ ನೀಡಿದ್ದರು. ಮತ್ತು ಬರುವ ಇಂಜೆಕ್ಷನ್ ಕೊಟ್ಟಿದ್ದರು. ನಿದ್ದೆ ಹೋಗಿದ್ದಳು. ಎಚ್ಚರಗೊಂಡಾಗ ಏನೂ ಉಳಿದಿಲ್ಲವೆಂದು ತಿಳಿಯಿತು. ಮಾತನಾಡಲು ಶಕ್ತಿ ಇಲ್ಲದವಳಂತೆ, ಮೌನವಾಗಿ ಕಲ್ಲಿನಂತೆ ಕುಳಿತಿದ್ದಳು. ಆ ರಾತ್ರಿ ಸಾವಿತ್ರಿ ಅಲ್ಲೇ ಉಳಿದುಕೊಂಡಳು. ಎಲ್ಲರೂ ವಾಪಸ್ಸಾಗಿದ್ದರು. ಭುಜಂಗನ ಮುಖವನ್ನು ನೋಡಿ, ಏನನ್ನಾದ್ರೂ ಕೇಳಬೇಕೆನ್ನಿಸಲಿಲ್ಲ ಪಲ್ಲವಿಗೆ. ಬೆಳಿಗ್ಗೆ ಅವನಾಗಿಯೇ ಹೇಳಬಹುದು ಅಂತಂದುಕೊಂಡಳು. ಸ್ನಾನ ಮುಗಿಸಿ, ಭುಜಂಗ ಅತ್ತೆಯ ಮನೆಗೆ ಹೋಗುವುದಾಗಿ ಹೇಳಿ ಹೊರಟ. ಆ ರಾತ್ರಿ ಅಲ್ಲಿಯೇ ಉಳಿದುಕೊಳ್ಳಬೇಕೆಂದುಕೊಂಡಿದ್ದ

"ಎಲ್ಲಾ ಮುಗಿಸಿ ಬಿಟ್ಟಲ್ಲೋ ಭುಜೀ.. ಇನ್ಯಾರಿಗೋಸ್ಕರ ನಾನು ಬದುಕಿರಲಿ?" ವೈದೇಹಿ

ಎದೆ ಎದೆ ಹೊಡೆದುಕೊಂಡು ಅತ್ತಾಗ ಅವನಿಗೂ ದುಃಖವಾಗಿತ್ತು. ಅತ್ತೆಯನ್ನು ತಬ್ಬಿಕೊಂಡು ಅತ್ತು ಬಿಟ್ಟ "ಪಾಪಿ ಕಣೋ ಅವಳು ಒಂದು ದಿನವೂ ನನ್ನ ಮಾತಿಗೆ ಬೆಲೆ ಕೊಡ್ಲಿಲ್ಲ.. ಹೇಳದೇ ಕೇಳದೇ ಹೋಗುವಂಥಾದ್ದು ಏನಾಗಿತ್ತು ಅವಳಿಗೆ? ಯಾರನ್ನಾದ್ರೂ ಪ್ರೀತಿಸ್ತಿದ್ಲಾ?.. ಪ್ರೀತಿಸಿದ್ರೆ ಹೇಳಿದ್ರೆ ಆಗ್ತಿರ್ಲಿಲ್ವಾ!.." ಭುಜಂಗ ಪೆಚ್ಚಾಗಿ ತಾಯಿಯ ಕಡೆ ನೋಡಿದ.

"ಈಗ ಈ ಮಾತೆಲ್ಲಾ ಯಾಕೆ ವೈದೇಹಿ.. ಏನಾದ್ರೂ ತಿಂದು ಮಲಕ್ಕೋ."

"ಅಷ್ಟೇ, ತಿನ್ನೋದು, ಮಲಗೋದು ಇನ್ನೇನು ಉಳಿಸಿದಾಳೇ..?" ಹುಶ್ ಎಂದು ನಿಟ್ಟುಸಿರನ್ನು ಬಿಟ್ಟು ಕುಳಿತಲ್ಲೇ ಉರುಳಿಕೊಂಡಳು. ಪದೇ ಪದೇ ಹೊರಳಾಡುತ್ತಲೇ ಇದ್ದಳು. ಗೊಣಗಾಣವೂ ಹೆಚ್ಚಾಗಿತ್ತು.

"ಅಮ್ಮಾ ನೀನು ಮನೆಗೆ ಹೋಗು. ಅಲ್ಲಿ ಪಲ್ಲವಿ ಒಬ್ಬಳೇ.. ಇಲ್ಲಿ ನಾನಿರ್ತೀನಿ.."

"ಬೇಡ, ನೀನು ಮನೆಗೆ ಹೋಗು, ಪಲ್ಲವಿಗೆ ನಿನ್ನ ಅಗತ್ಯವಿರುತ್ತೆ.. ಪಲ್ಲವಿಯ ಅನಗತ್ಯ ಸಂದೇಹ ಹೆಚ್ಚಾಗುತ್ತೆ.. ಅತ್ತೇಗೋಸ್ಕರ ಬೇಕಾದಷ್ಟು ಮಾಡಿದ್ದಾಗಿದೆ. ಈಗ ಹೋಗು." ಭುಜಂಗ ವಿಧೇಯನಂತೆ ಎದ್ದು ಮನಗೆ ಬಂದ.

"ಪಲ್ಲವೀ ನಿದ್ದೆ ಬಂತಾ!" ಹತ್ತಿರ ನಿಂತು ಕೇಳಿದ. ಅವಳು ಕತ್ತೆತ್ತಿ ನೋಡಿದಳು. ಏನಾದ್ರೂ ಬೇಕಾದ್ರೆ ಕೇಳು. ನಾನು ಇಲ್ಲೇ ಆಚೆ ಕಡೆ ಮಲಗಿರ್ತೀನಿ."

"ಬೇಡ ನೀವು ಹೋಗಿ ನಿಮ್ಮ ರೂಂನಲ್ಲಿ ಮಲಕ್ಕೊಳ್ಳಿ.. ಇಲ್ಲಿ ಆಂಟಿ ಇದಾರೆ.. ನಿಮಗೂ ದಣಿವಾಗಿರಬಹುದು.." ಭುಜಂಗ ಮಹಡಿಯನ್ನೇರಿದ. ವಿಚಿತ್ರ ಮೌನ ಆವರಿಸಿತ್ತು.

* * *

ದಿನಗಳು ಕಳೆದವು. ಹೇಮಾಳನ್ನು ಯಾರಿಂದಲೂ ಮರೆಯಲಾಗದಿದ್ದರೂ, ಯಾರೂ ಆದಷ್ಟೂ ಅವಳ ಹೆಸರನ್ನೆತ್ತುತ್ತಿರಲಿಲ್ಲ ಅವಳ ಬಗ್ಗೆ ಮಾತನ್ನಾಡುತ್ತಿರಲಿಲ್ಲ ವೈದೇಹಿ ಹೃದಯವನ್ನು ಕಲ್ಲು ಮಾಡಿಕೊಂಡಿದ್ದಳು. ತಾನಾಯಿತು, ತನ್ನ ಗಂಡನ ಯೋಗಕ್ಷೇಮ ಇಷ್ಟೇ ಅವಳ ಪ್ರಪಂಚವಾಗಿತ್ತು.. ಹೀಗೇ ಮುಂದುವರೆದರೆ ಅವಳು ಒಂಟಿಯಾಗಿ ಬಿಡ್ತಾಳೆ. ಅವಳನ್ನು ಈ ಪ್ರಪಂಚಕ್ಕೆ ತರಬೇಕೆಂದುಕೊಂಡಳು ಸಾವಿತ್ರಿ. ಮಂದಾಕಿನಿಗೂ ಹೇಳಿದ್ದಳು. "ಆದಷ್ಟು ಮಗುವನ್ನು ಅವಳ ಬಳಿ ಬಿಡು. ಅವಳ ಜ್ಞಾನ ಇತ್ಲಾ ಕಡೆಗೆ ಇರುತ್ತೆ. ಇಲ್ದಿದ್ರೆ ಏನಾಗಿ ಬಿಡ್ತಾಳೋ ಅಂತೆಂದಿದ್ದಳು.

ಶ್ವೇತಾ ಚಿದಾನಂದನನ್ನು ತನ್ನೆಡೆಗೆ ಸೆಳೆಯಲು ಪ್ರಯತ್ನಿಸುತ್ತಿದ್ದಳು. ಅವನು ಅವಳೊಡನೆ ಮಾತನಾಡುವುದನ್ನೇ ಕಡಿಮೆ ಮಾಡಿದ್ದ. ಅವಳು ಎಲ್ಲವನ್ನು ಮತ್ತೆ ಸರಿ ಮಾಡಿಕೊಳ್ಳಲು ಹವಣಿಸುತ್ತಿದ್ದಳು. ಹೇಮಾ ಇಲ್ಲದುದು ತನಗೆ ಅನುಕೂಲವಾಯಿತೆಂದುಕೊಂಡಳು. ಭುಜಂಗನನ್ನೂ ಸರಿ ಮಾಡಿಕೊಳ್ಳಲು ಯತ್ನಿಸುತ್ತಿದ್ದಳು ಅವನು ಅವಳಿಗೆ ತಿಳುವಳಿಕೆ ಹೇಳಿದ್ದ, ಆಗಬಾರದ್ದು ಆಗಿ ಹೋಯ್ತು. ಇನ್ನು ಮೇಲಾದರೂ ನ್ಯಾಯವಾಗಿರಲು ಪ್ರಯತ್ನ ಮಾಡಿ. ಇದರಿಂದ ನಿಮಗೇ ಒಳ್ಳೆಯದು. ನಿಮ್ಮ ಮಗುವಿನ ಭವಿಷ್ಯವೂ ಚೆನ್ನಾಗಿರುತ್ತೆ.." ಅವಳು ಮಾತನಾಡಿರಲಿಲ್ಲ.

ಚಿದಾನಂದನಿಗೂ ಹೇಳಿದ್ದ. "ಹೆಂಗಸರ ಮನಸ್ನಲ್ಲಿ ಏನಿದೆ ಅಂತ ಅರಿತುಕೊಳ್ಳೋದೇ ಕಷ್ಟ ಅದಕ್ಕೆ ನಮ್ಮ ಅನುಭವಗಳೇ ಸಾಕ್ಷಿ. ಶ್ವೇತಾಳೊಡನೆ ಮೇಲ್ನೋಟಕ್ಕಾದರೂ, ಜನ ಆಡಿಕೊಳ್ಳದಂತೆ ಇರಬೇಕಾಗುತ್ತದೆ.. ನಿಮಗೆ ಸ್ವಲ್ಪ ಕಷ್ಟವಾಗಬಹುದು.."

"ನಾನು ಅಮ್ಮನಿಗೋಸ್ಕರ ಎಲ್ಲವನ್ನೂ ಸಹಿಸಿಕೊಳ್ಳಬೇಕಾಗುತ್ತದೆ. ನನ್ನೊಂದಿಗೆ ನೀವು ಇಲ್ಲದಿದ್ದರೆ, ನಾನು ಎಂದೋ ಯಾರಿಗೂ ತಿಳಿಸದೇ ಹೊರಟು ಹೋಗ್ತಿದ್ದೆ" ಅಂತಂದ.

"ನಾನೂ ಎಷ್ಟೋ ಬಾರಿ ಹಾಗೆಯೇ ಯೋಚಿಸಿದೀನಿ. ಆದರೆ ಮನೆ ಬಿಟ್ಟು ಹೋದರೂ ನಮಗೆ ನೆಮ್ಮದಿ ಸುಖ ಹೇಗೆ ಸಿಗುತ್ತೋ ಇಲ್ಲವೋ.. ಇದು ನಾವು ಆರಿಸಿಕೊಂಡ ಜೀವನ. ಇಲ್ಲಿ ನಮ್ಮವರೂ ಇದಾರೆ.. ನಾವು ಸರಿಯಾಗಿದ್ದರೆ, ಕ್ರಮೇಣ ಎಲ್ಲವೂ ಸರಿ ಹೋಗುತ್ತದೆ ಅಂತ ಭಾವಿಸ್ತೀನಿ. ಚಿದಾನಂದ ತಲೆಯಾಡಿಸಿದ. ಮರೆತೂ, ಅವರಿಬ್ಬರೂ ಹೇಮಾಳ ಹೆಸರನ್ನೆತ್ತುತ್ತಿರಲಿಲ್ಲ

ಪಲ್ಲವಿ ಭುಜಂಗನ ಮೇಲೆ ರೇಗಿದ್ದಳು.. "ಈ ಕಾರಣದಿಂದ ನಮ್ಮ ಮಗುವಿನ ನಾಮಕರಣ ಸಮಾರಂಭ ನಡೆಯಲೇ ಇಲ್ಲ.. ಸ್ಕೂಲಿಗೆ ಸೇರಿಸುಕ್ಕಾದರೂ ಒಂದು ಹೆಸರು ಬೇಕು ಅಲ್ವಾ!.. ಆಗಲೂ 'ಪಾಪೂ' ಅಂತ ಕರೆಯೋಕೆ ಆಗುತ್ತಾ..?"

"ನಿನಗೆ ಯಾವ ಹೆಸರು ಇಷ್ಟವೋ ಅದನ್ನೇ ಇಟ್ಟರಾಯ್ತು" ನಿರುತ್ಸಾಹದಿಂದ ಹೇಳಿದ.

"ನಿಮಗ್ಯಾಕೆ ಇಷ್ಟು ಉದಾಸೀನ?.. ಹೇಮನ ಬಗ್ಗೇನೇ ಯೋಚಿಸ್ತಿರ್ತೀರಾ? ಇನ್ನಾದ್ರೂ ಅವಳನ್ನು ಮರೀಬಾರ್ದಾ? ಆಗಲೂ ನೆಮ್ಮದಿ ಕೆಡಿಸಿದ್ಳು, ಈಗಲೂ ನೆಮ್ಮದಿ ಇಲ್ಲದ ಹಾಗಾಗಿದೆ. ಭೂತವಾಗಿ  ನಮ್ಮ ಮಧ್ಯೆ ಓಡಾಡ್ತಿದಾಳೆ....."

"ನಂಗೇನು ಬೇರೆ ಯೋಚನೆಗಳೇ ಇಲ್ವಾ?.. ಅವಳ ಬಗ್ಗೆ ಯೊಚಿಸ್ತಿಲ್ಲ ನಾನು. ಇಲ್ಲದ ಸಲ್ಲದ ಕಲ್ಪನೆ ಮಾಡ್ಬೇಡ."

" ಮತ್ತೇ ಅಜ್ಜಿಯ ಕನಕಾಭಿಷೇಕದ ಚಿಂತೇನಾ?.. ಮಾಡಿದ್ರಾಯ್ತು.."

"ಅದನ್ನೆಲ್ಲ ಅಮ್ಮಂಗೇ ಬಿಟ್ಟಿದೀನಿ.. ನೀನ್ಯಾಕೆ ಇಷ್ಟು ಮಾತಾಡ್ತಿದೀಯ?"

"ಮಾತುಗಳೇ ಮರೆತು ಹೋಗಿದೆಯೇನೋ ಅನ್ನೋವಷ್ಟು ಎಲ್ರೂ ಮೌನವಾಗಿರ್ತೀರಿ ಯಾಕೆ? ನನ್ನ ಬಗ್ಗೆ ನಿಮಗೆ ಏನೂ ಅನ್ನಿಸುಲ್ವಾ! ಮೊದಲಿನಂತೆ ಇರೋಕೆ ಸಾಧ್ಯವೇ ಇಲ್ವಾ? ನನಗೆ ನೆಮ್ಮದಿಯ ಜೀವನ ಬೇಕು ಭುಜಂಗ್..."

"ಹಾಗಂತ ಯಾರು ಹೇಳಿದ್ರು? ನೀನು ಮೊದಲಿನ ಪಲ್ಲವೀನೇ.. ನಾನು ಮೊದಲಿನ ಭುಜಂಗನೇ" ಎನ್ನುತ್ತಾ ಅವಳನ್ನು ತಬ್ಬಿಕೊಂಡ. ಎಷ್ಟೋ ದಿನಗಳ ನಂತರದ ಗಾಢಾಲಿಂಗನ.. ಬಿಸಿ ಬಿಸಿ ಚುಂಬನ.. ಪಲ್ಲವಿ ಅವನ ಮೈಯ ಶಾಖಕ್ಕೆ ಕರಗಿ ಹೋದಳು. ಮತ್ತೊಮ್ಮೆ ಬಾಳಿನಲ್ಲಿ ನವ ಚೈತನ್ಯ ಹರಿದು ಸುರಿಯಿತು. ಭುಜಂಗನಿಗೂ ಎಲ್ಲವನ್ನೂ ಮರೆಯಲು ಸಾಧ್ಯವಾಗಿತ್ತು.."

"ನೀವೆಲ್ಲಿ ನನ್ನನ್ನ ಮರೆತೇ ಬಿಟ್ಟಿದ್ರೋ ಅಂತ ಚಿಂತೆಯಾಗಿತ್ತು" ಅಂತಂದುಕೊಂಡಳು.

"ಎಲ್ಲವನ್ನೂ ಮರೆಯಲು ನೀನೇ ಹೊಸ ಸಾಧನ" ಅಂತ ಅವನಂದುಕೊಂಡ. ಅವರಿಬ್ಬರ

ನಡುವೆ ಕಂಡೂ ಕಾಣದಂತೆ ಏರ್ಪಟ್ಟಿದ್ದ ಅಂತರ ಮುಚ್ಚಿ ಹೋಯಿತು, ಕಣ್ಮುಚ್ಚಿ ಒಂದಾದರು.

* * *

"ಚೈತ್ರಾ ಮತ್ತೆ ಗರ್ಭಿಣಿಯಾಗಿದಾಳೆ" ಎನ್ನುವ ವಿಷಯ ಎಲ್ಲರಿಗೂ ತಿಳಿಯಿತು. ಮತ್ತೆ ಸಂಭ್ರಮದ ವಾತಾವರಣ ಹರಡಿತು. ಪಲ್ಲವಿಯ ಬಗ್ಗೆ ಹೇಮಾ ಹೇಳಿದ್ದು ಸುಳ್ಳು ಎಂದು ಸಾವಿತ್ರಿಗೂ ತಿಳಿದಿತ್ತು. ಆದರೆ ಅದನ್ನು ಮಗನೊಡನೆ ಹೇಳಲಿಲ್ಲ. ಭುಜಂಗ ಹಳೆಯದೆಲ್ಲವನ್ನೂ ಮರೆತು ಮತ್ತೆ ಸಾಮಾನ್ಯ ಸ್ಥಿತಿಗೆ ಬರುತ್ತಿದಾನೆ.. ಬರಲಿರುವ ಮಗುವೇ ಹೊಸ ಬಾಳಿಗೆ ಸಂಕೇತ" ಅಂತಂದುಕೊಂಡಳು. "ಭುಜೀ ಎರಡನೇ ಮಗುವಿಗೆ ತಂದೆಯಾಗ್ತಿದಾನೆ.. ನನಗೆ ಕನಕಾಭಿಷೇಕವನ್ನೇ ಮಾಡಲಿಲ್ಲವಲ್ಲೇ ಸಾವಿತ್ರಿ" ಅಜ್ಜಿ ರಾಗ ಎಳೆದಿತ್ತು. ಸಾವಿತ್ರಿ ಅತ್ತೆಯ ಬಳಿ ಬಂದು ನಿಂತಳು.

"ನಿಮಗೊಳ್ಳೆ ಕನಕಾಭಿಷೇಕದ ಚಿಂತೆ.. ಈ ಮಗು ಹುಟ್ಟಿದ ಮೇಲೆ ಮಾಡಿಸೋಣ ಸಾವಿತ್ರಿಯೂ ಹುಸಿನಗೆಯನ್ನು ನಕ್ಕು ನುಡಿದಳು. ಭುಜಂಗ ಪಲ್ಲವಿಯ ಗಲ್ಲವನ್ನು ಹಿಡಿದೆತ್ತಿದ.

"ನೋಡಿದ್ಯಾ ಮಗುವಿನ ಆಗಮನವನ್ನು ಎಲ್ಲರೂ ಸಂಭ್ರಮದಿಂದ ನಿರೀಕ್ಷಿಸುತ್ತಿದಾರೆ.."

"ನನಗೆ ಇಷ್ಟು ಬೇಗ ಮತ್ತೊಂದು ಮಗು ಬೇಕಿರಲಿಲ್ಲ. ಆದರೆ ಏನ್ಮಾಡ್ಲೀ.. ಮದುವೆಯಾಗಿ ಎಷ್ಟೋ ತಿಂಗಳವರೆಗೆ ನಾನು ಗರ್ಭಿಣಿಯಾಗದಿದ್ದಾಗ ಎಷ್ಟೆಲ್ಲಾ ಆತಂಕ ಪಟ್ಟಿದ್ದೆ.. ಅದಕ್ಕೇ ಈಗ ಸುಮ್ಮನೇ ಇದೀನಿ.. ಇಲ್ದಿದ್ರೆ ಅಬಾರ್ಷನ್ ಮಾಡಿಸ್ಕೊಳ್ತಿದ್ದೆ."

"ನಾನು ಖಂಡಿತಾ ಒಪ್ಪಿಗೆ ಕೊಡ್ತಿರ್ಲಿಲ್ಲ. ನನಗೆ ಇನ್ನೂ ಎರಡು ಮಕ್ಕಳು ಬೇಗ ಬೇಗ ಆದ್ರೂ ಚಿಂತೆ ಇಲ್ಲ." ಅವಳೊಡನೆ ಕಳೆವ ರಸಮಯ ನಿಮಿಷಗಳ ಬಗ್ಗೆ ಯೋಚಿಸಿದ.

"ಯಾಕೆ ಅಷ್ಟು ಆಸೇನೋ?.." ಅವಳಿಗೂ ಗಂಡನ ಆಲೋಚನೆಯ ಸುಳಿವು ಸಿಕ್ಕಿತ್ತು.

"ಆಸೆ ಅಂತ್ಲಾದ್ರೂ ಅಂದ್ಕೋ.. ದುರಾಸೆ ಅಂತ್ಲಾದ್ರೂ ತಿಳ್ಕೋ.. ನನಗೆ ಬೇಕು.. ನಿನ್ನ ಸಹಕಾರ ಇದ್ದರೆ ಸಾಕು.." ಪಲ್ಲವಿ ಕಿಲ ಕಿಲ ನಕ್ಕು ಅವನ ಮೂಗನ್ನು ಹಿಂಡಿದಳು.

"ನಂಗೆ ಒಂದೇ ಬೇಜಾರು.. ಈ ನಡುವೆ ಪಾಪು ಯಾವಾಗ್ಲೂ ನಿಮ್ಮ ಅತ್ತೇ ಮನೆಲೇ ಇರ್ತಾನೆ.. ನಿಮಗೆ ಏನೂ ಅನ್ನಿಸುಲ್ವಾ?.." ಅವನು ಆ ಮನೇಲೇ ಬೆಳೆದು ದೊಡ್ಡವನಾಗಿ ಬಿಡ್ತಾನೆ.."

"ಇರಲಿ ಬಿಡು, ಅತ್ತೆಯ ಬೇಸರ ಕಳೆಯುತ್ತೆ.. ಅವರಿಗೆ ತಾನೇ ಬೇರೆ ಇನ್ಯಾರಿದಾರೆ..?"

"ನಿಮ್ಮತ್ತೆ, ಎರಡೂ ಮಕ್ಕಳನ್ನು ತೊಡೆಯ ಮೇಲೆ, ಅವಳಿ ಮಕ್ಕಳನ್ನು ಕೂರಿಸ್ಕೊಂಡಂತೆ ಕೂರಿಸ್ಕೊಂಡು ಮುದ್ದು ಮಾಡ್ತಾರಂತೆ.. ಶ್ವೇತಾ ಹೇಳಿದ್ಲು.. ಅವರಿಗೆ ಹೇಮಳ ನೆನಪು ಕಾಡ್ತಾ ಇರಬಹುದು."

"ಶ್ವೇತನ್ನ ಹೆಚ್ಚು ಮಾತಾಡಿಸ್ಬೇಡ. ನಿನ್ನ ತಲೆ ಕೆಡಿಸ್ತಾಳೆ.."

"ಅವಳಿಗೆ ಈಗ ನನ್ಮೇಲೆ ಅಸೂಯೆ.. ಅವಳಿಗೂ ಇನ್ನೊಂದು ಮಗು ಬೇಕಂತೆ. ಆದರೆ

ಒಂದು ತಮಾಷೆ ಗೊತ್ತಾ! ಚಿದಾನಂದ ಈಗ ಸನ್ಯಾಸಿಯಂತೆ ಆಗಿ ಬಿಟ್ಟಿದಾನಂತೆ. ಅವಳ ಮೇಲೆ ಪ್ರೀತೀನೇ ಇಲ್ವಂತೆ. ನೀವು ಅವನಿಗೆ ತಿಳುವಳಿಕೆ ಹೇಳ್ಬೇಕಂತೆ..'' ಕಿಸಿ ಕಿಸಿ ನಕ್ಕಳು.

''ಇದು ಅವನ ಸ್ವಂತ ವಿಚಾರ.. ನಾನು ಯಾರಿಗೂ ತಿಳುವಳಿಕೆ ಹೇಳುಲ್ಲ. ಅಂಥ ಮಾತನ್ನೆಲ್ಲಾ ನಿನ್ಹತ್ರ ಯಾಕೆ ಹೇಳ್ತಾಳೆ? ಅವರವರಲ್ಲಿ ಏನು ಸಮಸ್ಯೆಯೋ ಯಾರಿಗೆ ಗೊತ್ತು?''

''ಅವಳಿಗೆ ಬೇರೆ ಯಾರಿದಾರೆ!.. ಮೊದಮೊದಲು ಮಗೂನ ಕರ್ಕೊಂಡು ಹೊರಟು ಹೋಗ್ತೀನಿ ಅಂತ ಹೆದರಿಸ್ತಿದ್ಲಂತೆ.. ಚಿದಾನಂದ ಬೇಡ ಅಂತ ಅನ್ನಲಿಲ್ಲವಂತೆ.. ತೆಪ್ಪಗಾದ್ಲು. ಇಲ್ಲಿ ಹೊಟ್ಟೆ ಬಟ್ಟೆಗಾದ್ರೂ ಇದೆ. ಅಲ್ಲಿಗೆ ಹೋಗಿ ಏನ್ಮಾಡ್ತಾಳೆ?.. ಅಮ್ಮ ಕರೆಯುಲ್ಲ. ಅಣ್ಣ ಪತ್ತೆಯಿಲ್ಲ..''

''ನನಗ್ಯಾಕೆ ಅವಳ ಸುದ್ಧಿ? ಏನಾದ್ರೂ ಮಾಡ್ಕೊಳ್ಳಲಿ..'' ಉದಾಸೀನದಿಂದ ನುಡಿದ..

''ನೀವೇ ಅಲ್ವಾ ಅವರಿಬ್ಬರ ಮದುವೆ ಮಾಡಿಸಿದ್ದು.. ಇಬ್ಬರನ್ನು ಉದ್ಧಾರ ಮಾಡಿದ್ರಿ..''

''ಇನ್ಮೇಲೆ ಯಾರ ಮದುವೆ ಸುದ್ಧಿಗೂ ಹೋಗುಲ್ಲ. ಮಾತು ಸಾಕು. ಸುಮ್ನೆ ರೆಸ್ಟ್ ತಗೋ. ನಾನು ಗದ್ದೆ ಕಡೆಗೆ ಹೋಗಿ ಬರ್ತೀನಿ.'' ಭುಜಂಗ ಎದ್ದ.

''ನನಗೆ ಇನ್ನೊಂದು ಮಗು ಹುಟ್ಟಿದ್ರೆ, ನಿಮ್ಮ ತಂಗಿಗೆ ಬೇಸರ ಆಗುವುದು ಖಂಡಿತಾ, ಅವಳ ಬಗ್ಗೆ ನೀವ್ಯಾಕೆ ಉದಾಸೀನನಾಗಿಯೇ ಇದೀರಿ? ನಾನು ಆಗ್಩ಲೇ, ಹೇಮಾಳ ಹತ್ರ ಪರೀಕ್ಷೆ ಮಾಡಿಸಿ ಅಂತ ಹೇಳಿದ್ದೆ.. ನನ್ನ ಮಾತನ್ನು ಯಾರೂ ಕೇಳ್ಲೇ ಇಲ್ಲ..'' ಆಕ್ಷೇಪಣೆ ಮಾಡಿದಳು.

''ಅದು ಅವರ ಮನೆಯ ವಿಚಾರ.. ಅವರು ಏನಾದ್ರೂ ಮಾಡ್ಕೊಳ್ಳಲಿ..''ಎಂದು ಬಿಟ್ಟ.

''ಅತ್ತೇ, ವಿಜಯನ್ನ ಯಾವುದಾದ್ರೂ ಸ್ಪೆಷಲಿಸ್ಟ್‌ಗೆ ತೋರಿಸಿದ್ರೆ ಆಗುತ್ತೇ ಅಲ್ವಾ? ಅವರಿಗೂ ಮಕ್ಕಳು ಬೇಕು ಅಂತ ಆಸೆ ಇರುಲ್ವಾ?..''

''ಅವಳಿಗೆ ಆಸೆ ಇದೆ. ನಮಗೂ ಆಸೆ ಇದೆ. ಆದರೆ ಅವರ ಮನೆಯವರು ಯಾಕೋ ಯಾವ ಆಸಕ್ತಿಯನ್ನೂ ವಹಿಸಿಲ್ಲ. ನಾವೇನು ಮಾಡೋಕೆ ಆಗುತ್ತೆ?.. ಅವಳ ಮಾತು ನಡೆಯುಲ್ಲ.''

''ಹಾಗಾದ್ರೆ ನಿಮ್ಮ ಅಳಿಯ ಒಂದ್ಸಾರಿ ಸರಿಯಾಗಿ ಪರೀಕ್ಷೆ ಮಾಡಿಸ್ಕೋಬೇಕು..''

''ಪಲ್ಲವೀ..ಹೇಳಿದ್ನಲ್ಲ. ಅದು ಅವರ ಮನೆಯ ವಿಷಯ.. ನಾವು ಸಲಹೆ ಕೊಟ್ಟರೆ ಕೆಟ್ಟವರಾಗ್ತೀವಿ.. ಅವಳೂ ಹುಡುಗಿ. ಅವಳು ತಾನೇ ಹೇಗೆ ಹೇಳ್ತಾಳೆ?..'' ಪಲ್ಲವಿ ಸುಮ್ಮನಾದಳು.

* * *

ವಾಕರಿಕೆ, ಬಯಕೆ ಸಂಕಟ ಎಲ್ಲವನ್ನು ಪಲ್ಲವಿ ಸಹಿಸಿಕೊಂಡಳು. ಭುಜಂಗ ಅವಳನ್ನು ಎಚ್ಚರಿಕೆಯಿಂದ ನೋಡಿಕೊಂಡ. ದಿನಗಳು ಕಳೆದವು. ತಿಂಗಳುಗಳು ತುಂಬಿದವು.. ಪಲ್ಲವಿ ಪ್ರಕೃತಿಯ ಸಿರಿಯಂತೆ ಕಂಗೊಳಿಸಿದಳು. ಭುಜಂಗ ವಿಸ್ಮಯದಿಂದ ಅವಳನ್ನೇ ನೋಡುತ್ತಿದ್ದ.

''ಪಲ್ಲವೀ ನಿಂಗೆ ಆಯಾಸವೇ ಆಗುಲ್ವಾ?.. ಎರಡೆರಡು ಜೀವಗಳ ಭಾರ ಇದೆ..''

''ಇದನ್ನು ಭಾರ ಅಂತ ಯಾರಾದ್ರೂ ಅಂತಾರಾ?.. ಇದು ನನ್ನ ದೇಹದ ಇನ್ನೊಂದು

ಅಂಗ.. ಇಲ್ಲಿ ನನ್ನ ರಕ್ತ ಹರೀತಿದೆ. ನಿಮ್ಮ ರಕ್ತ ಬೆರೆತಿದೆ.. ಇದು ನನ್ನ ಭಾಗ್ಯ.. ನನ್ನ ಆಸ್ತಿ."

"ಅದಕ್ಕೇ ಹೆಣ್ಣಿಗೆ ಸಹನೆ ಜಾಸ್ತಿ ಅಂತ ಹೇಳ್ತಾರೆ.. ನೀನು ನನ್ನನ್ನು ತಡೆದುಕೊಳ್ತೀಯ.. ನನ್ನ ಮಗುವನ್ನು ಹೊತ್ತಿದೀಯಾ.. ಹೆರಿಗೆ ನೋವನ್ನು ಅನುಭವಿಸ್ತೀಯ...ಬಾಣಂತನದಲ್ಲಿ ಪಥ್ಯ ಮಾಡ್ತೀಯ.. ಆದರೂ ನಗು ನಗ್ತಾ ಇರೋಕೆ ಸಾಧ್ಯಾನಾ ಅಂತ ಯೋಚಿಸ್ತಿದ್ದೆ."

"ನೀವೂ ಹೆಣ್ಣಾಗಿದ್ದಿದ್ರೆ ನಿಮಗೇ ಎಲ್ಲಾ ಅನುಭವವಾಗ್ತಿತ್ತು.." ಅವನಿಗೆ ಕಚಗುಳಿಯನ್ನಿಟ್ಟು ನಕ್ಕಳು. ಅವನು ಕೈಯನ್ನು ಸರಿಸಿದ...ಅವಳೂ ಬಲವಂತವಾಗಿ ಮತ್ತೂ ಕಚಗುಳಿಯನ್ನಿಟ್ಟಳು.. ಅವನು ನೋವಿನಿಂದ ಮುಖವನ್ನು ಕಿವುಚಿ ಅವಳಿಂದ ದೂರ ಸರಿದ.

"ಏನಾಯ್ತು ಭುಜಂಗ್.. ನಗೋ ಬದ್ಲು ನೋವಿನಿಂದ ಮುಖ ಹಿಂಡ್ತೀದೀರಲ್ಲ.."

"ಏನಿಲ್ಲ.." ಏನನ್ನೋ ಮುಚ್ಚಿಡುವಂಥ ಭಾವವಿತ್ತು ಅವನ ಮಾತಿನಲ್ಲಿ

"ಏನೂಂತ ನೀವು ಹೇಳ್ಲೇ ಬೇಕು. ನಾನು ನೋಡ್ತೀನಿ.." ಷರಟನ್ನು ಬಲವಂತವಾಗಿ ಬಿಚ್ಚಿ ನೋಡಿದಳು. ಬೆನ್ನ ಮೇಲೆ ಒಂದೆರಡು ಕಡೆ ಗಾಯಗಳಾಗಿದ್ದವು.

"ಗಾಯ? ಗಾಯ ಯಾವಾಗಾಯ್ತು! ನಂಗೆ ಹೇಳ್ಲೇ ಇಲ್ಲ. ಯಾಕಾಯ್ತು?"

"ಏನೂ ಇಲ್ಲ ಅಂತ ಅಂದ್ನಲ್ಲ.. ಬೈಕ್ ಹತ್ತುವಾಗ ಆಯ ತಪ್ಪಿ ಬಿದ್ದೆ.. ಎರಡು ಮೂರು ದಿನಗಳಲ್ಲಿ ವಾಸಿ ಆಗುತ್ತೆ.."

"ಡಾಕ್ಟರ ಹತ್ರ ಹೋಗಿದ್ರಾ?..ಇಂಜೆಕ್ಷನ್ ತಗೊಂಡ್ರಾ?.."

"ಇಷ್ಟಕ್ಕೆಲ್ಲ ಯಾಕೆ! ಭಾರೀ ಪೆಟ್ಟೇನೂ ಬಿದ್ದಿಲ್ಲವಲ್ಲ.."

"ಎರಡು ಮೂರು ಕಡೆ ಜಜ್ಜಿದ ಗಾಯಗಳಾಗಿವೆ. ಭಾರಿ ಏನೂ ಇಲ್ಲ ಅಂತೀರಲ್ಲ. ಇನ್ನು ಎಲ್ಲೆಲ್ಲಿದೆಯೋ ನಾನು ನೋಡ್ಬೇಕು.." ಎನ್ನುತ್ತಾ ಅವನ ಬೆನ್ನ ಮೇಲೆ ದೃಷ್ಟಿ ಹಾಯಿಸಿದಳು. ಅವನು ಷರಟನ್ನು ಹಾಕಿಕೊಳ್ಳಲು ನೋಡಿದ. "ನನ್ನ ಹತ್ರಾನೂ ನಾಚಿಕೇನ.. ನಾನು ನಿಮ್ಮ ಹೆಂಡ್ತಿ.. ಸುಮ್ಮನಿರಿ" ಎನ್ನುತ್ತಾ. ಬೆನ್ನ ಉದ್ದ ಅಗಲಗಳ ಮೇಲೆ ಕೈಯಾಡಿಸಿ ನೋಡಿದಳು.. ಉದ್ಗರಿಸಿದಳು.."

"ಅರೇ..ನಿಮ್ಮ 'ಗರುಡ ಮಚ್ಚೆಗೆ' ಏನಾಯ್ತು?.. ಕಾಣ್ತಾನೇ ಇಲ್ಲ.. ಮಾಯವಾಗಿದೆ."

"ಒಳ್ಳೇದೇ ಆಯ್ತು.." ಎಂದು ಹೇಳಿ, ಅಲ್ಲಿದ್ದ ಟವೆಲ್ಲನ್ನು ಹೊದ್ದುಕೊಂಡ.

"ಏನಾಯ್ತು ಹೇಳಿ.. ಅಲ್ಲಿ ತಿಳಿಯಾದ ಕಲೆ ಇದೆ.. ಅದ್ಹೇಗೆ ಮಾಯವಾಯ್ತು?"

"ಬೇಜಾರ್ರು ಮಾಡ್ಕೊಂಡು ಮಾಯವಾಗಿರ್ಬೇಕು..." ನಗಲು ಯತ್ನಿಸಿದ.

"ಇಲ್ಲ, ಹುಟ್ಟು ಮಚ್ಚೆ ಹಾಗೆಲ್ಲಾ ಹೋಗುಲ್ಲ. ನೀವೇ ಏನನ್ನೋ ಹಚ್ಚಿಕೊಂಡಿರ್ಬೇಕು.. ನಿಜ ಹೇಳಿ.. ಏನ್ಮಾಡಿದ್ರಿ? ಏನೋ ಮಾಡಿದೀರಿ.." ತೋರು ಬೆರಳನ್ನೆತ್ತಿ ನುಡಿದಳು.

"ಮೆಲ್ಲಗೆ ಮಾತಾಡೇ ಮಾರಾಯ್ತಿ.. ಅಮ್ಮಂಗೆ ಕೇಳಿಸೀತು.. ಅದನ್ನು ತೆಗೆಸ್ಬಿಟ್ಟೆ.. ಎಷ್ಟೋ ತಿಂಗಳುಗಳಾದವು.."

"ತೆಗೆಸಿದ್ರಾ? ಅದರಿಂದ ನಿಮಗೇನು ತೊಂದರೆ ಆಗ್ತಿತ್ತು?" ಅಸಹನೆಯನ್ನು ತೋರಿದಳು.

"ಈ ನಡುವೆ ಆ ಜಾಗದಲ್ಲಿ ವಿಪರೀತ ಕಡಿತ ಆಗ್ತಿತ್ತು.. ಚರ್ಮರೋಗದ ಡಾಕ್ಟರ್ ಹತ್ರ ಹೋಗಿ ತೋರಿಸ್ಕೊಂಡೆ.. ತೆಗಿಸಿ ಬಿಡಿ ಅಂತಂದ್ರು.. ತೆಗೆಸಿ ಬಿಟ್ಟೆ." ಸುಳ್ಳು ಹೇಳಿದ.

"ನಾನು ಎಲ್ಲೂ ಕೇಳಿರ್ಲಿಲ್ಲ.. ಕಡಿತ ಆಗ್ತಿತ್ತು ಅಂತಂದ್ರೆ ನಾನು ನಂಬುಲ್ಲ."

"ನಂಬದೇ ಇರುವ ವಿಷಯಗಳು ಬೇಕಾದಷ್ಟಿವೆ.. ನಿಜವಾದ ಕಾರಣವನ್ನು ನಾನು ಹೇಳುಕ್ಕೆ ಸಾಧ್ಯವಿಲ್ಲ" ಅಂತಂದುಕೊಂಡು ಸುಮ್ಮನಾದ.

"ನನಗೆ ಒಂದ್ಮಾತು ತಿಳಿಸದೇ ಈ ನಿರ್ಧಾರ ಯಾಕೆ ಮಾಡಿದ್ರಿ?.. ನೀವೇ ನಿರ್ಧಾರ ತಗೊಂಡಿದ್ದು ಸರಿಯಲ್ಲ, ನನ್ನ ಗಂಡನಿಗೆ 'ಗರುಡ ಮಚ್ಚೆ' ಇದೆ ಅಂತ ನಿಮ್ಮ ಬಗ್ಗೆ ನನಗೆ ಹೆಮ್ಮೆ ಇತ್ತು.."

"ಗರುಡ ಮಚ್ಚೆ ಇದ್ದರೂ, ಇಲ್ಲದಿದ್ದರೂ ನಾನು ನಿನ್ನ ಗಂಡನೇ.. ನನ್ನ ಪ್ರೀತಿ ಮುಖ್ಯವೋ ಈ ಮಚ್ಚೆ ಮುಖ್ಯವೋ.. ಯಾರಾದ್ರೂ ಕೇಳಿದ್ರೂ ತೋರಿಸುಕ್ಕೆ ಆಗ್ತಿರಲಿಲ್ಲ. ಹಾಗಿತ್ತು.."

"ಎಲ್ಲೋ ಮರೆಯಾಗಿ ಅಡಗಿತ್ತು.. ಅದರ ಮೇಲ್ಯಾಕೆ ಸಿಟ್ಟು?"

"ಸುಮ್ಮನೇ ಒತ್ತುತ್ತಿತ್ತು.. ಹಿಂಸೆ ಆಗ್ತಿತ್ತು.. ಈಗ ಆರಾಮವಾಗಿದೀನಿ. ಅದನ್ನು ತೆಗೆಸಿದ ಮೇಲೆ ನಾನು ಈಗ ಶಾಂತಿಯಿಂದ ಇದೀನಿ.. ಉಪಯೋಗವಿಲ್ಲದ ಮಚ್ಚೆಯಿಂದೇನು ಪ್ರಯೋಜನ?"

"ಹೇಮನ ನೆನಪು ಬರದಿರಲಿ ಅಂತ ತೆಗೆಸ್ಕೊಂಡ್ರಾ?.." ಅನುಮಾನದ ದನಿ ಹೊರಟಿತು.

"ಇದಕ್ಕೂ ಅವಳಿಗೂ ಯಾವ ಸಂಬಂಧವಿರಲಿಲ್ಲ, ಇದು ನನ್ನ ಇಷ್ಟ. ಇಂಥ ತಲೆ ಹರಟೆ ಪ್ರಶ್ನೆಗಳನ್ನು ಕೇಳ್ಬೇಡ.." ರೇಗಿ ನುಡಿದವನನ್ನು ತನ್ನೆಡೆಗೆ ಎಳೆದುಕೊಂಡಳು.

"ಗರುಡ ಮಚ್ಚೆ ಹೋದ್ರೂ ಈ ಭುಜಂಗನ ಸಿಟ್ಟು ಮಾತ್ರ ಕಡಿಮೆಯಾಗಲಿಲ್ಲ." ಮಚ್ಚೆ ಇದ್ದ ಜಾಗದ ಮೇಲೆ ಕೈಯಾಡಿಸಿದಳು.

"ಹುಟ್ಟುಗುಣ ಸುಟ್ಟರೂ ಹೋಗದು ಅಂತ,.. ನೀನು ಇನ್ನೆಂದೂ ಈ ಗರುಡ ಮಚ್ಚೆಯ ಪುರಾಣವನ್ನು ಎತ್ತಬಾರದು.. ಹಾಗೂ ಯಾರಿಗೂ ಇದರ ಬಗ್ಗೆ ಹೇಳಬಾರದು.."

"ಎಂಥಾ ಕೆಲಸ ಮಾಡಿದ್ರಿ ಭುಜಂಗ್.. ನಾಗರಹಾವಿಗೆ ಹೆಡೆಯೇ ಇಲ್ದಿದ್ರೆ ಹೇಗೋ ಹಾಗೇಂತ ಅನ್ಸುತ್ತೆ.." ವ್ಯಥೆಯಿಂದ ನುಡಿದಳು.

"ಅದಕ್ಕೇನಂತೆ?.. ನಾನು ಹೊಸಾ ಗರುಡ ಮಚ್ಚೆಯನ್ನು ಕಸಿ ಮಾಡಿಸಿಕೊಳ್ತೀನಿ.. ಈ ಸಾರಿ ಎದೆಯ ಮೇಲೆ ಮಾಡಿಸಿಕೊಳ್ತೀನಿ, ನಿನಗೆ ಯಾವಾಗ್ಲೂ ಕಾಣ್ತಾ ಇರ್ಬೇಕು.. ಯಾವ ತರಹ ಇರ್ಲಿ?"

"ನಿಮಗೆ ತಮಾಷೆ. ಮಚ್ಚೆಯನ್ನು ಯಾರಾದ್ರೂ ಕಸಿ ಮಾಡಿಸ್ಕೊಳ್ತಾರಾ..?.."

"ನಾನು ಮಾಡಿಸಿಕೊಳ್ತೀನಿ. ಈ ಕಾಲದಲ್ಲಿ ಎಲ್ಲವೂ ಸಾಧ್ಯ. ಹೊಸ ಹೆಡೆಯ ಭುಜಂಗನಾಗ್ತೀನಿ. ಆಮೇಲೆ ನಮ್ಮಿಬ್ಬರ ಪ್ರೀತಿ ಇನ್ನೂ ಗಾಢವಾಗುತ್ತೆ..." ಅವನು ಅವಳನ್ನು

ತಬ್ಬಿಕೊಳ್ಳಲು ಮುಂದಾದ. ಅವಳು ಹಿಂದೆ ಸರಿದಳು.

"ಮಗೂಗೆ ಎಚ್ಚರವಾಗಿದೆ. ನೋಡಿ ಹೇಗೆ ಓಡಾಡ್ತಿದೆ!.." ಅವನ ಕೈಯನ್ನು ತನ್ನ ಒಡಲ ಮೇಲೆ ಇರಿಸಿಕೊಂಡಳು. ಒಡಲ ಮೇಲೆ ಕೈಯಾಡಿಸಿ, ಚುಂಬಿಸಿದ. ಮಮತೆ ಉಕ್ಕಿತು.

* * *

ಭುಜಂಗನ ಉಲ್ಲಾಸ, ಉತ್ಸಾಹವನ್ನು ಸಾವಿತ್ರಿ ಗಮನಿಸಿದಳು. ಪಲ್ಲವಿಯ ಆರತಕ್ಷತೆಗೆ ಸಿದ್ಧತೆಗಳನ್ನು ನಡೆಸಿದಳು. ಒಡವೆಗಳನ್ನು ಖರೀದಿಸಿದಳು. ಹಸಿರು ರೇಶಿಮೆ ಸೀರೆಯನ್ನು ತಂದಳು. ಒಳ್ಳೆಯ ದಿನವನ್ನು ಗೊತ್ತು ಮಾಡಿದಳು. ಅಜ್ಜಿ ಕೇಳಿತ್ತು.

"ಚೊಚ್ಚಲು ಬಸಿರೀಲಿ ಎಲ್ಲಾ ಆಗಿತ್ತಲ್ಲೇ ಸಾವಿತ್ರಿ.. ಈಗ ಮತ್ಯಾಕೇ ಈ ಅದ್ದೂರಿ?"

"ಚೊಚ್ಚಿಲಾದರೇನು? ಮರುಚಲಾದರೇನು?.. ಬಸಿರಲ್ಲಿರುವ ಮಗು ಬೇರೆ ಬೇರೆ ತಾನೇ ಜನ್ಮ ಹೋದರೆ ತಾನೇ ? ನಾವೇ ಯಾಕೆ ಭೇದ ಮಾಡ್ಬೇಕು?" ಮುಂದೆ ಮಗು ಆಡಿಕೊಂಡರೆ? ಅದಕ್ಕೂ ಎಲ್ಲಾ ಹಕ್ಕು ಇದೆ.."

"ಚೆನ್ನಾಗಿದೆ ನಿನ್ಮಾತು.. ನಮ್ಮ ಕಾಲ್ದಲ್ಲಿ ಹೀಗೆಲ್ಲಾ ಮಾತೇ ಬರ್ತಿರ್‍ಲಿಲ್ಲ, ಅತ್ತೆ ಮನೆಯವರು ಹೇಳಿದ್ದು ನಾವು ಕೇಳಿದ್ದು ಆಸೆ, ಅಕರಾಸ್ತೆ, ಭೇದ, ಹಕ್ಕು ಅಧಿಕಾರ.. ಏನೇನೋ ಆಡ್ತೀಯ.."

"ಈಗೇನು ನಂಗೋಸ್ಕರ ಕೇಳಿದ್ನೆ?.. ಭುಜಂಗನಿಗೋಸ್ಕರ ಮಾಡ್ತಾ ಇದೀನಿ.."

"ಅದೂ ಸರಿಯೇ.. ಆ ಮಗು ಹುಟ್ಟಿದ ಗಳಿಗೆ ಹೇಗಿತ್ತೋ ಏನೋ! ಒಂದು ಸಂಭ್ರಮ ಕಾಣ್ಲಿಲ್ಲ, ಹೇಮನ್ನ ಬಲಿ ತಗೊಂಡ್ತು.. ಈ ಬಾರಿ ನಂಗೆ ಎರಡು ಸೀರೆ ತರ್ಬೇಕು.. ಈಗ್ಲಾದ್ರೂ ಕನಕಾಭಿಷೇಕ ಮಾಡ್ತಾನಂತೋ ಹೇಗೆ? ಒಂದ್ವರ್ಷದಿಂದ ಕಾಯ್ತಾನೇ ಇದೀನಿ.."

"ಎಲ್ಲಾ ಸುಖಮುಖವಾಗಿ ಆಗ್ಲಿ ಅತ್ತೇ.. ಮಾಡ್ದೇ ಇರ್ತೀವೆ? ಎರಡು ಸೀರೆ ಯಾಕೆ? ಆರು ಸೀರೆ ತರಿಸ್ತೀನಿ.." ಅತ್ತೆಯ ಬಾಯಿಯನ್ನು ಮುಚ್ಚಿಸಿದಳು ಸಾವಿತ್ರಿ. ಶ್ವೇತಾ ಬಂದಿದ್ದಳು.

"ನಿನ್ನನ್ನು ನೋಡಿದ್ರೆ ಅಸೂಯೆ ಆಗುತ್ತೆ ಕಣೇ.. ನಾನು ನಿನ್ನ ಅತ್ತಿಗೆ. ಸನ್ಯಾಸಿನಿಯ ಥರ ಒಣಕಲು ಜೀವನ ನಡೆಸ್ತಿದೀನಿ.. ನೀನು ಇನ್ನೊಂದು ಮಗುವಿಗೆ ಸಿದ್ಧತೆ ಮಾಡ್ಕೊಂಡಿದೀಯ.... ಏನೇ ಹೇಳು ನಿನ್ನ ಗಂಡ ಅತಿ ರಸಿಕ.." ಶ್ವೇತಾ ಪಲ್ಲವಿಯ ಗಲ್ಲವನ್ನು ಹಿಂಡಿದಳು.

"ಅದೆಲ್ಲಾ ನೀನು ಪಡೆದು ಬಂದದ್ದು.. ಚಿದಾನಂದ ನಿನ್ನನ್ನೇನಾದ್ರೂ ಮದುವೆಯಾಗು ಅಂತ ಕೇಳ್ಕೊಂಡಿದ್ನಾ? ಅನುಭವಿಸು.. ನೀನೇನ್ಮಾಡ್ದೆ ಅವನಿಗೆ?"

"ನೀನಾದ್ರೂ ಚಿದಾನಂದನ ಹತ್ರ ಹೇಳೇ.. ಈ ಲಕ್ಷಣಕ್ಕೆ ಮದುವೆ ಯಾಕೆ ಬೇಕಿತ್ತೋ..?"

"ಸರಿ, ಈಗೇನು? ನನ್ನ ಮೇಲಿನ ಸೇಡಿಗೆ ನಿನಗೆ ಒಂದು ಮಗು ಆಗ್ಬೇಕು.. ಹೌದಾ?"

"ಮಗುವಾಗದಿದ್ರೂ ಪರವಾಗಿಲ್ಲ.. ನಾನು ಹೆಂಗ್ಸೂ ಕಣೇ.. ನಂಗೂ ಆಸೆಗಳಿವೆ. ಅರ್ಥ ಮಾಡ್ಕೋ.."

“ನಿನಗೆ ಗಂಡಸರನ್ನ ಒಲಿಸಿಕೊಳ್ಳುವ ವಿಧಾನ ಗೊತ್ತಿಲ್ಲ. ಶರತ್‌ಗೆ ಬಲೆ ಬೀಸಿದೆ. ಚಿದಾನಂದನನ್ನ ಗಾಳಕ್ಕೆ ಎಳೆದೆ.. ಈಗಲೂ ನಿನಗೆ ಯೌವನ ಇದೆ. ಚಾಲಾಕಿತನ ಇದೆ..”

“ಈಗ ಆ ಟ್ರಿಕ್ ನಡೀತಿಲ್ಲ, ಹೇಮಾ ಸತ್ತು ಹೋದ್ಮೇಲೆ ಚಿದಾನಂದ ನನ್ನನ್ನ ಶತ್ರು ಥರ ನೋಡ್ತಾರೆ.. ನನ್ನನ್ನ, ಮಗೂನ ದ್ವೇಷಿಸ್ತಾರೆ.. ಸಂಕಟ ಆಗುತ್ತೇ ಕಣೇ..”

“ನೀನು ಅಂಥಾ ಕೆಲಸ ಏನೋ ಮಾಡಿರ್ಬೇಕು.. ಇಲ್ದಿದ್ರೆ ಚಿದಾನಂದ ಅಷ್ಟು ಕೆಟ್ಟವನಲ್ಲ..”

“ನಿನಗೀಗ ಎಲ್ರೂ ಒಳ್ಳೆಯವರ ಥರ ಕಾಣ್ತಾರೆ.. ಆ ದಿನಗಳನ್ನೆಲ್ಲಾ ಮರೆತು ಬಿಟ್ಯಾ!..”

“ಹೂಂ, ನಿಂಗೂ ಒಳ್ಳೆಯ ದಿನಗಳು ಬರುತ್ತೆ. ತಾಳ್ಮೆಯಿಂದಿರು.. ನಾನು ಭುಜಂಗನಿಗೆ ಹೇಳ್ತೀನಿ.. ಚಿದಾನಂದ ಬದಲಾಗ್ತಾರೆ.. ನೋಡ್ತಿರು.. ತುಂಬಾ ಆಯಾಸ ಆಗ್ತಿದೆ ಕಣೇ.. ನಾನು ಸ್ವಲ್ಪ ಹೊತ್ತು ಮಲಕ್ಕೋತೀನಿ..” ಪಲ್ಲವಿ ಮಲಗಿದಳು. ಕ್ಷಣದಲ್ಲಿ ನಿದ್ದೆ ಹತ್ತಿತ್ತು. ಶ್ವೇತ ಹೊರ ನಡೆದಳು.

ಆ ರಾತ್ರಿ ಭುಜಂಗ ಚಿದಾನಂದನೊಡನೆ ಮಾತನಾಡಿದ.. “ಶ್ವೇತಾ ಪಲ್ಲವಿಯೊಡನೆ ನಿಮ್ಮ ಬಗ್ಗೆ ಮಾತಾಡಿದಾಳೆ. ಅವಳು ಪದೇ ಪದೇ ಬಂದು ಪಲ್ಲವಿಯೊಡನೆ ಈ ರೀತಿ ಮಾತನ್ನಾಡುತ್ತಿದ್ದರೆ, ಅವಳ ಮನಸ್ಸು ಕೆಡುತ್ತದೆ. ಶ್ವೇತಾ ಬದಲಾಗ್ತಾಳೋ ಇಲ್ಲವೋ? ನೀವಾದ್ರೂ ನಿಮ್ಮ ನಿಲುವನ್ನು ಬದಲಾಯಿಸಿಕೊಳ್ಬೇಕು. ನೀವು ಸನ್ಯಾಸಿಯಂತೆ ಇರಬಲ್ಲಿರಿ. ಅವಳು ಸನ್ಯಾಸಿನಿಯಂತೆ ಬದುಕಲಾಗುವುದಿಲ್ಲವಂತೆ. ಇದು ಯಾವ್ಯಾವ ದಾರಿಯನ್ನು ಹಿಡಿಯುತ್ತೋ?.. ಅವಳ ಗಂಡನಾಗಿ ನೀವು ನಿಮ್ಮ ಕರ್ತವ್ಯವನ್ನು ನಿಭಾಯಿಸ್ಬೇಕು ಅಲ್ವಾ!.. ಒಂದೇ ಸೂರಿನಲ್ಲಿ ಬೇರೆ ಬೇರೆ ಇದ್ದರೆ, ನಿಮ್ಮ ತಾಯಿಗೂ ಅನುಮಾನ ಬರಬಹುದು ಅಲ್ವಾ!.. ನಾನು ಉಪದೇಶ ಮಾಡ್ತಿದೀನಿ ಅಂತ ಅಂದ್ಕೋಬೇಡಿ.” ಚಿದಾನಂದ ತಲೆ ತಗ್ಗಿಸಿ ನಿಂತ.

ದಿನಗಳು ತುಂಬುತ್ತಿದ್ದಂತೇ, ಪಲ್ಲವಿಗೆ ಸುಸೂತ್ರವಾಗಿ ಹೆರಿಗೆ ಆಗಿತ್ತು. ಹೆಣ್ಣು ಮಗುವನ್ನು ಹೆತ್ತಿದ್ದಳು. ಭುಜಂಗ ಸಂತೃಪ್ತಿಗೊಂಡಿದ್ದ, ಮುದ್ದಾದ ಮಗಳನ್ನು ಎತ್ತಿಕೊಂಡು ಮುದ್ದಿಸಿದ್ದ

“ಮಗಳ ಮೇಲೆ ಮಮತೆಯ ಧಾರೆಯನ್ನೇ ಹರಿಸ್ತಿದೀರಿ..” ಮೆಚ್ಚುಗೆಯಿಂದ ನುಡಿದಳು.

“ಹುಂ, ಹೆಣ್ಣು ಮಕ್ಕಳು ಯಾವಾಗ್ಲೂ ತಂದೆಗೆ ಅಚ್ಚು ಮೆಚ್ಚು.” ಮತ್ತೆ ಮುದ್ದಿಸಿದ.

“ಇವಳಿಗೂ ಗರುಡ ಮಚ್ಚೆ ಇದ್ದಿದ್ರೆ ಚೆನ್ನಾಗಿತ್ತು. ನೀವು ಆ ಮಚ್ಚೇನ ತೆಗೆಸ್ಬಾರ್ದಾಗಿತ್ತು.”

“ಅದೇನು ಮಚ್ಚೆ ಮಚ್ಚೆ ಅಂತ ಹಂಬಲಿಸ್ತೀಯಾ!.. ನನಗೆ ಅಸಹ್ಯ ಬಂದಿತ್ತು..”

“ಒಂದು ಕಾಲದಲ್ಲಿ ಹೆಚ್ಚುಗಾರಿಕೆ ಅಂತ ಹೆಮ್ಮೆಯಿಂದ ಹೇಳಿಕೊಳ್ತಿದ್ರಿ.” ಕೆಣಕಿದಳು.

“ಯಾವ ಹೆಚ್ಚುಗಾರಿಕೆಯೂ ಬೇಡ. ಸಾಮಾನ್ಯವಾಗಿದ್ರೆ ಸಾಕು... ಅದೇ ಒಂದು ಸಮಸ್ಯೆಯಾಗಿತ್ತು.”

“ನಿಮ್ಮ ಅಜ್ಜಿಯ ಮಾತು ಸುಳ್ಳಾಯಿತು. ಆದರೂ, ಈ ಮಗುವಿನ ನಾಮಕರಣದ ಸಮಯದಲ್ಲಿ ಪಾಪುಗೂ ನಾಮಕರಣ ಮಾಡ್ಬೇಕು. ಅಜ್ಜಿಗೆ ಕನಕಾಭಿಷೇಕ ಮಾಡ್ಬೇಕು..”

“ಅದನ್ನೆಲ್ಲಾ ಅಮ್ಮ ನೋಡ್ಕೋತಾಳೆ. ಆದರೆ ನನ್ನ ಮಗಳಿಗೆ ಒಂದು ಒಳ್ಳೆಯ ಹೆಸರನ್ನು

ಆಯ್ಕೆ ಮಾಡಿದೀನಿ.. "ಪನ್ನಗ" ಅಂತ.. ಎಷ್ಟು ಚೆನ್ನಾಗಿದೆ ಅಲ್ವಾ!.." ಗತ್ತಿನಿಂದ ಕೇಳಿದ.

"ಚೆನ್ನಾಗೇನೋ ಇದೆ. ಆದರೆ 'ಪಾಪು' ಇವಳಿಗಿಂತ ದೊಡ್ಡವನು. ಅವನಿಗೂ ಒಂದು ಹೆಸರನ್ನು ಆಯ್ಕೆ ಮಾಡ್ಬೇಕು ಅಂತ ಅನ್ನಿಸ್ಲಿಲ್ಲಾ! ನೀವು ಸ್ವಾರ್ಥಿ ಕಣ್ರೀ.. "ಯಾಕೆ ಈ ಪಕ್ಷಪಾತ!"

"ಹಾಗೇ ಅಂದ್ಕೋ.. ಅದೇನಿದ್ರು ನಿನ್ನ ಕೆಲಸ.. ನಂಗೆ ಆ ಕೆಲಸ ಬೇಡ.."

"ಪಾಪ ಅವನೂ ನಮ್ಮ ಮಗನೇ.. ಅವನ ತಪ್ಪೇನಿದೆ?.. ಅವನ ಮೇಲೆ ಮಮತೆಯೇ ಇಲ್ವಲ್ಲ, ಯಾಕೆ ಹೀಗಾಡ್ತೀರಿ?"

"ತಪ್ಪು ಅಂತ ನಾನೆಲ್ಲಿ ಹೇಳ್ದೆ? ಅಜ್ಜಿಯ ಕನಕಾಭಿಷೇಕಕ್ಕೆ.. ಅಪ್ಪಯ್ಯನ ವಂಶಕ್ಕೇ ಹಾಗೇ ಈ ಮನೆಯ ಉತ್ತರಾಧಿಕಾರತ್ವಕ್ಕೇ ಅವನೇ ತಾನೇ ಮುಖ್ಯ. ಇವಳು ಮಗಳಾಗಿ ಹುಟ್ಟಿ ಬೆಳೆದು, ಬೇರೆಯವರ ಮನೆಯನ್ನು ಬೆಳಗುವ ಸೊಸೆಯಾಗಿ ಹೋಗ್ತಾಳಲ್ವಾ!.. ಅಲ್ಲಿಯವರೆಗೆ ಮಾತ್ರ ನಮ್ಮ ಸ್ವತ್ತು.. ಅಲ್ಲಿಯವರೆಗೂ ನಮ್ಮ ಕೈಲಾದಷ್ಟು ಪ್ರೀತಿ ವಾತ್ಸಲ್ಯ ಕೊಡ್ಬೇಕು ಅಲ್ವಾ?.."

"ಬರೀ ಪ್ರೀತಿ, ಅಕ್ಕರೆ, ಮುದ್ದು ಮಾತ್ರ ಸಾಲದು. ವಿದ್ಯಾವಂತರನ್ನಾಗಿ ಮಾಡ್ಬೇಕು. ಅವನು ಡಾಕ್ಟರಾಗಲಿ ಅಂತ ನನ್ನಾಸೆ.. ಯಶ, ಗೌರವ ಹಣ ಎಲ್ಲಾ ಸಿಗುತ್ತೆ.. ಹ್ಞಾಂ ಅವನಿಗೆ 'ಯಶಸ್' ಅಂತ ಹೆಸರನ್ನಿಟ್ರೆ ಹೇಗೆ!.. ಚೆನ್ನಾಗಿದೆ ಅಲ್ವಾ! ನನ್ನ ತಂದೆ ಯಶವಂತರಾಯರು.. ಅವರ ನೆನಪಿನಲ್ಲಿ ಯಶೂ ಅಂತ ಕರೆಯೋಣ.. ಏನಂತೀರಿ?" ಅವಳು ಉತ್ಸಾಹದಿಂದ ಕೇಳಿದಾಗ ಇವನು ಬೇರೇನನ್ನೋ ಯೋಚಿಸುತ್ತಿದ್ದ.. ಅಜ್ಞಾನವೋ, ಮುಗ್ಧತೆಯೋ..ಪಲ್ಲವಿ ನಿರಾಳವಾಗಿದಾಳೆ. ಅಷ್ಟು ಸಾಕು ಎಂದುಕೊಂಡ.

ಯಶವಂತರಾಯರು-ರಾಜಲಕ್ಷ್ಮಿ ಸ್ವಂತ ತಂದೆ ತಾಯಿಯರು. ಆದರೂ ಮಂದಾಕಿನಿ 'ಬಾಡಿಗೆ ತಾಯಿ'..ಈಗ ಈ 'ಯಶಸ್' ಗೆ ತಾನೇ ಬಾಡಿಗೆ ತಾಯಿ ಅಂತ ತಿಳಿದರೆ ಈ ಉಲ್ಲಾಸ, ಉತ್ಸಾಹ ಯಾವುದೂ ಇರುವುದಿಲ್ಲ, ತಾನೇ ಹೊತ್ತು ಹೆತ್ತ ಮಗುವನ್ನು ದ್ವೇಷಿಸಲೂ ಆಗದೇ, ಪೋಷಿಸಲೂ ಆಗದೇ ಇಬ್ಬಗೆಯಲಿ ನರಳುವುದು ಖಂಡಿತಾ. ಮಂದಾಕಿನಿ ಬಾಡಿಗೆ ತಾಯಿ ಆದ್ರೇನಂತೆ.. ತಾಯಿಯಷ್ಟೇ ಪ್ರಮುಖಳು ಅಂತ ತಾನು ಬುದ್ಧಿವಾದ ಹೇಳಿದ್ದುಂಟು. ಆದರೆ, ಈಗ ಬೇರೊಂದು ರೀತಿಯಲ್ಲಿ ಅದೇ ಸ್ಥಿತಿ ಪುನರಾವರ್ತನೆಯಾಗಿದೆ.. ಎಂಥಾ ವಿಪರ್ಯಾಸ! ಈಗ ಕಾಲವೇ ಎಲ್ಲವನ್ನೂ ಸರಿ ಮಾಡಬೇಕಾಗಿದೆ.. ಪಲ್ಲವಿ ತನ್ನ ಪತ್ನೀ.. ಆದರೆ ಅವಳು ಹೆತ್ತಿರುವ ಮಗುವನ್ನು ಮಗನೆಂದು ಒಪ್ಪಿಕೊಳ್ಳಲು ಕಷ್ಟವೇಕೆ?.. ಹುಡುಕಾಟವೇಕೆ.. ಈ ತಾಕಲಾಟ ಪೇಚಾಟಗಳೇಕೆ?.." ರೂಮಿನಿಂದ ಹೊರಬಂದು ಜಗುಲಿಯ ಮೇಲೆ ನಿಂತ.

"ಭುಜೀ.. ನಿನ್ಮಗ ತುಂಬಾ ಹಠ ಮಾಡ್ತಾನಪ್ಪಾ.. ನೀನೇ ಸಮಾಧಾನ ಮಾಡು" ಎನ್ನುತ್ತಾ ವೈದೇಹಿ ಬಂದು ನಿಂತಳು. ಭುಜಂಗನ ಕೈಗಳು ಅವನಿಗೆ ಅರಿವಿಲ್ಲದೆಯೇ ಮುಂದಕ್ಕೆ ಚಲಿಸಿದವು. ಪಾಪು ಅವನ ತೋಳಿನೊಳಕ್ಕೆ ಜಿಗಿದು, ಅವನನ್ನು ಬಲವಾಗಿ ಅಪ್ಪಿಕೊಂಡ. ಯಶಸ್‌ನನ್ನು ಪಲ್ಲವಿಗಾಗಿ ತನ್ನ ಮಗನೆಂದು ಒಪ್ಪಿಕೊಂಡ.

* * *





ಬಾಡಿಗೆ ತಾಯಿಗೆ ಮಗಳಾಗಿ ಹುಟ್ಟಿದ ಚೈತ್ರಳಿಗೆ ಆ ಪದ್ಧತಿಯನ್ನು ಕಂಡರೇ ಆಗುವುದಿಲ್ಲ. ಈ ಕಾರಣದಿಂದ ಆತಂಕಗೊಂಡಿರುತ್ತಾಳೆ. ಇದನ್ನು ದುರಂಹಕಾರ ಎಂದು ಬಗೆದು ಹೇಮಾ, ಮೋಸದಿಂದ ಚೈತ್ರ ತನ್ನ ಮಗುವಿಗೆ ಬಾಡಿಗೆ ತಾಯಿಯಾಗುವಂತೆ ಮಾಡಿರುತ್ತಾಳೆ. ಈ ವಿಷಯ ತಿಳಿದ ಭುಜಂಗನಿಗೆ ಹುಟ್ಟಿದ ಮಗು ತನ್ನದೇ ಅಂತ ತಿಳಿದಿದ್ದರೂ, ಒಪ್ಪಿಕೊಳ್ಳಲು ಇಷ್ಟಪಡುವುದಿಲ್ಲ. ಬಾಡಿಗೆಯ ತಾಯಿಯ ಮಗಳು, ತನಗೆ ಅರಿವಿಲ್ಲದೇನೇ ಬಾಡಿಗೆ ತಾಯಿಯಾಗಿ ಪಾತ್ರವನ್ನು ವಹಿಸುವುದು ಕಾದಂಬರಿಯ ಮುಖ್ಯ ವಿಷಯ. ಆದರೆ ಅದಕ್ಕೆ ಸುತ್ತಿಕೊಂಡಂತೆ, ಹುಟ್ಟಿಕೊಳ್ಳುವ ಸಮಸ್ಯೆಗಳು ಎಲ್ಲೆಲ್ಲಿ, ಹೇಗೆ ಹೇಗೆ ತಿರುವುಗಳನ್ನು ಪಡೆಯುತ್ತದೆ ಎನ್ನುವುದನ್ನು ಓದುಗರೇ ಓದಿ ತಿಳಿಯಿರಿ.

ಚೈತ್ರ ಪ್ರಕಾಶನ
ನೆಲೆ, ನಂ. 22, 6ನೇ ಅಡ್ಡರಸ್ತೆ, ಕಾಮಾಕ್ಯ ಬಡಾವಣೆ
ಬೆಂಗಳೂರು– 560 085.

ಕಾದಂಬರಿ / Novel

ಬೆಲೆ : ₹ 110